# ವಸ್ಮೋಲ್

ನೆರೆ ಕೂದಲನ್ನು
ಅಚ್ಚುಕಪ್ಪಾಗಿ ಮಾಡುತ್ತದೆ

ವಸ್ಮೋಲ್ – ವೈಜ್ಞಾನಿಕವಾಗಿ ತಯಾರಿಸಿದ, ಒಂದೇ ಸೂತ್ರದಲ್ಲಿ ಕೂದಲನ್ನು ಕಪ್ಪುಗೊಳಿಸುವ, ಕೇಶಾರೋಗ್ಯವರ್ಧಕ, ಪರಿಮಳಯುಕ್ತ ಏಕಮೇವ ತೈಲ – ಆದರೂ ಉತ್ತಮ ಕೇಶತೈಲಕ್ಕಿಂತ ಇದರ ಬೆಲೆ ಹೆಚ್ಚಿಗಿಲ್ಲ.

## ವಸ್ಮೋಲ್

ನೆರೆಗೂದಲನ್ನು ನಿಜವಾಗಿ
ಅಚ್ಚು ಕಪ್ಪಾಗಿ ಮಾಡುತ್ತದೆ

ಹದವಾದ ತೈಲ ರೂಪದಲ್ಲಿ ಮತ್ತು ಪೋಮೆಡ ರೂಪದಲ್ಲಿ, ಎಲ್ಲ ಕೆಮಿಸ್ಟರಲ್ಲಿ ಮತ್ತು ಅಂಗಡಿಗಳಲ್ಲಿ ದೊರೆಯುತ್ತದೆ




ಲ್ಯಾನೊಲಿನಿಂದ
ತುಂಬಿರುವ
ವಾಸ್ಮೊಲ್ ನಿಮ್ಮ
ಕೂದಲಿಗೆ ಅತ್ಯಂತ
ಹಿತಕರವಾಗಿದೆ

ತಯಾರಿಕೆಗಾರರೂ :
**ಹಾಯಜೀನಿಕ್ ರಿಸರ್ಚ್ ಇನ್‌ಸ್ಟಿಟ್ಯೂಟ್**
ಪೋಸ್ಟ್ ಬಾಕ್ಸ 1192, ಮುಂಬಯಿ – 1.







Vasmol




Vasmol

# ದಿನದ ಪ್ರತಿಯೊಂದು ತಾಸು
# ಅಪ್ಪಟ ಕಾಂತಿಯುತವಾದದ್ದು

ಇದರ ಗುಟ್ಟು ಆರೋಗ್ಯಕರವೂ ಉತ್ಸಾಹದಾಯಕವೂ ಆದ ಮೈಸೂರ ಸ್ಯಾಂಡಲ್ಲಿನಿಂದ ತೊಳೆಯುವಾಗ ಇರುತ್ತದೆ. ಮೈಸೂರ ಸ್ಯಾಂಡಲ್ ಸಾಬೂನಿನ ಸಾರವಂತ ಮೃದುವಾದ ಪರಿಮಳಯುಕ್ತ ನೊರೆಯು ಅದರ ಅಸಮಾನವಾದ, ಸಂಪೂರ್ಣವಾಗಿ ಶುದ್ಧಮಾಡುವ ಗುಣದಲ್ಲಿರುತ್ತದೆ. ಮತ್ತು ಅದುವೇ, ಇಡೀ ದಿವಸ ನಿಮ್ಮನ್ನು ಸದಾಕಾಲ ಗಂಧದ ಪರಿಮಳದಿಂದ ಶುದ್ಧವಾಗಿಡುತ್ತದೆ.



**MYSORE Sandal SOAP**




ಚಿಕಿತ್ಸಕ್ಕೆ ಬಳಕೆಗಾರರಿಗೆ
ವಿಶಿಷ್ಟ ಸ್ನಾನದ
ಸಾಬೂನು

## ಗವರ್ನಮೆಂಟ ಸೋಪ ಫ್ಯಾಕ್ಟರಿ
ಬೆಂಗಳೂರು

# ಕಸ್ತೂರಿ

## ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ ನೆ ದಿನಾಂಕ ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ್–ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಏನದು ?
ಶ್ರೀ ಬಿ. ಜಿ. ವುಡಿವುನ್
ಕೃಪೆಯಿಂದ

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

Kasturi, January 1961


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕ ಸಂಗ್ರಹ

# ಕಸ್ತೂರಿ



ವರ್ಷ ೫ ಜನೆವರಿ ೧೯೬೧ ಸಂಚಿಕೆ ೫



## ಬ್ರಿಟಿಷ್ ರಾಣಿ ಎರಡನೇ ಎಲಿಜಬೆತ್

ಮೂವರು ರಾಣಿಯರ ಆಳಿಕೆಗಳಲ್ಲಿ ಬ್ರಿಟಿಷ್ ಸಾಮ್ರಾಜ್ಯ ನವ ಮನ್ವಂತರಗಳನ್ನು ಕಂಡದ್ದು ಒಂದು ವೈಶಿಷ್ಟ್ಯ. ಮೊದಲನೇ ಎಲಿಜಬೆತ್ ಕಾಲದಲ್ಲಿ ಬ್ರಿಟಿಶ್ "ಕಡಲ ನಾಯಿ"ಗಳು (sea dogs) ಸಪ್ತ ಸಾಗರಗಳಲ್ಲಿ ಬ್ರಿಟಿಶ್ ನೌಕಾಪಡೆಯ ಪ್ರಭುತ್ವವನ್ನು ಸ್ಥಾಪಿಸಿ ಭಾವಿ ಸಾಮ್ರಾಜ್ಯಕ್ಕೆ ತಳಪಾಯ ಹಾಕಿದರು. ವಿಕ್ಟೋರಿಯಾ ರಾಣಿಯ ಕಾಲದಲ್ಲಿ ಅದು ಪರಿಪಾಕ ಹೊಂದಿ "ಸೂರ್ಯಾಸ್ತವಾಗದ ಸಾಮ್ರಾಜ್ಯ"ವಾಗಿ ಪೂರ್ಣಾವಸ್ಥೆಗೆ ಮುಟ್ಟಿತು; ಬ್ರಿಟಿಶ್ ರಾಣಿ ಭಾರತದ ಸಾಮ್ರಾಜ್ಞಿ ಎಂದು ಘೋಷಣೆಯಾಯಿತು. ಇಂದು ಆಳುತ್ತಿರುವ ಎರಡನೇ ಎಲಿಜಬೆತ್ ರಾಣಿ ಆ ಸಾಮ್ರಾಜ್ಯವು "ಕಾಮನ್‌ವೆಲ್ತ್"—ಸಮಾನಸಂಪದ—ಆಗಿ ಪರಿವರ್ತನೆ ಹೊಂದಿದ್ದಕ್ಕೆ ಸಾಕ್ಷಿಯಾಗಿದ್ದಾಳೆ. ಅವಳು ಸಮ್ರಾಜ್ಞಿಯಾಗಿ ಉಳಿದಿಲ್ಲ; ಬರಿ ಜಗತ್ತಿನ ಅತಿ ವಿಶಾಲ ಮತ್ತು ಅತಿ ವೈವಿಧ್ಯಪೂರ್ಣವಾದ ಜನಾಂಗಕೂಟವೊಂದರ ಸ್ನೇಹ ಒಕ್ಕಟ್ಟುಗಳ ಪ್ರತೀಕವಾಗಿದ್ದಾಳೆ ಮಾತ್ರ.

ಆ ಸಾಮ್ರಾಜ್ಯ ದರ್ಪ ಉಳಿದಿಲ್ಲ, ಆ ದೇಶ ಇಂದು ಜಗತ್ತಿನ ಅತಿ ಸಂಪನ್ನ ಅಥವಾ ಅತಿ ಬಲಿಷ್ಠ ರಾಜ್ಯ ಕೂಡ ಅಲ್ಲ. ಆದರೂ— ಅಥವಾ

ಆದ್ದರಿಂದಲೆಯೊ— ಎರಡನೇ ಎಲಿಜಬೆತ್ ಜಗತ್ತಿನಲ್ಲಿ ಉಳಿದಾವ ಬ್ರಿಟಿಶ್ ಮುಕುಟ ಧಾರಿಗಿಂತಲೂ-ಏಕೆ, ಯಾವ ರಾಜ-ರಾಣಿಯರಿಗಿಂತಲೂ—ಜನಪ್ರಿಯಳಾಗಿದ್ದಾಳೆ. ಪಟ್ಟಾಭಿಷೇಕವಾಗಿ ಏಳೇ ವರ್ಷಗಳಲ್ಲಿ ಅವಳು ಕಾಮನ್‌ವೆಲ್ತ್‌ನಲ್ಲಿ ೮೦,೦೦೦ ಮೈಲುಗಳಿಗಿಂತ ಹೆಚ್ಚು ಸಂಚಾರ ಮಾಡಿದ್ದಾಳೆ. ಇತಿಹಾಸದಲ್ಲಿ ಯಾವ ದೇಶದ ಯಾವ ದೊರೆಯೂ ಇಷ್ಟು ಸಂಚರಿಸಿಲ್ಲ.

ಮತ್ತು ಜನ ಅವಳನ್ನು ಎಲ್ಲೆಲ್ಲಿಯೂ ಆನಂದದಿಂದ ಸ್ವಾಗತಿಸಿದ್ದಾರೆ. ಭಯಭರಿತವಲ್ಲದ ಭಕ್ತಿಯನ್ನು, ಆದರವನ್ನು ಪ್ರಕಟಿಸಿದ್ದಾರೆ. ೧೯೫೪ ರಲ್ಲಿ ಆಸ್ಟ್ರೇಲಿಯದ ರಾಜಧಾನಿ ಸಿಡ್ನಿಯಲ್ಲಿ ಜನ ಜಂಗುಳಿ ಅವಳನ್ನು ಎದುರ್ಗೊಳ್ಳುವ ಉತ್ಸಾಹದಲ್ಲಿ ಎಂಟು ಸಲ ಪೋಲೀಸರ ವ್ಯೂಹವನ್ನು ಮುರಿದು ನುಗ್ಗಿ ಬಂದು ಅವಳನ್ನು ಅಕ್ಕರೆಯ "ರಿಜ್" ಎಂಬ ಹೆಸರಿಂದ ಕೂಗಿತು. ಜಮೈಕಾದಲ್ಲೊಬ್ಬ ರಾಜಭಕ್ತ ಆದರಾತಿರೇಕದಿಂದ ತನ್ನ ಕೋಟು ಕಳಚಿ ಅವಳ ದಾರಿಯಲ್ಲಿ ಹಾಸಿ ಅವಳ ಹೆಜ್ಜೆ ಅದರ ಮೇಲೆ ಮೂಡಬೇಕೆಂದು ಪ್ರಾರ್ಥಿಸಿದ. ಕೆನೆಡಾದಲ್ಲಿ ಜನಪ್ರಿಯ ಟೆಲಿವಿಜನ್ ತಾರೆಯಾದ ಜಾಯ್ಸ್ ಡೆವಿಡ್‌ಸನ್ನಳು, "ರಾಣಿ ಬಂದರೆ ಬರಲಿ, ನನಗೇನು? ಹೆಚ್ಚಿನ ಕೆನೇಡಿಯನ್ನರ ಹಾಗೆ ನಾನೂ ಅದನ್ನು ಕಡೆಗಣಿಸುತ್ತೇನೆ" ಎಂದು ಬಹಿರಂಗವಾಗಿ ಹೇಳಿದಾಗ ರೊಚ್ಚಿಗೆದ್ದ ಜನತೆಯಿಂದ ಅವಳನ್ನು ನೇಮಿಸಿಕೊಂಡ ಟೆಲಿವಿಜನ್ ಕಂಪನಿಗೆ ಕೋಪೋದ್ರಿಕ್ತ ಫೋನ್ ಕರೆಗಳ ಸುರಿಮಳೆಯೇ ಬಂತು. ಪಾಪ, ಬಡ ಡೇವಿಡ್‌ಸನ್ ಜನರ ಕ್ರೋಧದಿಂದ ಪಾರಾಗಲು ಎಷ್ಟೋ ಕಾಲ ತಲೆ ಮರೆಸಿಕೊಂಡಿರಬೇಕಾಯಿತು.

ಇಂಗ್ಲೆಂಡಿನ ರಾಣಿ ಮತ್ತು ಕಾಮನ್‌ವೆಲ್ತಿನ ಐಕ್ಯದ ಸಂಕೇತವಾದ ಎರಡನೇ ಎಲಿಜಬೆತ್ ಸುಂದರಿಯಾದ ರಮಣಿ. ಅಷ್ಟು ಎತ್ತರವೂ ಅಲ್ಲ, ಅಷ್ಟು ಕುಳ್ಳೂ ಅಲ್ಲವಾದ ೫ ಅಡಿ ೪ ಅಂಗುಲ ಗಾತ್ರದ ಈ ತರುಣಿಯು ಕಂದುಗೂದಲು, ಬಿಲ್ಲುಹುಬ್ಬು, ನೇರವಾಗಿ ನೋಡುವ ಅಕುಟಿಲ ಬೂದಿಬಣ್ಣದ ನೇತ್ರಗಳು, ಅಗಲವಾದರೂ ಬಚ್ಚಬಾಯಿಯೆನ್ನಬಾರದ ಬಾಯಿ, ನೇರವೂ ಉದ್ದವೂ ಆದ ಮೇಲ್ದುಟಿ, ಉದ್ದವಾದ ಕೊರಳನ್ನು ಹಂಸಸಮಾನವಾದ ಗೌರವದಿಂದ ನಿಲಿಸಿಕೊಳ್ಳುವ ಭಂಗಿ ಇವುಗಳಿಂದ ರಾಣಿಯಲ್ಲಿರಬೇಕಾದ ಗಾಂಭೀರ್ಯದೊಡನೆ ಹೆಂಗಸಿನಲ್ಲಿರಬೇಕಾದ ಲಾವಣ್ಯವನ್ನು, ಸತ್ತಾಧಾರಿಯಲ್ಲಿರಬೇಕಾದ ದಾರ್ಢ್ಯದೊಡನೆ ಪ್ರಜಾವತ್ಸಲೆಯಲ್ಲಿರಬೇಕಾದ ಮಾರ್ದವವನ್ನು ಪ್ರಕಟಿಸುತ್ತಾಳೆ. ಸ್ಪಷ್ಟವಾದ ಅವಳ ಕಂಠಧ್ವನಿಯಲ್ಲಿ ತಾರುಣ್ಯ ನಿನದಿಸುತ್ತದೆ; ಅವಳ ಬೀಸು ನಡಿಗೆಯಲ್ಲೂ ಮೆಲ್ಪು ಮೆರೆಯುತ್ತದೆ.

ರಾಣಿ ಎಲಿಜಬೆತ್ ಏಪ್ರಿಲ್ ೨೧, ೧೯೨೬ ರಂದು ರಾಜಪುತ್ರ ಜಾರ್ಜ್ (ಡ್ಯೂಕ್ ಆಫ್ ಯಾರ್ಕ್) ಮತ್ತು ರಾಜಪುತ್ರಿ ಎಲಿಜಬೆತ್‌ಳ ಮಗಳಾಗಿ ಹುಟ್ಟಿದಾಗ ಅವಳು ಬ್ರಿಟಿಶ್ ಸಿಂಹಾಸನಕ್ಕೆ ವಾರಸುದಾರಳಾಗಬಹುದೆಂದು ಊಹಿಸುವಂತಿರಲಿಲ್ಲ. ಅಜ್ಜ ಐದನೇ ಜಾರ್ಜ್ ಇನ್ನೂ ಬದುಕಿದ್ದರು; ಅವರ ಜ್ಯೇಷ್ಠಪುತ್ರ—ಮುಂದೆ ಎಂಟನೇ ಎಡ್ವರ್ಡನಾಗಲಿದ್ದವ—ಯುವರಾಜನಾಗಿದ್ದ. ಇವಳ ತಂದೆ ಕಿರಿಯ ರಾಜಕುಮಾರರಾಗಿದ್ದರು ಮಾತ್ರ. ಆದರೂ ಜಿಪ್ಸಿ ಲೀ ಎಂಬ ಕೊರವಂಜಿಯೊಬ್ಬಳು ಇವಳ ತಾಯಿಯ ಕೈನೋಡಿ "ನೀನು ರಾಣಿಯಾಗುವಿ, ನಿನ್ನ ಮಗಳು ಚಕ್ರವರ್ತಿನಿಯಾಗುವಳು" ಎಂದು ಭವಿಷ್ಯ ಹೇಳಿದ್ದಳಂತೆ. ಅದು ನಿಜವಾಗಿಯೆ ಪರಿಣಮಿಸಿತು. ಐದನೇ ಜಾರ್ಜರ ನಂತರ ಎಂಟನೇ ಎಡ್ವರ್ಡರು ಪಟ್ಟವೇರಿದ ಕೆಲ ಕಾಲದಲ್ಲೇ ಸಿಂಹಾಸನತ್ಯಾಗ ಮಾಡಿದ್ದರಿಂದ ಎರ-

ಡನೇ ರಾಜಕುಮಾರ—ಎಲಿಜಬೆತ್‌ಳ ತಂದೆ ಆರನೇ ಜಾರ್ಜರಾಗಿ ಪಟ್ಟಕ್ಕೇರಿದರು. ಅವರ ಜ್ಯೇಷ್ಠ ಪುತ್ರಿ ಉತ್ತರಾಧಿಕಾರಿಯಾದಳು.

೨೧ ನೇ ವಯಸ್ಸಿಗೆ ಎಲಿಜಬೆತ್ ಮದುವೆಯಾದಳು. ಗ್ರೀಕ್ ರಾಜಕುಮಾರನಾದ ಫಿಲಿಪ್ ಮೌಂಟ್‌ಬ್ಯಾಟನ್, ಡ್ಯೂಕ್ ಆಫ್ ಎಡಿನ್‌ಬರೊ ಎಂಬ ಪದವಿಯನ್ನೂ ಭಾವಿ ಚಕ್ರವರ್ತಿನಿಯ ಕೈಯನ್ನೂ ಪಡೆದ. ನಾಲ್ಕು ವರ್ಷ ದಾಂಪತ್ಯ ಸುಖವನ್ನು ಅನುಭವಿಸಿ ಎರಡು ಮಕ್ಕಳ ತಾಯಿಯಾಗಿದ್ದಳಷ್ಟೇ, ಅವಳ ತಂದೆ ಪರಂಧಾಮವನ್ನೈದಿದ್ದರಿಂದ ರಾಜ್ಯದ ಭಾರ ಇವಳ ಎಳೆಯ ಹೆಗಲ ಮೇಲೆ ಬಿತ್ತು. ೧೯೫೩ ರಲ್ಲಿ ಅವಳ ಪಟ್ಟಾಭಿಷೇಕವಾದಂದಿನಿಂದ ನಿರಂತರವಾಗಿ ಬದಲಾಗುತ್ತಿರುವ ಸಾಮ್ರಾಜ್ಯದ ಸ್ವರೂಪಕ್ಕನುಗುಣವಾಗಿ ತನ್ನ ನಡೆನುಡಿಗಳನ್ನು ಪರಿವರ್ತಿಸಿಕೊಂಡು ಜಗತ್ತಿನ ಅತಿ ಗುರುತರವಾದ ಹೊಣೆಯೊಂದನ್ನು ಅವಳು ನಿರ್ವಹಿಸುತ್ತಿದ್ದಾಳೆ.

ಈ ಕಾರ್ಯಕ್ಕೆ ಅವಳಿಗೆ ಮೊದಲಿಂದಲೇ ತರಬೇತಿ ದೊರೆಯುತ್ತ ಬಂದಿದೆ. ಅವಳ ತಂದೆ ಆರನೇ ಜಾರ್ಜರು ಅತ್ಯಂತ ಕರ್ತವ್ಯನಿಷ್ಠ ರಾಜರಾಗಿದ್ದರು. ಅವರು ರಾಣಿಯಾಗಲಿರುವ ಮಗಳಲ್ಲಿ ಅರಸುತನದ ಕಠೋರ ಶಿಸ್ತನ್ನು ಸಂಚಯಗೊಳಿಸಲು ಸರ್ವ ಪ್ರಯತ್ನ ಮಾಡಿದ್ದರು. ೧೮ ತುಂಬುವುದರೊಳಗೆ, ತಂದೆ ವಿದೇಶ ಸಂಚಾರದಲ್ಲಿದ್ದಾಗ ಕೌನ್ಸಿಲ್ ಆಫ್ ಸ್ಟೇಟ್ ಸದಸ್ಯಳಾಗಿ ಕೆಲಸ ಮಾಡುವಷ್ಟು ಅವಳು ಪರಿಪಕ್ವತೆಯನ್ನು ಪಡೆದುಬಿಟ್ಟಿದ್ದಳು. ಕಾಮನ್‌ವೆಲ್ತ್ ಪ್ರಜೆಗಳಿಗೆ ದರ್ಶನವಿತ್ತು ಅದರ ಐಕ್ಯವನ್ನು ಬೆಸೆಯುವ ಕರ್ತವ್ಯವನ್ನು ಅವಳು ಸಿಂಹಾಸನವೇರುವ ಮೊದಲೇ ಪ್ರಾರಂಭಿಸಿದ್ದಳು. ತಂದೆ ಮೃತರಾಗುವಾಗ ಅವಳು ಅವರ ಹಾಸಿಗೆಯ ಬಳಿ ಇರಲಿಲ್ಲ, ದೂರದ ಕೆನ್ಯಾದಲ್ಲಿ ಸಂಚಾರ ಮಾಡುತ್ತಿದ್ದಳು.

ಅವಳು ಕಲಿಯಬೇಕಾಗಿ ಬಂದ ಅತಿ ಕಷ್ಟದ ಕೆಲಸಗಳಲ್ಲಿ ನಸುನಗುವುದೊಂದು. ಅವಳ ಯಾವ ಚಿತ್ರವನ್ನೇ ನೋಡಿರಿ, ಯಾವ ಸಾರ್ವಜನಿಕ ಸಮಾರಂಭದಲ್ಲೇ ಅವಳ ದರ್ಶನ ತೆಗೆದುಕೊಳ್ಳಿರಿ, ಒಂದು ಮೃದುವಾದ ನಗು ತುಟಿಗಳಲ್ಲಿ ಅರಳಿರುವುದನ್ನು ಕಾಣುವಿರಿ. ಇದನ್ನು ತಂದುಕೊಳ್ಳಬೇಕಾದರೆ ಅವಳೆಷ್ಟು ಕಠೋರ ತಪಸ್ಸು ಮಾಡಬೇಕಾಯಿತೆಂದು ಮಾತ್ರ ಬಲ್ಲವರೇ ಬಲ್ಲರು. ಅವಳ ಹೆನವೇರಿಯನ್ ಕುಲದವರು ಆರಂಭದಿಂದ ಇಂದಿನವರೆಗೂ ಬಿಗಿಯಾದ ತುಟಿಯುಳ್ಳವರು. ಬಕಿಂಗ್ಯಾಂ ಅರಮನೆಯಲ್ಲಿರುವ ಅವಳ ಪೂರ್ವಜರ ಚಿತ್ರಗಳ ಶ್ರೇಣಿಯನ್ನು ನೋಡಿದರೆ ನಿಮಗೆ ಈ ಉಗ್ರ ಆನುವಂಶಿಕ ಚೆಹರೆ ಕೂಡಲೆ ಗಮನಕ್ಕೆ ಬರುವುದು. ನಿರಂತರವಾದ ನಸುನಗೆ ಹೆನವೇರಿಯನ್ ಕುಲದ ಆಸ್ತಿಯಲ್ಲ. ತನ್ನಷ್ಟಕ್ಕೆ ತಾನು ವಿಚಾರ ಅಥವಾ ಕಾರ್ಯಮಗ್ನಳಾಗಿರುವಾಗ ಎಲಿಜಬೆತಳನ್ನು ಅಕಸ್ಮಾತ್ತಾಗಿ ನೋಡಿದರೆ ನೀವು ಆ ಸೌಮ್ಯ ನಸುನಗೆಯ ಅಭಾವವನ್ನೇ ಕಾಣುವಿರಿ. ಆದರೆ ಕೋಟ್ಯಂತರ ಜನ ಪ್ರಜೆಗಳ ಪ್ರೀತಿಯ ಆರಾಧ್ಯ ದೇವತೆಯಾದ ಅವಳು ಅವರ ಮುಂದೆ ನಸುನಗಲೇ ಬೇಕು. ಒಂದು ಕಾರ್ಯಕ್ರಮ ಕೆಲ ನಿಮಿಷಗಳದಿರಬಹುದು, ಹಲ ತಾಸುಗಳದಿರಬಹುದು, ಅವಳು ಆ ನಗೆಯನ್ನು ಮುಖದಿಂದ ಕದಲಿಸುವಂತಿಲ್ಲ. ಕದಲಿಸಿದರೆ ರಾಣಿಗೆ ಕೋಪ ಬಂದಿದೆ ಎಂದು ಪತ್ರಿಕೆಗಳು ವರದಿ ಮಾಡಿಬಿಡಬಹುದು. ಹಾಗಾದರೆ ಅದು ಸಮಾರಂಭದ ವ್ಯವಸ್ಥಾಪಕರಿಗೆ ಮರಣದಂಡನೆಗೆ ಸಮಾನವಾದದ್ದೇ ಸೈ. ತಾಸುಗಟ್ಟಳೆ ನಸುನಗುತ್ತ ಅವಳ ಮುಖದ ಸ್ನಾಯುಗಳು ನೊಂದು ಕಂಪಿಸುವುದುಂಟು. ಆದರೂ ಅವಳು ಅವುಗಳನ್ನು ಸಡಿಲು ಬಿಡುವಂತಿಲ್ಲ— ನಸುನಗು ಬರಿ ಹಲ್ಲು ಕಿರಿತವಾಗಲು ಕೊಡುವಂತೆಯೂ ಇಲ್ಲ. ಅದು ಯಾವಾಗಲೂ ಅಪ್ಪಟ

ನಗುವಿನಂತೆಯೆ ಕಾಣಿಸಬೇಕು.

ಖಾಸಗೀ ಜೀವನದಲ್ಲಿ ಎಲಿಜಬೆತ್ ಬೇರಾವ ತರುಣಿಯಂತೆಯೆ ಇದ್ದಾಳೆ. ಅವಳ ವರ್ತನೆ ಮೃದುವಾಗಿ ಕರುಣಾಪೂರ್ಣವಾಗಿದೆ. ಅವಳಲ್ಲಿ ದರ್ಪವಿಲ್ಲ, ತನ್ನ ಕಾರ್ಯಗಳ ತಪ್ಪು ತಡೆಗಳನ್ನು ತಾನೇ ಬಲುಬೇಗ ಗುರುತಿಸಿಕೊಳ್ಳುವ ಅವಳು ಪರರ ಟೀಕೆಗಳನ್ನು ತುಂಬ ಗಮನಿಸುತ್ತಾಳೆ. ನಾರೀ ಸಹಜವಾದ ಲಜ್ಜೆಗೂ ಅವಳಲ್ಲಿ ಕೊರತೆಯಿಲ್ಲ. ಗಂಡನನ್ನೂ ಮಕ್ಕಳನ್ನೂ ತುಂಬ ಪ್ರೀತಿಸುತ್ತಾಳೆ. ಪರರ ದೋಷವೆಣಿಸುವುದರಲ್ಲಿ ಅವಳು ತುಂಬ ಹಿಂದೆ. ಮರಣದಂಡನೆಗೆ ಗುರಿಯಾದ ಯಾರಾದರೊಬ್ಬ ಪಾತಕಿಗೆ ಕ್ಷಮಾದಾನ ಮಾಡಬೇಕೆಂದು ಅವಳ ಮಂತ್ರಿಗಳು ಸೂಚಿಸಿದರೆ ಅದಕ್ಕೆ ಅಂಕಿತವಿಕ್ಕುವುದಕ್ಕಿಂತ ಆನಂದದ ಕರ್ತವ್ಯ ಅವಳಿಗೆ ಬೇರೊಂದಿಲ್ಲ. ಪ್ರಾಣಿಗಳ ಮೇಲೆ–ವಿಶೇಷತಃ ಕುದುರೆಗಳ ಮೇಲೆ ಅವಳಿಗೆ ಬಲು ಮಮತೆ. ಪಟ್ಟಕ್ಕೆ ಬಂದ ಮೇಲೆ ಅವಳು ಒಂದು ಪ್ರಾಣಿದಯಾ ಸಂಘಕ್ಕೆ ಧನ ಸಹಾಯವಿತ್ತು ಆ ಹಣವನ್ನು ಯಾವುದಾದರೊಂದು ಕುದುರೆಯನ್ನು ಕಟುಕರ ಕೈಯಿಂದ ಉಳಿಸಲು ವಿನಿಯೋಗಿಸಬೇಕೆಂದು ಸೂಚಿಸಿದಳು. ಹೀಗೆ ಉಳಿಸಲ್ಪಟ್ಟ ಆರು ವರ್ಷದ ಕುದುರೆಗೆ "ರಿಜೀನಾ" (ರಾಜ್ಞಿ) ಎಂದೇ ಹೆಸರಿಡಲಾಗಿದೆ. ಅವಳಿಗೆ ತಮಾಷೆ ಎನಿಸಿದಾಗ ಕೈಗಳನ್ನು ಮೊಣಕಾಲುಗಳ ನಡುವೆ ಸೇರಿಸಿ ತಲೆ ಕೊಡವಿ ಗಹಗಹಿಸಿ ನಕ್ಕುಬಿಡುತ್ತಾಳೆ.

೨೧ ತುಂಬಿದಾಗ ಅವಳು ಕಾಮನ್‌ವೆಲ್ತಿಗೆ ಕೊಟ್ಟ ಸಂದೇಶದಲ್ಲಿ "ನನ್ನ ಆಯುಷ್ಯವನ್ನೆಲ್ಲ— ಅದು ದೀರ್ಘವಾಗಿರಲಿ, ಹ್ರಸ್ವವಾಗಿರಲಿ— ನಿಮ್ಮ ಸೇವೆಗಾಗಿ ಮುಡಿಪಿಟ್ಟಿದ್ದೇನೆಂದು ಇಂದು ನಿಮ್ಮ ಮುಂದೆ ಘೋಷಿಸುತ್ತೇನೆ" ಎಂದಿದ್ದಳು. ೬೪ ಕೋಟಿ ಪ್ರಜೆಗಳ ಕೂಟವಾದ ಕಾಮನ್‌ವೆಲ್ತಿನ ಮುಖ್ಯಸ್ಥಳಾಗಿರುವವಳ ಕಾರ್ಯಕ್ಕೆ ಇಂಥ ಏಕನಿಷ್ಠೆಯೆ ಬೇಕು. ಏಕೆಂದರೆ ರತ್ನಖಚಿತ ಕಿರೀಟವನ್ನು ಧರಿಸುವುದು, ನೂರಾರು ಕೋಣೆಗಳುಳ್ಳ ವೈಭವಪೂರ್ಣ ಅರಮನೆಯಲ್ಲಿ ಸುಖ ಸುಪ್ಪತ್ತಿಗೆಯಲ್ಲಿ ಓಲಾಡುವುದು—ಇದು ಇಂದು ಬ್ರಿಟಿಷ್ ಅರಸರ ಜೀವನವಾಗಿಲ್ಲ. ಅದರಲ್ಲಿ ಎದೆಗುದಿಯುಂಟು, ಶ್ರಮವುಂಟು, ಚಿಂತೆಯುಂಟು; ಅದರ ನಿರ್ವಹಣೆಗೆ ಅತುಲ ಸಹನೆ ಬೇಕು, ವಿವೇಕ ಬೇಕು.

ಅವಳ ಕಷ್ಟಗಳಲ್ಲಿ ಹೆಗಲು ಕೊಡಲು ಆಜಾನುಬಾಹು ಪತಿ ಇದ್ದಾನೆ. ಆದರೆ ಇಂಗ್ಲಂಡಿನ ರಾಣಿಯ ಗಂಡ ರಾಜನಲ್ಲ. ಎಷ್ಟೇ ಪ್ರಿಯಪತಿಯಾದರೂ ಅವಳು ರಾಷ್ಟ್ರದ ಗೌಪ್ಯಗಳನ್ನು ಅವನ ಮುಂದೂ ಉಸಿರುವಂತಿಲ್ಲ. ಇದು ಹೆಂಗಸಾದವಳಿಗೆ ಎಷ್ಟು ದುರ್ಧರವಾದುದೆಂದು ಬೇರೆ ಹೇಳಬೇಕೆ?

ಶ್ರಮವೆ? ಪ್ರತಿ ದಿನ ಬೆಳಗ್ಗೆ ರಾಜ ಚಿಹ್ನವನ್ನು ಬರೆದ ಕುದುರೆ ಬಂಡಿಯಲ್ಲಿ "ಕೆಂಪು ಪೆಟ್ಟಿಗೆ"ಗಳು ಅರಮನೆಗೆ ಬರುತ್ತವೆ. ಈ ಕೆಂಪು ಪೆಟ್ಟಿಗೆಗಳೆಲ್ಲ ಕೆಂಪೇ ಇರದಿದ್ದರೂ (ಕಪ್ಪು ಇರಬಹುದು, ಹಸುರು ಇರಬಹುದು, ಕೆಂದೂ ಇರಬಹುದು) ಪ್ರತಿಯೊಂದರ ಮೇಲೆ ಬಂಗಾರದ ಅಕ್ಷರಗಳಲ್ಲಿ "ಮಹಾರಾಜ್ಞಿ" ಎಂಬ ಬರಹವಿರುತ್ತದೆ. ಪ್ರತಿಯೊಂದರಲ್ಲಿಯೂ ಬೇರೆ ಬೇರೆ ಸರಕಾರಿ ಖಾತೆಗಳ ಮಹತ್ವದ ಕಾಗದ ಪತ್ರಗಳಿರುತ್ತವೆ – ಮತ್ತು ಅವೆಲ್ಲವೂ ಪರಮಗೌಪ್ಯ ಪತ್ರಗಳಾಗಿರುತ್ತವೆ. ಬಕಿಂಗ್ಯಾಂ ಅರಮನೆಯ ಎರಡನೇ ಮಹಡಿಯಲ್ಲಿರುವ ತನ್ನ "ಕಚೇರಿ"ಯಲ್ಲಿ ಕುಳಿತು ಅವಳು ಈ ಕಾಗದ ಪತ್ರಗಳನ್ನೆಲ್ಲ ನೋಡಿ ಅರಗಿಸಿಕೊಳ್ಳಬೇಕು. ಏಕೆಂದರೆ ಮಂತ್ರಿಮಂಡಲಗಳು ಎಲ್ಲ ಅಧಿಕಾರ ನಡೆಸುತ್ತಿದ್ದರೂ ಅವಳ ಸ್ವಂತ ಸಹಿ ಇಲ್ಲದೆ ಯಾವುದೂ ಕಾನೂನಾಗುವುದಿಲ್ಲ. ತಾನು ಏತಕ್ಕೆ ಸಹಿ ಹಾಕಿದ್ದೇನೆಂಬುದರ ಪೂರ್ವಾಪರವೆಲ್ಲ ಅವಳಿಗೆ ಗೊತ್ತಿರಬೇಕು. ಮಂತ್ರಿಗಳು ಬಂದಾರು,

ಹೋದಾರು ; ಆದರೆ ರಾಣಿ ( ಅಥವಾ ರಾಜ ) ಶಾಶ್ವತವಾಗಿರತಕ್ಕವಳು. ಹೀಗಾಗಿ ತನ್ನ ಆಳಿಕೆ ಬೆಳೆಯುತ್ತ ಹೋದಂತೆಲ್ಲ ಅವಳು ರಾಜ್ಯ ಕಾರ್ಯಗಳ ಹಿಂದು ಮುಂದೆಲ್ಲವನ್ನು ತನ್ನ ತಲೆಯಲ್ಲಿ ಹೆಚ್ಚು ಹೆಚ್ಚಾಗಿ ಸೇರಿಸಿಕೊಂಡು ನೆನೆದಾಗ ಜ್ಞಾಪಕಕ್ಕೆ ಬರುವಂತೆ ಒಪ್ಪವಾಗಿ ಕಾಪಾಡಿಕೊಳ್ಳಬೇಕಾಗಿದೆ.

ಎಲಿಜಬೆತ್ ದಿನವೂ ಪತ್ರಿಕೆಗಳನ್ನೋದಬೇಕು. "ಟೈಮ್ಸ್" ಪತ್ರಿಕೆಯ ವಿಶೇಷ "ರಾಜ" ಸಂಸ್ಕರಣವೊಂದು ನಿತ್ಯ ಹೊರಡುತ್ತದೆ. ( ಅದರಲ್ಲಿ ಕಾಗದ ಹೊರತು ಉಳಿದೆಲ್ಲವೂ ಸಾದಾ ಸಂಸ್ಕರಣದಂತೆಯೆ ಇರುತ್ತದೆ. ) ಅದಲ್ಲದೆ ಬೇರೆ ಬೇರೆ ರಾಜಕೀಯ ಅಭಿಪ್ರಾಯಗಳ ಪತ್ರಿಕೆಗಳೆಲ್ಲವನ್ನೂ ಅವಳು ಓದಿಕೊಂಡು ದೇಶ ವಿದೇಶಗಳ ರಾಜಕಾರಣದ ಸ್ಥಿತಿಗತಿಗಳ ತನ್ನ ಜ್ಞಾನವನ್ನು ಅದ್ಯಯಾವತ್ತಾಗಿ ಇರಿಸಿಕೊಳ್ಳುತ್ತಾಳೆ. ರಾಜಕುಟುಂಬದ ವಿಷಯದಲ್ಲಿ ಬಂದ ಟೀಕೆ ಟಿಪ್ಪಣಿಗಳಿಗೆ ವಿಶೇಷ ಮಹತ್ವ ಕೊಡಲಾಗುತ್ತದೆ.

ಅನಂತರ ಅವಳು ಆಮಂತ್ರಣಗಳನ್ನು ಗಮನಿಸಬೇಕು. ಒಂದು ಸಂಸ್ಥೆ ತನ್ನ ವಾರ್ಷಿಕೋತ್ಸವದಲ್ಲಿ ರಾಣಿಯ ಘನವಾದ ಉಪಸ್ಥಿತಿಯನ್ನು ಪ್ರಾರ್ಥಿಸುತ್ತದೆ ; ಇನ್ನೊಂದು ಒಂದು ಕಟ್ಟಡದ ಅಡಿಗಲ್ಲು ಹಾಕಬೇಕೆಂದು ಕೋರುತ್ತದೆ. ಸ್ಥಳೀಯ ಪಂಚಾಯತಗಳು ತಮ್ಮೂರಿಗೆ ದರ್ಶನ ಕೊಡಬೇಕೆಂದು ಬೇಡುತ್ತವೆ. ಪ್ರತಿಯೊಂದು ಆಮಂತ್ರಣದ ಬಗ್ಗೂ ತೂಗಿ ನೋಡಿ ನಿರ್ಣಯ ಕೈಕೊಳ್ಳಬೇಕಾಗುತ್ತದೆ.

ಸಾಲದ್ದಕ್ಕೆ ಪತ್ರಗಳು ಬರುತ್ತವೆ. ಕಾಮನ್‌ವೆಲ್ತಿನ ಯಾವ ಪ್ರಜೆಯೂ ನೇರವಾಗಿ ರಾಣಿಗೆ ಪತ್ರ ಬರೆಯಬಹುದು. ಅವುಗಳ ವಿಷಯ ಮರಣದಂಡನೆಯಾದವನ ಬಗ್ಗೆ ಕ್ಷಮಾಯಾಚನೆಯಾಗಿರಬಹುದು, ಯಾವುದೊಂದು ಸತ್ಕಾರ್ಯದ ಬಗ್ಗೆ ಸಹಾಯಯಾಚನೆಯಾಗಿರಬಹುದು, ಕೇವಲ ನಿಷ್ಠೆ ವ್ಯಕ್ತ ಮಾಡುವುದಾಗಿರಬಹುದು. ಎಲ್ಲವೂ ಪ್ರಥಮತಃ ರಾಣಿಯ ಕಣ್ಣಿಗೆ ಬಿದ್ದೇ ತೀರುವುವೆಂದು ಖಂಡಿತವಾಗಿ ತಿಳಿಯಬಹುದು. ಪ್ರತಿಯೊಂದಕ್ಕೂ ಅವಳ ಕಾರ್ಯದರ್ಶಿಗಳಿಂದ ಉತ್ತರ ಹೋಗಿಯೆ ತೀರುತ್ತದೆ. ವಿಶೇಷ ಪ್ರಸಂಗವಿದ್ದರೆ ರಾಣಿ ಸ್ವಹಸ್ತದಿಂದ "ಇದನ್ನು ಗಮನಿಸಬೇಕು" ಎಂದು ಬರೆದು ಸಂಬಂಧಿಸಿದ ಸರಕಾರಿ ಶಾಖೆಗೆ ಕಳಿಸುತ್ತಾಳೆ. ಕೂಡಲೆ ಅದಕ್ಕೆ ಗಮನ ಸಿಕ್ಕಿಯೆ ತೀರುವುದು.

ಇನ್ನು ಅರಸು ಮನೆತನದ ಆಡಳಿತಕ್ಕೆ ಬೇರೆ ಅವಳು ತಲೆ ಕೊಡಬೇಕು. ಬಕಿಂಗ್ಯಾಂ ಅರಮನೆಯೊಂದರಲ್ಲೆ ೬೧೪ ಕೋಣೆಗಳೂ ಅವುಗಳ ಆರೈಕೆಗೆ ೨೦೦ ಸೇವಕ ಸೇವಕಿಯರೂ ಇದ್ದಾರೆ. ಮಣಗಟ್ಟಳೆ ಬೆಳ್ಳಿ ಬಂಗಾರ, ಚೀಲಗಟ್ಟಳೆ ರತ್ನಾಭರಣಗಳ ರಕ್ಷಣೆಯಾಗಬೇಕು. ಗಡಿಯಾರಗಳೇ ಅಲ್ಲಿ ೩೦೦ ಇವೆ. ಎಲ್ಲವೂ ಸರಿಯಾಗಿರಬೇಕು. ಇದಕ್ಕೆಲ್ಲ ಅರಮನೆಯ ಪಾರುಪತ್ಯಗಾರನೊಬ್ಬನಿದ್ದಾನಾದರೂ ಪ್ರತಿಯೊಂದು ವಿವರಕ್ಕೂ ರಾಣಿ ಲಕ್ಷ್ಯವೀಯುತ್ತಾಳೆ.

ಈಯಬೇಕು ಏಕೆಂದರೆ ಬ್ರಿಟಿಶ್ ಸರಕಾರ ರಾಣಿಗೆ ಖಚಿತವಾದ ಮತ್ತು ಉದಾರವಾದ ಹಮ್ಮಿಣಿಯನ್ನು ವರ್ಷವರ್ಷವೂ ಒದಗಿಸುತ್ತಿದ್ದರೂ ಅವಳು ಜಗತ್ತಿನ ಅತಿ ಶ್ರೀಮಂತಳೆಂಬುದು ಸರಿಯಲ್ಲ. ತನ್ನ ಈ ಹಮ್ಮಿಣಿಯಿಂದ ಅವಳು ಬಕಿಂಗ್ಯಾಂ ಅರಮನೆಯನ್ನೊಳಗೊಂಡು ಐದು ಅರಮನೆ, ಕೋಟೆಗಳನ್ನು ನಡೆಸಿಕೊಂಡು ಹೋಗಬೇಕು. ಇಂದಿನ ತುಟ್ಟಿಯ ಕಾಲದಲ್ಲಿ ಎಲ್ಲ ವಿವೇಕಿ ಗೃಹಿಣಿಯರ ಹಾಗೆ ಅವಳೂ ಜಾಗರೂಕತೆಯಿಂದ ವೆಚ್ಚಮಾಡುತ್ತಾಳೆ. ತಾಳಿಕೆಯ ವಸ್ತುಗಳನ್ನೇ ಕೊಳ್ಳುತ್ತಾಳೆ. ಅವಳು ಮತ್ತು ಅವಳ ಮಕ್ಕಳು ಬಟ್ಟೆಗಳನ್ನು ಹಳೆಯವಾಗುವ ವರೆಗೂ ಬಳಸುತ್ತಾರೆ. ಕೆಲ ಪ್ರಾಚೀನದಿಂದ ಬಂದ ರಾಜವೇಷಗಳಂತೂ

ಹರಿದು ಅಲ್ಲಲ್ಲಿ ತೇಪೆ ಹಾಕಿದವಾಗಿವೆ.

ಇಂಥ ಕಾರ್ಯಭಾರವುಳ್ಳ ಅವಳು ತನ್ನ ಪ್ರತಿಯೊಂದು ದಿನವನ್ನು ಮುಂದಾಗಿ ಮತ್ತು ನಿಗದಿಯಾಗಿ ವಿಭಜಿಸಿಕೊಳ್ಳಬೇಕಾಗುತ್ತದೆ. ಮಳೆಯಿರಲಿ ಬಿಸಿಲಿರಲಿ ಬೆಳಿಗ್ಗೆ ೭ ಗಂಟೆಗೆ ಎದ್ದು ೮ ಗಂಟೆಯೊಳಗಾಗಿ ಉಡುಪು ತೊಟ್ಟು ಕೆಲಸಕ್ಕೆ ಅಣಿಯಾಗುತ್ತಾಳೆ. ಅಂದಿನ ಪತ್ರಿಕೆಗಳ ಅವಲೋಕನ ಪ್ರಥಮ ಕಾರ್ಯ. ೮-೩೦ ಕ್ಕೆ ಗಂಡನೊಡನೆ ಉಪಹಾರ ಮತ್ತು ಸರಸ ಸಲ್ಲಾಪ. ಆ ಮೇಲೆ ಮಕ್ಕಳೊಡನೆ ತುಸು ಕಾಲ ಕಳೆದು ಅವರನ್ನು ಶಾಲೆಗೆ ಕಳಿಸಿ ಎರಡನೇ ಅಂತಸ್ತಿಗೆ ಧಾವಿಸಿ ಅಂದಿನ "ಕೆಂಪು ಪೆಟ್ಟಿಗೆ" ಗಳ ಪಾರಾಯಣ. ೧೦-೩೦ ರಿಂದ ಅರಮನೆಯ ಪಾರುಪತ್ಯಗಾರನೊಡದೆ ವಿಚಾರವಿನಿಮಯ. ೧೧-೧೫ಕ್ಕೆ ಖಾಸಗಿ ಖಜಾಂಚಿಯೊಡನೆ ಮಾತುಕತೆ. ೧೧-೩೦ ಕ್ಕೆ ಖಾಸಗಿ ಪತ್ರಗಳ ವಾಚನ. ೧೨ ರಿಂದ ೧ ರ ವರೆಗೆ ಸಂದರ್ಶಕರೊಡನೆ ಮಾತುಕತೆ. ಹದಿನೈದು ನಿಮಿಷಗಳ ಈ ಸಂದರ್ಶನಗಳನ್ನು ರಾಣಿ ಬಲು ಕೌಶಲದಿಂದ ನಿರ್ವಹಿಸುತ್ತಾಳೆ. ಸರಳ ಪ್ರಶ್ನೆ ಕೇಳಿ ಸರಳ ಉತ್ತರಗಳನ್ನು ಪಡೆದು ಬಂದವರಿಗೆ ಕೆಡುಕೆನಿಸದಂತೆ ೧೫ ನಿಮಿಷಗಳು ಮುಗಿದೊಡನೆ ಸಂದರ್ಶನವನ್ನು ಕೊನೆಗೊಳಿಸುತ್ತಾಳೆ. ೧ ಗಂಟೆಗೆ ಬಹುತರವಾಗಿ ಯಾವನಾದರೊಬ್ಬ ವಿದೇಶಿ ಅತಿಥಿಯೊಡನೆ ರಾಜದಂಪತಿಗಳ ಭೋಜನ.

ಅಪರಾಹ್ನದಲ್ಲಿಯೂ ವಿಶ್ರಾಂತಿಯಿಲ್ಲ. ಒಂದಲ್ಲ ಒಂದು ಅಡಿಗಲ್ಲಿಕ್ಕುವ ಅಥವಾ ಉದ್ಘಾಟನ ಮಾಡುವ ಅಥವಾ ಮತ್ತಾವುದಾದರೂ ಕಾರ್ಯಕ್ರಮವನ್ನವಳು ನಿರ್ವಹಿಸಬೇಕು. ಹೆಚ್ಚಾಗಿ ಇವುಗಳಲ್ಲಿ ಗಂಡ ಹೆಂಡಿರಿಬ್ಬರೂ ಭಾಗವಹಿಸುತ್ತಾರೆ. ಇಲ್ಲೇ ಅವಳ ಆ ಕಲಿತ ನಗೆಯ ಪರಮಾವಧಿ-ಪರೀಕ್ಷೆಯಾಗುವುದು. ೫ ರಿಂದ ೬-೩೦ ರ ವರೆಗೆ ಮತ್ತೆ ಮಕ್ಕಳೊಡನೆ ಕಾಲ ಕಳೆದು ಅನಂತರ ಗಂಡ ಹೆಂಡಿರಿಬ್ಬರೂ ಬೇರೆ ಬೇರೆ ಕಡೆ ಭೋಜನ ಕೂಟಗಳಲ್ಲಿ ಭಾಗವಹಿಸುವುದು ಸಾಧಾರಣ. ೧೦-೩೦ ಕ್ಕೆ ಶಯನ ಕಾಣಬೇಕಾದರೆ ರಾಣಿಗೆ ಸಾಕುಬೇಕಾಗಿರುತ್ತದೆ.

ವಿದೇಶಗಳಿಗೆ ಸಂದರ್ಶನವು ಹಿಂದಿನ ಬ್ರಿಟಿಶ್ ದೊರೆಗಳಿಗಿಲ್ಲದಿದ್ದ ಹೊಸ ತಲೆನೋವು-ಎಲಿಜಬೆತಳಿಗೆ ವಿದೇಶಗಳ ಪರಿಚಯ ಓದಿಯೂ ಹೋಗಿಯೂ ಇತರ ಎಲ್ಲ ಅರಸರಿಗಿಂತ ಹೆಚ್ಚಾಗಿದೆ; ಅದರಲ್ಲಿ ತುಂಬ ಆಸಕ್ತಿಯಿದೆ; ಆದರೂ ಅದು ತಲೆನೋವೇ. ಒಂದು ಕಾಮನ್‌ವೆಲ್ತ್ ದೇಶವೋ ವಸಾಹತೋ ಮಿತ್ರ ರಾಷ್ಟ್ರವೋ ರಾಣಿ ತಮ್ಮ ನಾಡಿಗೆ ಚಿತ್ತೈಸಬೇಕೆಂದು ಅಪೇಕ್ಷಿಸುತ್ತದೆ. ಆಮಂತ್ರಣವನ್ನೊಪ್ಪುವ ಮೊದಲೇ ವಿದೇಶ ಶಾಖೆ ಬಹಳ ಯೋಚಿಸಬೇಕಾಗುತ್ತದೆ. ಆ ದೇಶದ ರಾಜಕೀಯ ಪರಿಸ್ಥಿತಿ ಹೇಗಿದೆ, ರಾಣಿಯ ಆಗಮನಕ್ಕೆ ಆಕ್ಷೇಪವೆತ್ತಬಹುದಾದ ವಿರೋಧಿಗಳಿದ್ದಾರೆಯೇ, ಅಲ್ಲಿ ಯೋಗ್ಯ ಸ್ವಾಗತ ಸಿಕ್ಕೀತೇ—ಇವೆಲ್ಲ ವಿಚಾರಗಳನ್ನು ಮಾಡಿಯೇ ನಿರ್ಣಯಿಸಬೇಕಾಗುತ್ತದೆ. ರಾಣಿಗೆ ಎಲ್ಲಾದರೂ ಅವಮಾನವುಂಟಾಗುವ ಸಂದರ್ಭ ಬಂದರೆ ಅದು ಕಾಮನ್‌ವೆಲ್ತನ್ನೇ ತತ್ತರಗೊಳಿಸೀತು.

ಒಂದು ದೇಶಕ್ಕೆ ಭೆಟ್ಟಿಕೊಡುವ ನಿರ್ಧಾರ, ಭೆಟ್ಟಿಗಿಂತ ಒಂದು ವರ್ಷ ಮೊದಲೇ ಆಗುತ್ತದೆ. ಅಂದಿನಿಂದಲೇ ಎತ್ತುಗಡೆ ಪ್ರಾರಂಭ. ಏಕೆಂದರೆ ಭೆಟ್ಟಿಯ ಪ್ರತಿಯೊಂದು ವಿವರವೂ ಮುಂದಾಗಿ ಚಿಂತಿಸಲ್ಪಟ್ಟು ಯೋಜಿತವಾಗಬೇಕು. ೧೯೫೯ ಜುಲೈಯಲ್ಲಿ ರಾಣಿ ಎಲಿಜಬೆತ್ ಚಿಕಾಗೋ ಪಟ್ಟಣಕ್ಕೆ ಒಂದು ದಿನದ ಸಂದರ್ಶನವೀಯಬೇಕಾದರೆ ಎಂಟು ವಾರಗಳ ರಂಗತಾಲೀಮು ನಡೆಯಿತು.

ವಿದೇಶಗಳಿಗೆ ರಾಣಿಯ ಭೆಟ್ಟಿಗಾಗಿ ವಿಶೇಷ ಹಡಗೇ ಇದೆ. ಆದರೆ ಹಣವನ್ನೂ ವೇಳೆ-

ಯನ್ನೂ ಉಳಿಸಲು ರಾಜದಂಪತಿಗಳು ವಿಮಾನಗಳನ್ನು ಉಪಯೋಗಿಸುವುದೇ ಹೆಚ್ಚು.

ಸಂಚಾರ ಕಾಲದಲ್ಲಿ ರಾಜದಂಪತಿಗಳಿಗೆ ಬೇಕಾದ ಸರಕುಗಳ ಲೆಕ್ಕ ಕೇಳಿದರೆ ತಲೆ ತಿರುಗುತ್ತದೆ. ಅವುಗಳ ತೂಕ ಎರಡು ಟನ್ನುಗಳಷ್ಟಾಗುತ್ತದೆ. ೭೫ ಪೆಟ್ಟಿಗೆಗಳಲ್ಲಿ ಅವನ್ನು ಪ್ಯಾಕ್ ಮಾಡಿರುತ್ತಾರೆ. ರಾಣಿ ಸಂಗಡ ಒಯ್ಯುವ ರತ್ನಾಭರಣಗಳ ಬೆಲೆಯೇ ರೂಪಾಯಿ ೨,೨೫,೦೦,೦೦೦ ಯಾಗುತ್ತದೆ.

ರಾಣಿಗಾಗಿ ಪ್ರತಿ ಸಂಚಾರಕ್ಕೂ ಮುಂಚೆ ೧೫೦ ಉಡುಪುಗಳು ತಯಾರಾಗಬೇಕು. ಅವು ರಾಣಿಯ ಗಾಂಭೀರ್ಯಕ್ಕೆ ತಕ್ಕವಾಗಿರಬೇಕು, ಆದರೆ ತೀರ ಹಳೆ ನಮೂನೆಯವುಗಳಂತೆ ಕಾಣಿಸಿರಬಾರದು. ಇವುಗಳನ್ನು ತಯಾರಿಸುವ ಹೊಣೆ ಲಂಡನ್ನಿನ ಇಬ್ಬರು ರಾಜ ದರ್ಜಿಗಳದು. ಉಡುಪುಗಳ ವಿವರ, ಡಿಜೈನು ಮೊದಲಾದವನ್ನು ಅವರು ಅತ್ಯಂತ ಗುಟ್ಟಾಗಿರಿಸಬೇಕು. ಗುಟ್ಟು ರಟ್ಟಾದರೆ ಅವರ " ರಾಜ ದರ್ಜಿ " ಪದವಿ ರದ್ದಾಗುವುದು !

ಯಾವುದನ್ನೂ ಸಂದರ್ಭಕ್ಕೆ ಬಿಡುವಂತಿಲ್ಲ. ತೊಟ್ಟ ಉಡುಪುಗಳು ಗಾಳಿಯಲ್ಲಿ ಹಾರಿ ಹಸಗೇಡಾಗವಂತೆ ಒಳಗೆ ತೂಕಗಳನ್ನಿಟ್ಟು ಹೊಲಿದಿರುತ್ತಾರೆ; ಹ್ಯಾಟುಗಳನ್ನು ಕಾಣದ ತಂತಿಗಳಿಂದ ಬಿಗಿದಿರುತ್ತಾರೆ. ಕೈಗೆ ಹಾಕಿಕೊಳ್ಳಬೇಕಾದ ಗ್ಲೋವ್‌ಗಳ ಬಣ್ಣ ಉಡುಪಿಗೆ ಹೊಂದಿಕೆಯಾಗಿರಬೇಕಲ್ಲದೆ ಸಾವಿರಗಟ್ಟಳೆ ಜನರ ಸಂಗಡ ಹಸ್ತಲಾಘವ ಕೊಡುವುದನ್ನು ತಡೆದುಕೊಳ್ಳುವಂತಿರಬೇಕು. ಉಡುಪು ಎದ್ದು ಕಾಣುವ ಬಣ್ಣದ್ದಿರಬೇಕು — ಜನ ಜಂಗುಳಿಗೆ ಕೂಡಲೆ ಕಾಣಿಸುವ ಹಾಗೆ.

ಇವುಗಳನ್ನೆಲ್ಲ ಹೊಂದಿಸಿ ಪ್ಯಾಕ್ ಮಾಡುವ ಹೊಣೆ ರಾಣಿಯ ಸ್ವಂತ ದಾಸಿ ಮಾರ್ಗರೆಟ್ ಮ್ಯಾಕ್ಡೊನಾಲ್ಡಳದು. ಹಸುಗೂಸಾಗಿದ್ದಾಗಿಂದ ರಾಣಿಯ ಆರೈಕೆ ಮಾಡಿದ ಈ ಹಿರಿಯ ಮಹಿಳೆಗೊಬ್ಬಳಿಗೆ ಮಾತ್ರವೆ ರಾಣಿಯನ್ನು ಚಿಕ್ಕಂದಿನ "ಲಿಲಿಬೆಟ್" ಎಂಬ ಮಮತೆಯ ಹೆಸರಿನಿಂದ ಕರೆಯಲು ಅಪ್ಪಣೆಯಿರುವುದು. ವಿದೇಶ ಸಂಚಾರದಲ್ಲಿರುವಾಗ ರಾಣಿ ಕೆಲವೊಮ್ಮೆ ದಿನಕ್ಕೆ ನಾಲ್ಕು ಸಲ ವೇಷ ಬದಲಾಯಿಸುವುದರಿಂದ ಪ್ರತಿಯೊಂದು ಉಡುಪನ್ನೂ ಅದರ ಉಪ-ಸಲಕರಣೆಗಳೊಡನೆ ಪ್ರತ್ಯೇಕವಾಗಿ ಪ್ಯಾಕ್ ಮಾಡಿಡಬೇಕು.

ಆಭರಣಗಳನ್ನೂ ಅವವಕ್ಕೆ ಹೊಂದಿಕೆಯಾಗುವ ಸೆಟ್ಟುಗಳಾಗಿ ಬೇರೆ ಬೇರೆ ಪೆಟ್ಟಿಗೆಗಳಲ್ಲಿ ಪ್ಯಾಕ್ ಮಾಡಬೇಕು. ಇವೆಲ್ಲವುಗಳ ಮೇಲೆ, ರಾಣಿಯ ಪ್ರೀತಿಯ ಛಾಪಿನ ಚಹಾ, ಅವಳ ಪತಿಗಾಗಿ ಟೇಪ್ ರಿಕಾರ್ಡರ್ ಈ ಎಲ್ಲ ಸಾಧನ ಸಲಕರಣೆಗಳು ಅವರೊಡನೆಯೆ ಸಾಗುತ್ತವೆ.

ರಾಜದಂಪತಿಗಳೊಡನೆ ಹೊರಡತಕ್ಕ ಪರಿವಾರವೂ ದೊಡ್ಡದೇ. ಕೆನಡಾ ಪ್ರವಾಸದಲ್ಲಿ ೩೧ ಜನ ಮಹಿಳೆಯರು, ದಾಸಿಯರು, ಸೇವಕರು ಅವರೊಡನಿದ್ದರು. "ಬೋಬೋ" (ಮಾರ್ಗರೆಟ್) ಮೆಕ್ಡೊನಾಲ್ಡ್, ಅವಳ ಸಹಾಯಕಿ, ಇಬ್ಬರು ಸೈರಂಧ್ರಿಯರು, ಒಬ್ಬ ದರಬಾರ್ ಮಂತ್ರಿ, ಅರಮನೆಯ ಪಾರುಪತ್ಯಗಾರ, ಡ್ಯೂಕ್ ಆಫ್ ಎಡಿನ್‌ಬರೊರ ಸ್ವಂತ ಕ್ಯಾಂಪ್ ಟ್ರೋಲರ್, ಮೂರು ನಾಲ್ಕು ಜನ ಪಾರುಪತ್ಯಗಾರರು, ರಾಣಿಯ ವಿಮಾನದ ಕಪ್ತಾನ, ರಾಣಿಯ ಕೇಶಪ್ರಸಾಧಕ, ಇಬ್ಬರು ಕಂಚುಕಿಗಳು, ಇಬ್ಬರು ಸ್ಟೇನೋಗಳು, ರಾಜವೈದ್ಯ, ಇಬ್ಬರು ಗುಪ್ತ ಪೋಲೀಸರು, ಮತ್ತು ನಾಲ್ಕು ಜನ ಆಳುಗಳು ಇಷ್ಟು ಜನರ ಪರಿವಾರವಂತೂ ಅನಿವಾರ್ಯವೇ.

ರಾಜದಂಪತಿಗಳ ಸಂಚಾರವೇನೂ ಸುಖಪ್ರವಾಸವಲ್ಲ. ಈ ಕೋಮಲ ಶರೀರದ ಅಬಲೆ ಇಂಥ ಶ್ರಮವನ್ನು ತಾಳಿಕೊಳ್ಳುವಳು ಹೇಗೆಂದು ಆಶ್ಚರ್ಯಪಡುವ ಹಾಗಿದೆ. ದರ್ಶನಾಪೇಕ್ಷಿಗಳಾದ ಪ್ರಜೆಗಳ ಸಂತೋಷಕ್ಕಾಗಿ ಅವಳು ತಾಸು

ಗಟ್ಟಳೆ ಉರಿ ಬಿಸಿಲಲ್ಲಿ ನಿಂತಿರಬೇಕಾಗುತ್ತದೆ. ಸಿಂಹಳಕ್ಕೆ ಅವಳು ಭೆಟ್ಟಿ ಕೊಟ್ಟಾಗ ಅವಳೂ ಅವಳ ಪರಿವಾರದವರೆಲ್ಲರೂ ಬೆವರಿನಿಂದ ಮುದ್ದೆಯಾಗಿಹೋಗಿದ್ದರು. ಆದರೂ ಜನರನ್ನು ಮೆಚ್ಚಿಸಲು ಕಿರೀಟ ಧರಿಸಿ ನಿಂತಿದ್ದ ಎಲಿಜಬೆತ್ ಮುಖದಿಂದ ನಸುನಗೆಯನ್ನು ಮಾಸಗೊಡಲಿಲ್ಲ. ಗವರ್ನರ್ ಜನರಲ್ ಗುಣತಿಲಕೆಯವರು ಅವಳ ಸೈರಣೆಗಾಗಿ ಮೆಚ್ಚಿಗೆ ತೋರ್ಪಡಿಸಿದಾಗ ಅವಳು ವ್ಯಂಗ್ಯವಾಗಿ, "ಮತ್ತೇನಿಲ್ಲ, ನನ್ನ ಉಡುಪಿನ ಮೇಲಿನ ಜರಿ ಕರಗುತ್ತದೋ ಎಂದಷ್ಟೇ ಅಂಜಿಕೆ ನನಗೆ" ಎಂದಳಂತೆ.

ರಾಣಿ ತೀರ ಶ್ರಾಂತಳಾದಾಗ ಅವಳ ಪತಿ ಡ್ಯೂಕ್ ಆಫ್ ಎಡಿನ್‌ಬರೊ ಮೃದುವಾಗಿ ಅವಳಿಗೆ ಧೈರ್ಯ ಹೇಳಿ "ನಗಬಾರದೇ ಮಹಾರಾಯಳೆ, ಪಾಪ, ಜನ ನಿರಾಶರಾಗುತ್ತಾರೆ" ಎಂದು ಕಿವಿಯಲ್ಲಿ ಪಿಸುಗುಡುವುದುಂಟು. ರಾಣಿ ಎಲಿಜಬೆತಳ ಒಂದು ಸುದೈವವೆಂದರೆ ಅವಳಿಗೆ ಅನುರೂಪವಾದ ಪತಿ ದೊರೆತಿರುವುದು. ನಿರಾಶ್ರಿತ ರಾಜಕುಮಾರನಾಗಿದ್ದ ಚಪಲ ಚಂಚಲ ಫಿಲಿಪ್‌ಗೆ ಎಲಿಜಬೆತ್ ಗಾರ್ಹಸ್ಥ್ಯದ ಸ್ಥೈರ್ಯವನ್ನು ತಂದುಕೊಟ್ಟಿದ್ದರೆ ಫಿಲಿಪ್ ತಾರುಣ್ಯದಲ್ಲೇ ರಾಜ್ಯ ಭಾರವನ್ನು ಹೊತ್ತ ರಾಣಿಗೆ ಬೆಂಬಲವಾಗಿದ್ದಾರೆ.

ಫಿಲಿಪ್ ಉತ್ಸಾಹಿ ಮತ್ತು ಸಾಹಸಿ. ಅರಮನೆಯ ಏಕತಾನ ಜೀವನ ಬೇಸರಿಕೆ ಬಂದಾಗ ಆತ ದೀರ್ಘವಾಗಿ ವಿದೇಶ ಸಂಚಾರಕ್ಕೆ ಹೊರಟುಬಿಡುತ್ತಾರೆ—ಒಂಟಿಯಾಗಿ ಮೂರು ಸಲ ಪ್ರಪಂಚ ಪ್ರದಕ್ಷಿಣೆ ಮಾಡಿದ ಇವರ ಈ ಯಾತ್ರಾವ್ಯಾಮೋಹ ಒಮ್ಮೊಮ್ಮೆ ಸುದ್ದಿಗಾರರಿಗೆ ಹಬ್ಬವಾಗಿ ಪರಿಣಮಿಸುತ್ತದೆ. ರಾಣಿಗೂ ಫಿಲಿಪ್‌ಗೂ ಮನಸ್ತಾಪವಾಗಿ ಅವರು ಹೊರಟು ಹೋಗಿದ್ದಾರೆ ಎಂದು ಪತ್ರಿಕೆಗಳು ಪ್ರಕಟಿಸಿಬಿಡುತ್ತವೆ. ಆದರೆ ನಿಜಕ್ಕೂ ಬ್ರಿಟಿಶ್ ರಾಣಿ ಅತ್ಯಂತ ಪತಿಪರಾಯಣ ನಾರಿಯಾಗಿದ್ದಾಳೆ.

ರಾಣಿಗೆ ಮೂರು ಮಕ್ಕಳು. ಮೊದಲನೇ ಚಾರ್ಲ್ಸ್‌ಗೆ ೧೩ ವರ್ಷ. ಅವನೇ ಯುವರಾಜ. ಅನಂತರದವಳು ಆನಿ—೧೦ ವರ್ಷದವಳು. ಮೂರನೆಯ ಆಂಡ್ರ್ಯೂಗೆ ಇನ್ನೂ ವರ್ಷ ತುಂಬಿಲ್ಲ. ಬದಲಾದ ಕಾಲಮಾನಕ್ಕನುಸರಿಸಿ ಚಾರ್ಲ್ಸನನ್ನು ಸಾರ್ವಜನಿಕ ಶಾಲೆಗೇ ರಾಣಿ ಕಳಿಸುತ್ತಿದ್ದಾಳೆ. ಸಾಮಾನ್ಯ ಜನರ ಮಕ್ಕಳೊಡನೆ ಕುಳಿತು ಓದುವ ಪ್ರಪ್ರಥಮ ಬ್ರಿಟಿಶ್ ರಾಜಕುಮಾರ ಈತ.

ಒಂದು ವರ್ಷಕ್ಕಿಂತ ಹಿಂದೆಯೆ ಇತ್ತ ಆಮಂತ್ರಣವನ್ನು ಅಂಗೀಕರಿಸಿ ಬ್ರಿಟಿಶ್ ರಾಜದಂಪತಿಗಳು ಈ ವರ್ಷ ಭಾರತಕ್ಕೆ ಬರುತ್ತಿದ್ದಾರೆ. ಅವರು ಇಲ್ಲಿ ಬೇರೆಲ್ಲಿಯಷ್ಟೇ ಜನಪ್ರಿಯರಾಗುವುದು ಖಂಡಿತ. ಅವರು ಇಲ್ಲಿ ಬನಾರಸಿ ಸೀರೆಯಿಂದ ರಚಿಸಿದ ಉಡುಪು ಧರಿಸುವರೆಂದು ವದಂತಿಯುಂಟು. ಈ ಸಂದರ್ಭದಲ್ಲಿ ೪೮ ವರ್ಷಗಳ ಹಿಂದೆ ನಡೆದ ಘಟನೆ ನಮಗೆ ಸಹಜವಾಗಿಯೇ ನೆನಪಿಗೆ ಬರುತ್ತದೆ. ಆಗ ಭಾರತದ ಚಕ್ರವರ್ತಿಯಾಗಿ ಐದನೇ ಜಾರ್ಜರು ಭಾರತಕ್ಕೆ ಬಂದಿದ್ದರು. ದಿಲ್ಲಿಯಲ್ಲಿ ದರ್ಬಾರಾಯಿತು. ಆದರೆ ಅಸ್ವತಂತ್ರ ಭಾರತದ ಜನತೆ ಈ ದರ್ಬಾರನ್ನು ವಿರೋಧಿಸಿ ದೊಡ್ಡ ಚಳವಳಿ ಹೂಡಿತು. ಇಂದು ಅದೇ ಅರಸನ ಮೊಮ್ಮಗಳನ್ನು ಅದೇ ಭಾರತ ಸ್ವಾಗತಿಸುತ್ತಿದೆ— ಸಮ್ರಾಟಳೆಂಬ ಭಯಭಕ್ತಿಯಿಂದಲ್ಲ, ಕಾಮನ್‌ವೆಲ್ತ್ ಪ್ರಮುಖಳೆಂಬ ಪ್ರೀತಿಯಿಂದ.

*



# ಜನಪದ ರಸಬಿಂದು

## ಪೂಜೆ

ಆಕಾಶದಡವ್ಯಾಗ ಧೂಪದ
ಹೊಗೆಯೆದ್ದು
ಆಯ್ತು ಮಲ್ಲಯ್ಯನ ಶಿವಪೂಜೆ-ಆಗಾಗ
ಆಕಾಶದ ಘಂಟಿ ಘಳಲೆಂದು.

## ತಾಯ್ತನದ ಹೆಮ್ಮೆ

ತೋಳುದ್ದ ತಲೆಗಿಂಬು ಮಾರುದ್ದ ಹಾಸಿಗಿ
ಮಾಣಿಕದಂಥ ಮಗ ಮುಂದ— ಮಲಗಿದರ
ಮಾರಾಯ್ರ ಗೊಡವೆ ನನಗೇನ.

## ಕೋಗಿಲೆ

ಮಾಗಿಯು ಮಳೆಗಾಲ ಹೇಗಿದ್ದಿ ಕೋಗಿಲ
ಆಗರ ಭಾಳ ಅಡಿಕೆಯು— ಬನದಾಗೆ
ಕೂಗ್ಯಾಡಿ ಹೊತ್ತು ಕಳೆದೇನ.

## ಮಗುವಿನ ಅಳು

ಕಂದಯ್ಯ ಅತ್ತರೆ ಕಣಗಿಲ ಕಾತಾವು
ಒಣಗಿದ್ದ ಬಾಳೆ ಚಿಗಿತಾವು— ಬಾಲನ
ಬರಡಾಕಳೆಲ್ಲ ಹೈನಾಗೆ.

## ಸಂಸಾರಸಾರ

ಮಾಗಿಯು ಕಾಟಕ್ಕೆ ಮಾವಿನಂಥ
ಹೂವಿಲ್ಲ
ಮನೆಯಾಗೆ ಬೆಂಕಿ ಸಮನಿಲ್ಲ—ಮಾತಿಗೆ
ಮಾವನ ಮಗಳಂಥ ಜೊತೆಯಿಲ್ಲ.

## ವಿರಹ

ಹೊಸ್ತಿಲಾಗಿರುವ ಪುಟ್ಟ ಮಲ್ಲಿಗ್ಹೂವೆ
ನೀವರಳಿ ಬಾಯಿ ಬಿಡದಿರಿ
ನೀವರಳಿ ಬಾಯಿ ಬಿಡದಿರಿ ನಮ್ಮನೆಯ
ಹೂ ಕೊಯ್ಯೊ ಹುಡುಗಿ ಒಳಗಿಲ್ಲ.

## ಬಡತನ

ಬಡವರು ಸತ್ತರೆ ಸುಡಲಿಕ್ಕೆ ಬೆಂಕಿಲ್ಲ
ಒಡಲ ಕಿಚ್ಚಾಗೆ ಹೆಣ ಬೆಂತೊ ಶಿವ ಶಿವ
ಬಡವರಿಗೆ ಸಾವ ಕೊಡಬ್ಯಾಡ.

## ಸವತಿ

ನಕ್ಕರೆ ನಗಲವ್ವ ನಗಿಮುಖದ ಕ್ಯಾದಗಿ
ನಾ ಮುಂಚೆ ಮುಡಿದ ಪರಿಮಳ
ನಾ ಮುಂಚೆ ಮುಡಿದ ಪರಿಮಳದಾ
ಹೂವ
ಅವಳೊಂದು ಘಳಿಗೆ ಮುಡಿಯಲಿ.

## ಸ್ಮರಣೆ

ಆಕಳಿಕೆ ಹೆಚ್ಚಾತು ತೂಕಡಿಕೆ ಘನವಾಯ್ತು
ಯಾವ ಗೆಣೆಕಾರ್ತಿ ನೆನಿಸ್ಯಾಳು
ಯಾವ ಗೆಣೆಕಾರ್ತಿ ನೆನಿಸ್ಯಾಳು ಆಚೆಕೇರಿ
ಪಾರಿವಾಳದ್ಹಟ್ಟಿ ಮನೆಯವಳು.

## ಶಿಕ್ಷೆ

"ಮಾತಿನ ಮಡದೀಗೆ ಸೂತರದ
ಗೊಂಬಿಗೆ
ಯಾತರಲೆ ಹೊಡದಿ ನನ ತಮ್ಮ?"
"ಕಾಕಿಹಣ್ಣಿಲಿ ಹೊಡೆದೆ ಕಮಳದ್ಹೂವಿಲಿ
ಹೊಡೆದೆ
ತೋಟದಾಗಿರುವ ಗಜಲಿಂಬಿ
ತೋಟದಾಗಿರುವ ಗಜಲಿಂಬಿಲ್ಹೊಡೆದರೆ
ಮೋಜಿಲಳತಾಳೆ ಹಡೆದವ್ವ!"



ಭಾರತದ ರಾಷ್ಟ್ರೀಯ ಗ್ರಂಥಾಲಯದ
ಪ್ರಥಮ ಭಂಡಾರಿ



# ಬಿ. ಎಸ್. ಕೇಶವನ್

ಬಿ. ಎಸ್. ದಯಾಳು

ಕಲಕತ್ತೆಯ ಅಲೀಪುರ ರಸ್ತೆಯಲ್ಲಿ, ಹಿಂದೆ, ರಾಜಧಾನಿ ದಿಲ್ಲಿಗೆ ಬದಲಾಗುವ ಮುಂಚೆ, ಗವರ್ನರ್ ಜನರಲ್ಲರ ನಿವಾಸವಾಗಿದ್ದ "ಬೆಲ್ವೆದೋರ್" ಎಂಬ ವಿಶಾಲವಾದ ಅರಮನೆಯಿದೆ. ಇಲ್ಲಿಯೇ ಬಹುಶಃ ಭಾರತವನ್ನು ಪೂರ್ಣವಾಗಿ ಬ್ರಿಟಿಶರ ಪಾದಾಕ್ರಾಂತವಾಗಿ ಮಾಡಿದ ಹಲವು ಹಂಚಿಕೆಗಳು ನಡೆದಿರಬೇಕು. ಈ ಪ್ರಾಸಾದದಲ್ಲಿ ಈಗ ರಾಜತಂತ್ರದ ಕುಮಂತ್ರಣ ನಡೆಯುವುದಿಲ್ಲ. ಸೂಜಿ ಬಿದ್ದರೆ ಕೇಳಿಸುವ ಶಾಂತವಾತಾವರಣದಲ್ಲಿ ಸರಸ್ವತಿಯ ಆರಾಧನೆ ಇಲ್ಲಿ ನಡೆಯುತ್ತಿದೆ. ಏಕೆಂದರೆ ಇಲ್ಲಿ ಹತ್ತು ಲಕ್ಷ ಪುಸ್ತಕಗಳ ಸಂಗ್ರಹವುಳ್ಳ "ಭಾರತ ರಾಷ್ಟ್ರೀಯ ಗ್ರಂಥಾಲಯ" ವಿದೆ. ಇದು ಸ್ಥಾಪಿತವಾದದ್ದು ಸ್ವಾತಂತ್ರ್ಯ ಸಿಕ್ಕಿದ ಮೇಲೆ—೧೯೪೮ ರಲ್ಲಿ. ಆದರೆ ಅದು ಜಗತ್ತಿನ ಅತ್ಯಂತ ಸುವ್ಯವಸ್ಥಿತ ಗ್ರಂಥಾಲಯಗಳಲ್ಲೊಂದಾಗಿದೆ. ಅಚ್ಚುಕಟ್ಟು, ಸೌಕರ್ಯ, ಜ್ಞಾನಾರಾಧಕರಿಗೆ ದೊರೆಯುವ ಸಹಾನುಭೂತಿ ಇವುಗಳಿಂದ ಇದನ್ನು ಭಾರತದಲ್ಲೆ ಅದ್ವಿತೀಯವೆನಿಸುವಂತೆ ಕೇವಲ ಹತ್ತೇ ವರ್ಷಗಳಲ್ಲಿ ಮಾಡಿಕೊಟ್ಟ ಮನುಷ್ಯನಿಗೆ ೧೯೬೦ ರಲ್ಲಿ "ಪದ್ಮಶ್ರೀ" ಬಿರುದನ್ನು ಕೊಟ್ಟು ರಾಷ್ಟ್ರವು ಗೌರವಿಸಿತು.

ಇದನ್ನು ಸಾಧಿಸಿದ ಮನುಷ್ಯ ಹತ್ತಿಪ್ಪತ್ತು ವರ್ಷ ಕಾಲ ಗ್ರಂಥಾಲಯಗಳಲ್ಲಿ ದುಡಿದು "ಅನುಭವದಲ್ಲಿ ಹಣ್ಣಾದ" ವರಲ್ಲ ಎಂಬುದು ಇದರಲ್ಲಿ ಸೋಜಿಗದ ಮಾತು. ಅವರು ಕನ್ನಡಿಗ ಎಂಬುದು ನಮಗೆ ಅಭಿಮಾನದ ಮಾತು. ಅವರ ಹೆಸರು ಬಿ. ಎಸ್. ಕೇಶವನ್— ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಹುದ್ದೆಯಲ್ಲಿದ್ದ ಇವರು ಭಾರತದ ಅತಿ ಪ್ರಚಂಡ ಗ್ರಂಥಾಲಯದ ಪ್ರಪ್ರಥಮ ಮುಖ್ಯ ಭಂಡಾರಿಯಾದರು; ಆಗಿ ಐದು ವರ್ಷಗಳಲ್ಲಿ ಅಖಿಲ ಭಾರತ ಗ್ರಂಥಾಲಯ ಸಂಘದ ಅಧ್ಯಕ್ಷ ಪದವಿಗೆ ಆರಿಸಲ್ಪಟ್ಟರು. ಅವರ ಸಾಮರ್ಥ್ಯಕ್ಕೆ ಬೇರೆ ನಿದರ್ಶನ ಬೇಕೆ? "ಪದ್ಮಶ್ರೀ" ಬಿರುದು ಸಿಕ್ಕಿದಾಗ ಅವರಿಗೆ ೫೦ ದಾಟಿತ್ತಷ್ಟೇ. ಗ್ರಂಥಾಲಯ ರಂಗದಲ್ಲಿ ದುಡಿದು ಈ ಪದವಿಯನ್ನು ಇವರಿಗಿಂತ ಮೊದಲು ಪಡೆದವರೆಂದರೆ ವಿಶ್ವವಿಖ್ಯಾತ ಡಾ. ರಂಗನಾಥನ್ ಒಬ್ಬರು ಮಾತ್ರ.

ಶ್ರೀಮಾನ್ ಬಿ. ಎಸ್. ಕೇಶವನ್ ಮೈಸೂರಿನ ಖ್ಯಾತಿವೆತ್ತ ಎಂಜಿನಿಯರರಾದ ಶ್ರೀ ಎಸ್. ಬಿ. ಅಯ್ಯಂಗಾರ್ ಅವರ ಮಗ. ಅವರು ಹುಟ್ಟಿದ್ದು ೧೯೦೯ ರಲ್ಲಿ—ಮದ್ರಾಸಿನಲ್ಲಿ. ಅವರ ವಿದ್ಯಾಭ್ಯಾಸದ ಬಹುಭಾಗ ಬೆಂಗಳೂರಲ್ಲಿ

ಆಯಿತು. ಶ್ರೀ ಎ. ಎನ್. ಮೂರ್ತಿರಾವ್, ದಿನಕರ ದೇಸಾಯಿ, ಕೆ. ಗೋಪಾಲಕೃಷ್ಣರಾವ್, ಬಿ. ಆರ್. ನಾಯಕ್, "ಆರಯ್ಯ" (ಎನ್. ಎಸ್. ರಾಮಚಂದ್ರಯ್ಯ), ಆರ್. ಕೆ. ಲಕ್ಷ್ಮಣ ಇವರೆಲ್ಲ ಅವರ ಸಹಪಾಠಿಗಳಾಗಿದ್ದವರು. ಬೆಂಗಳೂರಿನ ಸೆಂಟ್ರಲ್ ಕಾಲೇಜು ಮತ್ತಾವ ಕಾಲದಲ್ಲೂ ಇಷ್ಟೆಲ್ಲ ಭಾವಿ ಪ್ರಸಿದ್ಧ ಪುರುಷರನ್ನು ಏಕಕಾಲದಲ್ಲಿ ತರಬೇತು ಮಾಡುತ್ತಿರಲಿಕ್ಕಿಲ್ಲ.

ಆಗಲೇ ಕೇಶವನ್ ಅಪರಿಮಿತ ಚಟುವಟಿಕೆಯ ಪ್ರತಿಭಾವಂತರಾಗಿದ್ದರು. ಇಂಗ್ಲೀಷಿನ ಮೇಲೆ ಅವರ ಪ್ರಭುತ್ವ ಪ್ರೊ. ರೋಲೋ, ಪ್ರೊ. ಈಗಲ್ಟನ್ ಅಂಥವರನ್ನು ಚಕಿತಗೊಳಿಸಿತ್ತು. "ಇವರು ಸಂಸ್ಕೃತ ಸಂಘಕ್ಕೆ ಕಾರ್ಯದರ್ಶಿಯಾಗಿ, ಚರ್ಚಾ ಸಂಘಕ್ಕೆ ಅಧ್ಯಕ್ಷರಾಗಿ, ಸಾಹಿತ್ಯ ಸಂಘದಲ್ಲಿ, ಇಂಗ್ಲೀಷ್ ಹೇಳಿಕೊಡುವ ಆಂಗ್ಲೇಯ ಪ್ರೊಫೆಸರರನ್ನು ಕೂಡಿಸಿ ಸ್ವತಃ ಆಂಗ್ಲ ಕಾವ್ಯಗಳಿಗೆ ವ್ಯಾಖ್ಯಾನ ಮಾಡುವಷ್ಟು ಸುಸಂಸ್ಕೃತರಾಗಿದ್ದರು" ಎಂದು ಆರಯ್ಯನವರು ತಮ್ಮ "ನಾ ಕಂಡ ಕರ್ನಾಟಕ" ದಲ್ಲಿ ಹೇಳಿದ್ದಾರೆ. ಅವರು ಕನ್ನಡ ಸಂಘದ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರೂ ಆಗಿದ್ದರು.

ಬಿ. ಎ. ಮುಗಿಸಿ ಇಂಗ್ಲೀಷಿನ ಹೆಚ್ಚಿನ ವ್ಯಾಸಂಗಕ್ಕಾಗಿ ಲಂಡನ್ನಿನಲ್ಲಿ ಏಳು ವರ್ಷ ಕಳೆದ ಕೇಶವನ್ನರ ಶಿಕ್ಷಣಕ್ಕಾಗಿ ತಂದೆ ಎಸ್. ಬಿ. ಅಯ್ಯಂಗಾರರ ಆಪದ್ಧನವೆಲ್ಲ ಕರಗಿ ತಾಯಿ ಪಂಕಜಮ್ಮನವರ ಸ್ತ್ರೀಧನ ನೆರವಿಗೆ ಬರಬೇಕಾಯಿತು. ಲಂಡನ್ನಿನಲ್ಲಿದ್ದಾಗ ಅವರು ಅತ್ಯಂತ ಜನಪ್ರಿಯ ವಿದ್ಯಾರ್ಥಿಗಳಲ್ಲೊಬ್ಬರಾಗಿದ್ದರು. ಈ ಆರಡಿ ಎತ್ತರದ ಕೆಂಬಣ್ಣದ ಅಜಾನುಬಾಹು ತರುಣನ ವ್ಯಕ್ತಿತ್ವ ಯಾರನ್ನೂ ಹಿಡಿದು ನಿಲ್ಲಿಸುವಂತಿತ್ತು. ಯಾವಾಗಲೂ ಅವರ ಸುತ್ತ ಮಿತ್ರರ ದಂಡು ನೆರೆದಿರುತ್ತಿತ್ತು. ಸರ್ವಾಂತರ್ಯಾಮಿಯಂತೆ ಎಲ್ಲೆಲ್ಲಿಯೂ ಅವರಿರುತ್ತಿದ್ದರು. ಬರ್ಕ್‌ಬೆಕ್ ಕಾಲೇಜಿನ ಚರ್ಚಾ ಸಂಘದಲ್ಲಿ ಅವರಿತ್ತ ಒಂದು ಭಾಷಣ ಶ್ರೋತೃಗಳನ್ನು ದಂಗುಬಡಿಸಿತು. ಅವರು ಲಂಡನ್ನಿನ ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಶೇಕ್ಸ್‌ಪಿಯರ್ ಮೇಲೆ ಸಂಶೋಧನ ಪ್ರಬಂಧ ಬರೆದು ಲಂಡನ್ ವಿಶ್ವವಿದ್ಯಾಲಯದ ಎಂ. ಎ. ಪದವಿ ಸಂಪಾದಿಸಿದರು; ಅನಂತರ ಬ್ರಿಟಿಶ್ ಮ್ಯೂಜಿಯಂ ಪುಸ್ತಕಾಲಯದಲ್ಲಿ ಹಗಲಿರುಳು ದುಡಿದು ಬ್ರಿಟಿಶ್ ಗ್ರಂಥಾಲಯ ಸಂಘದ ಫೆಲೋ ಆಗಿ ಆಯ್ಕೆಗೊಂಡರು; ಯುರೋಪಿನಲ್ಲೆಲ್ಲ ಸುತ್ತಾಡಿ ಬಹುಭಾಷಾ ಪ್ರಾವೀಣ್ಯವನ್ನು ಹೊಂದಿದರು; ಹೀಗೆ ವಿದ್ಯೆಯಲ್ಲಿ ಪ್ರಥಮ ವರ್ಗದ ಯಶಸ್ಸು ಗಳಿಸಿ ೧೯೩೭ರಲ್ಲಿ ಮೈಸೂರಿಗೆ ಹಿಂದಿರುಗಿದಾಗ ಅವರಿಗೆ ಕೇವಲ ರೂ. ೧೫೦ ರ ಲೆಕ್ಚರರ್ ಕೆಲಸ ಕಾದಿತ್ತು. ಅಸಿಸ್ಟಂಟ್ ಪ್ರೊಫೆಸರ್ ಮಟ್ಟಕ್ಕೇರಲು ಅವರಿಗೆ ಮತ್ತೆ ಒಂಭತ್ತು ವರ್ಷ ಹಿಡಿಯಿತು. ಮತ್ತಾವ ಮನುಷ್ಯನಾಗಿದ್ದರೆ ಇಂಥ ಅಭಿಭೂತಿಯಿಂದ ಮುದುಡಿಕೊಂಡು ಮಾನವ ದ್ವೇಷಿಯಾಗಿ ರೂಪುಗೊಳ್ಳಬಹುದಿತ್ತು. ಆದರೆ ಕೇಶವನ್ನರ ಹೃದಯ ಯಾವಾಗಲೂ ಬಹಿರ್ಗಾಮಿ. ವಿದ್ಯಾರ್ಥಿಗಳ ಬಾಂಧವ್ಯ ಅವರನ್ನು ಸೆರೆ ಹಿಡಿದುಬಿಟ್ಟಿತ್ತು. ಅವರಂತೆ ವಿದ್ಯಾರ್ಥಿಗಳಲ್ಲಿ ಏಕಜೀವವಾಗಿ ಬೆರೆತು ಬಾಳಿದ ಅಧ್ಯಾಪಕರು ದುರ್ಲಭ. ವಿಮರ್ಶೆ ಮತ್ತು ಸಹಾನುಭೂತಿ, ಪಾಂಡಿತ್ಯ ಮತ್ತು ಸಹೃದಯತೆ, ಸತ್ಯಪ್ರಿಯತೆ ಮತ್ತು ನಿರೂಪಣಾಲಾಲಿತ್ಯ ಇಂಥ ಅಪೂರ್ವ ಸಮ್ಮಿಶ್ರಣವಿತ್ತು ಅವರಲ್ಲಿ. ಸೆಂಟ್ರಲ್ ಕಾಲೇಜಿಗೆ ಅವರನ್ನು ಹುಡುಕಿಕೊಂಡು ಬಂದವರಾರೂ "ಕೇಶವನ್ ಎಲ್ಲಿ?" ಎಂದು ಕೇಳಬೇಕಾಗಿರಲಿಲ್ಲ. ಯಾವ ಕೊಠಡಿ ವಿದ್ಯಾರ್ಥಿಗಳಿಂದ ಕಿಕ್ಕಿರಿದಿರುತ್ತಿತ್ತೋ, ಎಲ್ಲಿ ನಗುವಿನ ಲಹರಿ ಹರಿಯುತ್ತಿತ್ತೋ ಅಲ್ಲಿ ಕೇಶವನ್ ಇದ್ದರು ಎಂಬುದು ಗೃಹೀತವಾಗಿತ್ತು. ಕೇಶವನ್ ಅವರಿಂದ ಕಾಮನ್ ರೂಂಗೆ ಎಂತು ಜೀವಕಳೆ ಬರುತ್ತಿತ್ತೆಂಬುದನ್ನು ಶ್ರೀ ಎ. ಎನ್. ಮೂರ್ತಿರಾಯರ ಬಾಯಿಂದ ಕೇಳಬೇಕು. ಇಂಗ್ಲಿಷ್ ನಾಟಕಗಳಲ್ಲಿ ಅವರ ಅಭಿನಯಕ್ಕೆ ಮನಸೋಲದ ಪ್ರೇಕ್ಷಕರೇ ಇರಲಿಲ್ಲ.

ಲೋಹಚುಂಬಕವು ಕಬ್ಬಿಣವನ್ನು ಗುರುತಿಸುವ ಹಾಗೆ ಪ್ರತಿಭೆಯನ್ನು ಗುರುತಿಸುವವರು ಕೇಶವನ್. ಹಾಗೆ ಗುರುತಿಸಿದ ಪ್ರತಿಭೆ ಬಡ ವಿದ್ಯಾರ್ಥಿಯಲ್ಲಿದ್ದರೆ ಅವನನ್ನು ಹುರಿದುಂಬಿಸಿ ಅವನಿಗೆ ಸಹಾಯ ಮಾಡಿ ಮುಂದೆ ತರುತ್ತಿದ್ದರು. "ವಿದ್ಯಾರ್ಥಿಯಾಗಿ ಓದುವುದು ನಿನ್ನ ಕರ್ತವ್ಯ. ಉಳಿದುದೆಲ್ಲ ನಿನ್ನ ಅಧ್ಯಾಪಕರಾದ ನಮ್ಮ ಕರ್ತವ್ಯ" ಎಂದು ಅವನಿಗೆ ಪರೀಕ್ಷೆಗೆ ಕೂಡಲು ನೆರವಾಗುತ್ತಿದ್ದರು. ೧೯೪೬ ರಲ್ಲಿ ಅದೇ ತಾನೆ ದೊರೆತ ಅಸಿಸ್ಟೆಂಟ್ ಪ್ರೊಫೆಸರ್ ಹುದ್ದೆಗೆ ರಾಜೀನಾಮೆಯಿತ್ತು ಅವರು ದಿಲ್ಲಿಗೆ ಹೊರಟಾಗ ಅವರ ವಿದ್ಯಾರ್ಥಿಗಳಿಗೆ ಮಹಾನಿಧಿಯೊಂದನ್ನು ಕಳೆದುಕೊಂಡ ವ್ಯಥೆಯಾಯಿತು.

ಕೇಶವನ್ ಹೋದೆಡೆಯಲ್ಲೆಲ್ಲ ಸ್ನೇಹಿತರು ಬೆಲ್ಲವನ್ನು ಇರುವೆಗಳಂತೆ ಅವರನ್ನು ಮುತ್ತುತ್ತಾರೆ. ಪಂಡಿತರು, ವಿದ್ಯಾವಂತರು, ಸುಸಂಸ್ಕೃತರು, ಜಟಕಾಗಾಡಿಯವರು, ಟ್ಯಾಕ್ಸಿ ಡ್ರೈವರರು ಎಲ್ಲರೂ ಇವರ ಮಿತ್ರರೇ. ಮಂತ್ರಿಗಳಿಂದ ಹಿಡಿದು ಆಳುಗಳ ವರೆಗೆ ಎಲ್ಲರಲ್ಲಿ ಇವರಿಗೆ ಸ್ನೇಹವೇ, ಮರ್ಯಾದೆಯೆ.

ಆಚೆ ವರ್ಷ ಅವರು ಬೆಂಗಳೂರಿಗೆ ಬಂದಾಗ ಅವರ ಚಿಕ್ಕಪ್ಪನವರಿಗೆ ಅಸ್ವಸ್ಥವಾಗಿತ್ತು. ಸರಿ,ಕೇಶವನ್ ಅವರ ಸೇವೆಗಾಗಿ ಆಸ್ಪತ್ರೆಯಲ್ಲೇ ನಿಂತುಬಿಟ್ಟರು. ಅವರನ್ನು ಕಾಣಲು ಮನೆಗೆ ಬಂದ ಮಹನೀಯರು ಶ್ರೀಮತಿ ಕೇಶವನ್ನರ ಹತ್ತಿರ ಬೆಂಗಳೂರಿಗೆ ಬಂದರೂ ಇವರ ದರ್ಶನ ಸಿಗುವುದು ಕಷ್ಟವಾಯಿತಲ್ಲಾ ಎಂದು ದೂರಿದಾಗ ಶ್ರೀಮತಿಯವರು, "ನಿಮಗಾದ ಪರಾಭವಗಳು ನನಗೂ ಕಲಕತ್ತೆಯಲ್ಲಿ ಅನೇಕ ವೇಳೆ ಆಗುತ್ತವೆ" ಎಂದುತ್ತರಿಸಿದರು.

ಈಚೆಗೊಮ್ಮೆ ಅವರು ಬೆಂಗಳೂರಿಗೆ ಬಂದಾಗ ನಾನು ಅವರೊಡನೆ ಬಿ. ಟಿ. ಸಿ. ಬಸ್ಸಿನಲ್ಲಿ ಪ್ರಯಾಣ ಮಾಡುತ್ತಿದ್ದೆ. ವಯಸ್ಸಾದ ಮಹಿಳೆಯೊಬ್ಬರು ಬಸ್ ಹತ್ತಿ ಸ್ಥಳವಿಲ್ಲದ್ದರಿಂದ ಹಾಗೇ ನಿಂತಿದ್ದನ್ನು ನೋಡಿ ಕೇಶವನ್ ಎದ್ದು ಅವರಿಗೆ ತಮ್ಮ ಸ್ಥಳವನ್ನು ಬಿಟ್ಟುಕೊಟ್ಟರು. ಆ ಮೇಲೆ ಬಂದ ಸುಸಂಸ್ಕೃತ ವೇಷ ಭೂಷಣ ಧರಿಸಿದ ಮಹನೀಯರೊಬ್ಬರು "ಹೆಂಗಸರಿಗಾಗಿ ಕಾದಿರಿಸಿದ ಸ್ಥಳದಲ್ಲಿ ಕುಳಿತುಕೊಳ್ಳಿ" ಎಂದು ಆ ಮಹಿಳೆಯನ್ನೆಬ್ಬಿಸಿ ತಾವು ಕುಳಿತುಕೊಂಡರು. ಆಗ ಕೇಶವನ್ನರ ಮುಖ ಬೇರೆಡೆ ತಿರುಗಿತ್ತು. ಅವರು ಈಚೆಗೆ ತಿರುಗಿದೊಡನೆ ಆ ವ್ಯಕ್ತಿ ಅವರನ್ನು ಕಂಡು ಜಾಗಬಿಟ್ಟೆದ್ದು ಕೇಶವನ್ನರಿಗೆ ಸ್ಥಳ ಕೊಟ್ಟರು. ಮತ್ತೆ ಆ ಮಹಿಳೆಗೆ ಆ ಸ್ಥಳ ಸಿಕ್ಕಿತೆಂದು ಹೇಳಬೇಕಾಗಿಯೆ ಇಲ್ಲ.

ಮೈಸೂರು ವಿಶ್ವವಿದ್ಯಾಲಯದ ಸೇವೆ ಬಿಟ್ಟ ಮೇಲೆ ಕೇಶವನ್ ಕೇಂದ್ರ ಸರಕಾರದ ಸಚಿವಾಲಯವನ್ನು ಸೇರಿ ಆರಂಭದಲ್ಲಿ "ವೆಲ್ತ್ ಆಫ್ ಇಂಡಿಯ"ದ ಸಂಪಾದಕರಾದರು. ಅನಂತರ ಶಿಕ್ಷಣಶಾಖೆಯನ್ನು ಸೇರಿ ಮೌಲಾನಾ ಆಜಾದರ ಖಾಸಗಿ ಕಾರ್ಯದರ್ಶಿಯಾಗಿ ತಮ್ಮ ಕರ್ತೃತ್ವ ಶಕ್ತಿಯನ್ನು ತೋರಿಸಿದರು. ೧೯೪೮ ರಲ್ಲಿ ರಾಷ್ಟ್ರೀಯ ಗ್ರಂಥಾಲಯವನ್ನು ಪ್ರಾರಂಭಿಸುವ ನಿರ್ಣಯವಾದಾಗ ಕೇಂದ್ರ ಸರಕಾರಕ್ಕೆ ಅದರ ಪ್ರಥಮ ಸಂಚಾಲಕತ್ವದ ಘನತರವಾದ ಹೊಣೆಗೆ ಕೇಶವನ್ನರಷ್ಟು ಅರ್ಹರಾದವರು ಬೇರೆ ಸಿಗಲಿಲ್ಲ.

ಈ ಹನ್ನೆರಡು ವರ್ಷಗಳಲ್ಲಿ ಪವಾಡವೆಂಬಂತೆ ಈ ಗ್ರಂಥಾಲಯದ ಏರ್ಪಾಡು ನಡೆದಿದೆ. ನಮ್ಮ ದೇಶಕ್ಕೆ ಸಂಬಂಧಿಸಿದ ಪ್ರಾಚೀನ ಅರ್ವಾಚೀನ ಗ್ರಂಥಗಳು ಯಾವ ದೇಶದ ಮೂಲೆಯಲ್ಲಿರಲಿ ಅದನ್ನು ಗ್ರಂಥಾಲಯಕ್ಕೆ ತರುವುದಕ್ಕಾಗಿ ಪುನಃ ಪುನಃ ವಿದೇಶ ಸಂಚಾರ ಮಾಡಿ ದೇಹಶ್ರಮವನ್ನು ಲೆಕ್ಕಿಸದೆ ಅವರು ದುಡಿದಿದ್ದಾರೆ. ಯಾವ ದೇಶದ ಯಾವ ಭಾಷೆಯ ಉತ್ತಮ ಗ್ರಂಥವಿದ್ದರೂ ಅದರ ಪ್ರತಿ ತಮ್ಮ ಗ್ರಂಥಾಲಯದಲ್ಲಿರಬೇಕೆಂದು ಅವರಿಗೆ ಹಂಬಲ.

ಈ ಕಾರ್ಯಕ್ಕೆ ಅವರಲ್ಲಿ ಪೂರ್ಣ ಯೋಗ್ಯತೆಯೂ ಇದೆ. ಆಂಗ್ಲ ಭಾಷೆಯಲ್ಲಿ ಹೇಗೋ ಹಾಗೆಯೆ ಕನ್ನಡ, ಸಂಸ್ಕೃತಗಳಲ್ಲಿಯೂ ಅವರಿಗೂ ಪೂರ್ಣ ಪಾಂಡಿತ್ಯವಿದೆ. ತಮಿಳು ತೆಲುಗು ಬಾಲ್ಯದಲ್ಲೇ ಗೊತ್ತಿತ್ತು. ವಿದೇಶದಲ್ಲಿದ್ದಾಗ ಜರ್ಮನ್ ಕಲಿತರು. ಭಾರತದ ವಿವಿಧ ಪ್ರಾಂತಗಳಲ್ಲಿ ಸ್ವಲ್ಪ ಸ್ವಲ್ಪ ಕಾಲ ಇದ್ದುದರಿಂದ

ಹಿಂದಿ, ಉರ್ದು, ಬಂಗಾಲಿ, ಮರಾಠಿ, ತುಳು ಭಾಷೆಗಳನ್ನೂ ಅವರು ಆಯಾ ಪ್ರಾಂತದವರಂತೆಯೆ ಮಾತಾಡಬಲ್ಲರು.

ಇಂಥ ಪ್ರತಿಭಾನ್ವಿತ ವ್ಯಕ್ತಿಯಲ್ಲಿ ಮಗುವಿನ ಮನಸ್ಸು ಇದೆ. ಒಂದು ಸಲ ತರಗತಿಯಲ್ಲಿ ಒಬ್ಬ ವಿದ್ಯಾರ್ಥಿ ಅವಿಧೇಯನಾಗಿ ಎದುರುತ್ತರವಿತ್ತಾಗ ಕೇಶವನ್ನರು ಒಂದು ನಿಮಿಷ ಕಣ್ಣಲ್ಲಿ ಅಶ್ರುಧಾರೆ ಹರಿಸಿ ಮತ್ತೆ ಮೌನವಾಗಿ ಪಾಠವನ್ನು ಮುಂದುವರಿಸಿದರು. (ಈ ವಿದ್ಯಾರ್ಥಿ ಮತ್ತಾರೂ ಆಗಿರದೆ ಈಗ ಕೇಂದ್ರ ಆಹಾರ ಸಚಿವರಾಗಿರುವ ಎಂ. ವಿ. ಕೃಷ್ಣಪ್ಪನವರಾಗಿದ್ದರು). ಆ ದಿನ ಇಡೀ ವರ್ಗವೆ ದುಃಖದಿಂದ ಕೂಡಿ ಅವರಲ್ಲಿ ತಮ್ಮ ತಪ್ಪನ್ನು ಮನ್ನಿಸಿರೆಂದು ಬೇಡಿತು.

ಹತ್ತು ವರ್ಷಗಳ ಹಿಂದೆ ಅವರೊಮ್ಮೆ ಮೈಸೂರಿಗೆ ಬಂದಿದ್ದರು. ನಾವು ರಬ್ಬರ್ ಚಂಡಿನಿಂದ ಕ್ರಿಕೆಟ್ ಆಡುತ್ತಿದ್ದೆವು. ಆಗ ತಾನೆ ಕೇಶವನ್ ಒಬ್ಬ ಆಂಗ್ಲ ಮಹಿಳೆಯೊಡನೆ ಕಾರಿನಲ್ಲಿ ಬಂದಿಳಿದರು. ಬಂದವರೇ ಅವರು ನಮ್ಮಣ್ಣನಿಂದ ಚೆಂಡು ಕಸಿದುಕೊಂಡು ಬೌಲಿಂಗ್ ಶುರು ಮಾಡಿದರು. ಅರ್ಧ ತಾಸು ಕಳೆದ ಮೇಲೆ ಅವರಿಗೆ ಏನೋ ನೆನಪು ಬಂತು. ಚೆಂಡನ್ನು ಕೊಟ್ಟು ಅವರು ಕಾರಿಗೆ ಹಿಂತಿರುಗಿ ಅಲ್ಲಿ ಸ್ತಬ್ಧವಾಗಿ ನಿಂತಿದ್ದ ಮಹಿಳೆಯ ಬಳಿ ಹೋಗಿ ಕ್ಷಮೆ ಕೇಳಿದರು. ಆ ಮಹಿಳೆಗೆ ಇವರ ಸ್ವಭಾವ ಗೊತ್ತೇ ಇತ್ತು. ಅವಳು ಹೇಳಿದಳು: " You look more like a child than any of these children " (ನೀವು ಇವರಾರಿಗಿಂತಲೂ ಹೆಚ್ಚಾಗಿ ಮಗುವಿನ ಹಾಗಿದ್ದೀರಿ).

ಕೇಶವನ್ನರ ದೈವಭಕ್ತಿ ಅಪಾರವಾದದ್ದು. ಇವರ ದಿನಚರಿ ಪ್ರಾತಃಕಾಲದಲ್ಲಿ ದೈವಸ್ತುತಿರೂಪವಾದ ಸಂಸ್ಕೃತ ಶ್ಲೋಕಗಳಿಂದ ಪ್ರಾರಂಭವಾಗಿ ಸಾಯಂಕಾಲ ಪುನಃ ಅಂಥ ಶ್ಲೋಕಗಳಿಂದ ಕೊನೆಗಾಣುತ್ತದೆ. ಆಂಜನೇಯನ ಮೇಲಂತೂ ಅವರಿಗೆ ಅತ್ಯಂತ ಭಕ್ತಿ. ಇಂಡೋ ಅಮೇರಿಕನ್ ಸಂಸ್ಥೆಯ ಸಂಸ್ಥಾಪಕರಲ್ಲೊಬ್ಬರಾದ ಅವರು ಕೆಲ ಕಾಲ ಹಿಂದೆ ಆ ಸಂಘದ ಉದ್ಘಾಟನಾ ಸಮಾರಂಭದಲ್ಲಿ ಮಾಡಿದ ಭಾಷಣ ಈ ದೈವಭಕ್ತಿಯ ಉಜ್ವಲ ಜ್ಯೋತಿಯಂತಿದೆ. "ಅಮೇರಿಕದ ರಾಯಭಾರಿ ಎಲ್ಸ್‌ವರ್ತ ಬಂಕರರನ್ನು ಇಲ್ಲಿಗೆ ಸ್ವಾಗತಿಸುವಾಗ ನಾನು ನಮ್ಮೀ ಸಂಬಂಧ ಬರಿ ಔಪಚಾರಿಕವಾಗಿ ಉಳಿಯಲಾರದೆಂದು ಭಾವಿಸುತ್ತೇನೆ. ಅದು ದೇವರ ಭಯ, ಮಾನವನಲ್ಲಿ ಪ್ರೇಮ ಮತ್ತು ಮಾನವನ ಭವಿತವ್ಯದಲ್ಲಿ ವಿಶ್ವಾಸ ಇವುಗಳತ್ತ ಅವಿರತವಾಗಿ ಮುನ್ನಡೆಯುವುದೆಂದು ನಂಬಿದ್ದೇನೆ" ಎಂದವರು ಹೇಳಿದರು.

[ರಾಷ್ಟ್ರೀಯ ಗ್ರಂಥಾಲಯ ಕಳೆದ ವರ್ಷ ಇನ್ನೊಂದು ದೊಡ್ಡ ಹೆಜ್ಜೆಯಿಟ್ಟಿದೆ. ಅದೇ ಮಕ್ಕಳ ಗ್ರಂಥಾಲಯದ ಪ್ರಾರಂಭ. ರಾಷ್ಟ್ರೀಯ ಗ್ರಂಥಾಲಯದ ಪಕ್ಕದಲ್ಲೇ ಇದನ್ನು ಸ್ಥಾಪಿಸಲಾಗಿದೆ. ಇಲ್ಲಿ ಮಕ್ಕಳ ಸಾಹಿತ್ಯವನ್ನೇ—ನಾನಾ ಭಾಷೆಗಳಲ್ಲಿ-ಸಂಗ್ರಹಿಸಿದೆ. ಅದರ ಕಲ್ಪನೆಯೆಲ್ಲ ಕೇಶವನ್ನರದೇ. ಮಕ್ಕಳಿಗೊಂದು ಕನಸಿನ ಲೋಕದಂತಿರುವ ಈ ಗ್ರಂಥಾಲಯದ ಸ್ಥಾಪನೆಗಾಗಿ ನಾಡಿನ ಮಕ್ಕಳೂ ಕೇಶವನ್ನರನ್ನು ಹಾಡಿ ಹರಸುವುದು ಖಂಡಿತ.] ★



ನಮ್ಮ ಧ್ಯೇಯ ಸುಖವಲ್ಲ; ಸತ್ಯ ಎಂಬುದನ್ನು ನಾವು ತಿಳಿಯಬೇಕು.

— ಸಾಕ್ರಟಿಸ್

# ದಂತಕ್ಷಯವನ್ನು ಕಾಲ್ಗೇಟಿನಿಂದ ಇದಿರಿಸಿರಿ

## ದಿನವಿಡೀ ಇರುವ **ಬಾಯಿಯ ದುರ್ಗಂಧವನ್ನು ತೊಲಗಿಸಿರಿ!**

ಏಕೆಂದರೆ: ಕಾಲ್ಗೇಟ್ ಡೆಂಟಲ್ ಕ್ರೀಮಿನಿಂದ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿ ವಾಸನೆಯನ್ನೀಯುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85 ರಷ್ಟು ಕ್ರಿಮಿಗಳು ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜಿದರೆ ದಂತ ಚೂರ್ಣಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟುವುದು ಮತ್ತು ಕಾಲ್ಗೇಟ್‌ನಿಂದ ಬಾಯಿಯ ದುರ್ಗಂಧವು 10ರಲ್ಲಿ 7 ಸಂದರ್ಭಗಳಲ್ಲಿ ತಕ್ಷಣವೇ ನಿವಾರಣೆಯಾಗುವುದು ಎಂದು ವೈಜ್ಞಾನಿಕ ಪರೀಕ್ಷೆಗಳು ಪ್ರಮಾಣಪಡಿಸಿವೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಇದರ ಪ್ರಬಲವಾದ, ಒಳನುಗ್ಗುವ ನೊರೆಯು ಹಲ್ಲುಗಳ ನಡುವಣ ಅಗೋಚರ ಸಂದುಗಳನ್ನು ಪ್ರವೇಶಿಸಿ, ಬಹಳ ದಂತಕ್ಷಯ ಮತ್ತು ಬಾಯಿಯ ದುರ್ಗಂಧಕ್ಕೆ ಕಾರಣವಾಗುವ ಕೊಳೆಯುತ್ತಿರುವ ಆಹಾರ ಕಣಗಳನ್ನು ತೊಲಗಿಸುವುದು.

ಹೆಚ್ಚು ಕಾಲ ಬಾಳುವ ಕಾಲ್ಗೇಟಿನ ಪರಿಮಳದ ರುಚಿಯು ಮಕ್ಕಳಿಗೆ ಪ್ರಿಯವಾಗಿರುವುದರಿಂದ ಅವರ ಹಲ್ಲುಜ್ಜಲು ಕಾಲ್ಗೇಟನ್ನೇ ಬಯಸುವರು.



ಕಾಲ್ಗೇಟಿನಿಂದ ನಿಯಮಿತವಾಗಿ ಉಜ್ಜುವಿಕೆಯು

- ✓ ದಂತಕ್ಷಯವನ್ನಿದಿರಿಸುವುದು
- ✓ ಬಾಯಿಯ ದುರ್ಗಂಧವನ್ನು ತೊಲಗಿಸುವುದು
- ✓ ಹಲ್ಲುಗಳನ್ನು ಪರಿಶುಭ್ರವಾಗಿಡುವುದು




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದ ಪಡೆಯಿರಿ... ಒಂದು ಡಬ್ಬಿ ಹಲವು ತಿಂಗಳವರೆಗೆ ಉಳಿಯುವುದು!




ಶುಭ್ರ ಹಲ್ಲುಗಳಿಗೆ ಮತ್ತು ನಿರ್ಮಲ ಶ್ವಾಸಕ್ಕೆ...ಹೆಚ್ಚಿನ ಜನರು ಪ್ರಪಂಚದ ಇತರ ಯಾವ ಡೆಂಟಲ್ ಕ್ರೀಂಗಿಂತಲೂ ಅಧಿಕವಾಗಿ ಕಾಲ್ಗೇಟನ್ನೇ ಕೊಳ್ಳುವರು.

ಕ್ರೈಸ್ತ ಧರ್ಮದ ಮೂಲ ಸ್ವರೂಪ
ಭಾರತದ ಧಾರ್ಮಿಕ ಪರಂಪರೆಯಿಂದ
ಪ್ರಭಾವಿತವಾಗಿದ್ದ.

# ಯೇಸುಕ್ರಿಸ್ತ ಭಾರತಕ್ಕೆ ಬಂದಿದ್ದನೇ ?

ಮೂಲ ಹಿಂದಿ: ಆಚಾರ್ಯ ನರದೇವ ಶಾಸ್ತ್ರಿ
ಅನುವಾದಕರು: ಸವ್ಯಸಾಚಿ

ಲೋಕಮಾನ್ಯ ತಿಲಕರ ಗೀತಾರಹಸ್ಯದಲ್ಲಿ ಹೀಗಿದೆ: "ಯೇಸು ತನ್ನ ೧೨ ನೇ ವರ್ಷ ವಯಸ್ಸಿನಿಂದ ಎಲ್ಲಿ ಏನು ಮಾಡುತ್ತ ಇದ್ದ— ಎಂಬುದರ ಬಗ್ಗೆ ಬೈಬಲಿನಲ್ಲಿ ಯಾವ ಉಲ್ಲೇಖವೂ ದೊರೆಯುವುದಿಲ್ಲ. ಈ ವೇಳೆಯನ್ನವನು ಜ್ಞಾನಾರ್ಜನೆಯಲ್ಲೋ ಧರ್ಮಚಿಂತನೆಯಲ್ಲೋ ಅಥವಾ ಪ್ರವಾಸದಲ್ಲೋ ಕಳೆದಿರಬೇಕೆಂದು ಊಹಿಸಲೆಡೆಯಿದೆ. ಈ ಅವಧಿಯಲ್ಲಿ ಅವನು ಬೌದ್ಧ ಭಿಕ್ಷುಗಳೊಡನೆ ಸಂಪರ್ಕ ಬೆಳೆಸಿರಲಾರನೆಂದು ಅದೆಂತು ಹೇಳಲು ಸಾಧ್ಯ? ಏಕೆಂದರೆ ಆ ಹೊತ್ತಿಗಾಗಲೆ ಬೌದ್ಧ ಭಿಕ್ಷುಗಳು ಗ್ರೀಸ್ ವರೆಗೂ ತಲುಪಿದ್ದರು. ನೇಪಾಳದ ಬೌದ್ಧಮಠವೊಂದರ ಗ್ರಂಥಾಲಯದಲ್ಲಿ ದೊರೆತ ಪುಸ್ತಕದಲ್ಲಿ ಯೇಸು ಭಾರತಕ್ಕೆ ಬಂದಿದ್ದನೆಂದು ಸ್ಪಷ್ಟವಾಗಿ ಬರೆಯಲ್ಪಟ್ಟಿದೆ. ಈ ಗ್ರಂಥವನ್ನು ರಶ್ಯನ್ ಪ್ರವಾಸಿಯಾದ ನಿಕೋಲಸ್ ನೊಟೋವಿಶ್ ನೋಡಿದ್ದ. ಅವನು ಆ ಗ್ರಂಥವನ್ನು ೧೮೯೪ ರಲ್ಲಿ ಫ್ರೆಂಚ್ ಭಾಷೆಯಲ್ಲಿ ಪ್ರಕಟಗೊಳಿಸಿದ್ದ."

ನೊಟೋವಿಶ್ ಹೀಗೆಂದಿದ್ದಾನೆ:- ನಾನು ಸುಂದರ ದೇಶಗಳನ್ನು ನೋಡಬೇಕೆಂಬ ಅಭಿಲಾಷೆಯೊಂದನ್ನೇ ಗುರಿಯಾಗಿಟ್ಟುಕೊಂಡು ನನ್ನ ನಾಡನ್ನು ತೊರೆದು ಹೊರಟೆದ್ದೆ. ನಾನು ಟಿಬೇಟಿಗೆ ತಲುಪಿದಾಗ ಅಲ್ಲಿಯ ಲಾಮಾರಿಗೆ ಯೇಸುವಿನ ಹೆಸರು ಗೊತ್ತಿರುವುದು ತಿಳಿಯಿತು. ಯೇಸು ಪಶ್ಚಿಮದಿಂದ ಬಂದಿದ್ದನೆಂಬುದೂ ಲಾಮಾರಲ್ಲಿ ಪರಂಪರಾಗತವಾದ ವಿಚಾರವಾಗಿತ್ತು. ಬಹಳ ಹುಡುಕಾಡಿದ ಬಳಿಕ 'ಹಿಮಿಸ್' ಎಂಬ ಬೌದ್ಧ ಮಠದಲ್ಲಿ ಯೇಸುವಿನ ಜೀವನ ಚರಿತ್ರೆಯಿದೆಯೆಂದು ತಿಳಿದುಬಂತು. ಅಲ್ಲಿ ಹೋಗಿ ನಾನು ನನ್ನ ಚಾತುರ್ಯವನ್ನೆಲ್ಲ ಉಪಯೋಗಿಸಿ ಆ ಚರಿತ್ರೆಯನ್ನೋದಿದೆ. ಅದರ ಸಾರಾಂಶ ಇಂತಿದೆ:

" ಯೇಸು ಇಸ್ರೇಲಿನ ಒಂದು ಬಡ ಧಾರ್ಮಿಕ ಕುಟುಂಬದಲ್ಲಿ ಜನ್ಮವೆತ್ತಿದ. ಬಾಲ್ಯದಿಂದಲೇ ಅವನ ಮನಸ್ಸು ಧಾರ್ಮಿಕ ಕಾರ್ಯಗಳತ್ತ ಒಲೆಯುತ್ತಿತ್ತು. ಆದ್ದರಿಂದ ಅವನು ೧೩ ವರ್ಷ ಪ್ರಾಯದಲ್ಲಿ ಮನೆಯಿಂದ ಹೊರಬಿದ್ದು ಪ್ರವಾಸಿಕರೊಡನೆ ಸೇರಿ ಸಿಂಧು ದೇಶಕ್ಕೆ ಬಂದ. ಅವನು ಪುರಿ, ರಾಜಗೃಹ ಹಾಗೂ ಬನಾರಸ್‌ನಲ್ಲಿ ವಿದ್ಯಾಭ್ಯಾಸ ಮಾಡಿದ. ಬಳಿಕ ಅವನು ಬೌದ್ಧ ಭಿಕ್ಷುಗಳಿಂದ ಪಾಲೀ ಭಾಷೆಯನ್ನು ಕಲಿತು ಬೌದ್ಧ ಧರ್ಮದ ತತ್ವಗಳನ್ನು ಚೆನ್ನಾಗಿ

"ಆರ್ಯಮಿತ್ರ" ಪತ್ರಿಕೆಯಿಂದ



ಯೇಸುವನ್ನು ಶಿಲುಬೆಯಿಂದಿಳಿಸುವುದು

ಅರಿತು, ಮೇಲೆ ಇರಾಣ ಮಾರ್ಗವಾಗಿ ಜೂಡಿಯಾಕ್ಕೆ ಹೋಗಿ ಅಲ್ಲಿ ಪ್ರವಚನಕ್ಕಾರಂಭಿಸಿದ. ಅಲ್ಲಿಯ ಗವರ್ನರ್ ಪಾಯಲೆಟ್ ಅವನನ್ನು ಸೆರೆಹಿಡಿದು ಶೂಲಕ್ಕೇರಿಸಿದಾಗ ಅವನು ಸತ್ತು ಹೋದ. ಮೂರು ದಿನಗಳ ಮೇಲೆ ಅವನ ಗೋರಿ ತೆರೆದಿರುವುದೂ ಯೇಸು ಎಲ್ಲೆಲ್ಲೂ ಕಾಣದಿರುವುದೂ ಎಲ್ಲರ ಗಮನಕ್ಕೆ ಬಂತು."

ಈ ಗ್ರಂಥವು ಎಲ್ಲೆಲ್ಲೂ ಪ್ರಸಿದ್ಧವಾಗಿ ಚೆನ್ನಾಗಿ ಮಾರಾಟವಾಯಿತು. ನೋಟೋವಿಶನು ಈ ಲೇಖನಕ್ಕೆ ಆಧಾರವಾಗಿ ಉಪಯೋಗಿಸಿದ ಗ್ರಂಥವೇ ಕೃತ್ರಿಮವೆಂದು ಕ್ರೈಸ್ತ ಪಂಡಿತರು ಹೇಳಿದರು. ಆದರೆ ಪ್ರಸಿದ್ಧ ರಶಿಯನ್ ಚಿತ್ರಕಾರನಾದ ನಿಕೋಲಸ್ ರೋರಿಕನು ೧೯೨೯ರಲ್ಲಿ 'Heart of Asia' ಎಂಬ ಗ್ರಂಥವೊಂದನ್ನು ಪ್ರಕಟಿಸಿದ. ಅದರಲ್ಲಿ ಅವನು ಹೀಗೆ ಬರೆದಿದ್ದಾನೆ:

"ನಾನು ಕಾಶ್ಮೀರದಲ್ಲಿ ಮೊದಲ ಬಾರಿ ಈ ವಿಲಕ್ಷಣ ದಂತ ಕಥೆಯನ್ನು ಕೇಳಿದೆ. 'ಹೊಸ ಒಡಂಬಡಿಕೆ'ಯಲ್ಲಿ ಯೇಸು ಈ ನಡುವೆ ಎಲ್ಲೋ ಲುಪ್ತವಾಗಿದ್ದನೆಂದಿಷ್ಟು ಮಾತ್ರ ಬರೆಯಲ್ಪಟ್ಟಿದೆ. ಆ ಅವಧಿಯಲ್ಲಿ ಅವನು ಇತ್ತ ಬಂದಿದ್ದನೆಂಬುದೂ ಬಳಿಕೆಯಲ್ಲಿದೆ. ಯೇಸೂ ಶಿಲುಬೆಗೇರಿಸಲ್ಪಟ್ಟು ಸಾವಿಗೀಡಾಗಲಿಲ್ಲ ಎಂದು ಶ್ರೀನಗರದ ಮುಸಲ್ಮಾನರು ನನಗೆ ತಿಳಿಸಿದರು. ಅವನ ಶಿಷ್ಯರು ಅವನನ್ನು ಬೇರೆಡೆಗೆ ಒಯ್ದು ಶುಶ್ರೂಷೆ ನಡೆಸಿ ಅವನನ್ನು ಗುಣಪಡಿಸಿದರಂತೆ. ಅವನು ಅಲ್ಲಿಂದ ಶ್ರೀನಗರಕ್ಕೆ ಬಂದು ಮುಂದೆ ಸ್ವಾಭಾವಿಕ ಮರಣಕ್ಕೆ ತುತ್ತಾದನಂತೆ. ಇಲ್ಲೊಂದು ಮನೆಯಿದೆ. ಅಲ್ಲಿ ಯೂಸೂಫನ ಮಗನಾದ ಯೇಸುವಿನ ಸಮಾಧಿಯಿದೆ. ಅಲ್ಲಿ ಈ ಅಭಿಪ್ರಾಯ ಕೊಡುವಂತಹ ಶಿಲಾಲೇಖವೂ ಇದೆ."

ನಿಕೋಲಾಸ್ ರೋರಿಕ್ ಮತ್ತೊಂದೆಡೆ ಹೀಗೆ ಬರೆಯುತ್ತಾನೆ: "ನಾವು 'ಲೇಹ'ಕ್ಕೆ ಹೋದಾಗ ಅಲ್ಲಿಯ ಹಿಂದೂ ಪೋಸ್ಟ್‌ಮಾಸ್ಟರ್ ಹಾಗೂ ಕೆಲವು ಬೌದ್ಧರು ನಮಗೆ ಪೇಟೆಯ ಸಮೀಪದಲ್ಲಿರುವ ಒಂದು ಕೆರೆಯನ್ನು ತೋರಿಸಿ ಪೆಲೆಸ್ಟಾಯಿನಿಗೆ ಹೋಗುವ ಮೊದಲು ಯೇಸು ಇಲ್ಲಿ ಪ್ರವಚನ ಮಾಡಿದ್ದನೆಂಬ ದಂತಕಥೆಯಿದೆಯೆಂದು ತಿಳಿಸಿದರು. ಯೇಸು ಕೆಲ ವ್ಯಾಪಾರಿಗಳ ತಂಡದೊಂದಿಗೆ ಇತ್ತ ಬಂದಿದ್ದನಂತೆ. ಈ ರೀತಿಯ ಕಥೆಗಳನ್ನು ನಾವು ಲಡಾಖ್, ಸಿಂಕಿಯಾಂಗ್, ಮಂಗೋಲಿಯಾ ಮೊದಲಾದ ಸ್ಥಳಗಳಲ್ಲೂ ಕೇಳಿದೆವು. ಪೆಲೆಸ್ಟಾಯಿನ್‌ನಲ್ಲಿ ಒಮ್ಮಿಂದೊಮ್ಮೆ ಕಾಣೆಯಾದ ಯೇಸು ನೇರಾಗಿ ಭಾರತಕ್ಕೂ ಏಶಿಯಾದ ಇತರ ಕಡೆಗಳಿಗೂ ಬಂದಿದ್ದನೆಂಬುದೇ ಎಲ್ಲ ಕಥೆಗಳಲ್ಲೂ ಕಂಡುಬರುವ ಸಮಾನ ಅಂಶ."

ಕಾಶ್ಮೀರ ಪ್ರವಾಸಿಗಳಿಗೆ ಹುಲ್ಲು ಛಾವಣಿಯ ಒಂದು ಸಮಾಧಿಯನ್ನು ತೋರಿಸಲಾಗುತ್ತದೆ. ಅಲ್ಲೊಂದು ಆವರಣವಿದೆ. ಅದರೊಳಗೆ ೭ ಅಡಿ ಉದ್ದ, ೩॥ ಅಡಿ ಅಗಲ ಹಾಗೂ ೧ ಅಡಿ ಎತ್ತರವಾದ ಒಂದು ಕಟ್ಟೆ ಇದೆ. ಅದರ ಮೇಲೆ ಎರಡು ಹೆಜ್ಜೆಗಳಿವೆ. ಇದು ಯೇಸುವಿನ ಸಮಾಧಿಯೆಂದು ಜನರ ಹೇಳಿಕೆ.

ಬೈಬಲಿನ ಹೇಳಿಕೆಯಂತೆ ಯೇಸು ಪೆಲೆಸ್ಟಾಯಿನಿನಲ್ಲಿ ಜನ್ಮತಾಳಿದ. ಅಲ್ಲಿಯೇ ಅವನು ಪ್ರಚಾರ ನಡೆಸಿದ. ಅವನು ಪರದೇಶಕ್ಕೆ ಹೋದ ಒಂದೇ ಒಂದು ಘಟನೆಯೂ ಬೈಬಲಿನಲ್ಲಿ ಕಾಣಿಸುವುದಿಲ್ಲ.

'ಹೊಸ ಒಡಂಬಡಿಕೆ'ಯಲ್ಲಿ ಯೇಸುವಿನ ನಾಲ್ವರು ಶಿಷ್ಯರು ತಮ್ಮ ತಮ್ಮ ಶಬ್ದಗಳಲ್ಲಿ ಯೇಸುವಿನ ಕುರಿತು ಕೆಲವು ಮಾತು ಬರೆದಿದ್ದಾರೆ. ಆದರೆ ಯೇಸು ತನ್ನ ೧೩ ನೇ ವರ್ಷದಿಂದ ೩೦ ನೇ ವರ್ಷ ವಯಸ್ಸಿನ ವರೆಗೆ ಎಲ್ಲಿದ್ದ ಎಂಬುದರ ಬಗ್ಗೆ ಸ್ಪಷ್ಟವಾಗಿ ಏನೇನೂ ಬರೆದಿಲ್ಲ. ಈ ಅವಧಿಯಲ್ಲಿ ಅವನು ಎಲ್ಲೋ ಆಧ್ಯಾತ್ಮ ಚಿಂತನೆಯಲ್ಲಿದ್ದಿರಬಹುದೆಂದು ಅವರು ಬಹು ಅಸ್ಪಷ್ಟವಾಗಿ ಬರೆದಿದ್ದಾರೆ. ಯೇಸು ಭಾರತಕ್ಕೆ ಬಂದಿದ್ದನೆಂಬುದನ್ನು ನಿಕೋಲಾಸ್ ನೊಟೋವಿಚನೇ ಮೊತ್ತಮೊದಲು ಪ್ರತಿಪಾದಿಸಿದವನು.

೧೭ನೇ ಶತಮಾನದ ಮಧ್ಯಭಾಗದಲ್ಲಿ ಫ್ರಾನ್ಸಿಸ್ ಬರ್ನಿಯರ್ ಎಂಬವನು 'ಮೊಗಲ ಸಾಮ್ರಾಜ್ಯದ ಪ್ರವಾಸ' ಎಂಬ ಪುಸ್ತಕವನ್ನು ಪ್ರಕಟಿಸಿದ ಅದರಲ್ಲವನು ಹೀಗೆ ಬರೆಯುತ್ತಾನೆ:— "ಕಾಶ್ಮೀರವು ನನಗೆ ತುಂಬಾ ಸೊಗಸಾಗಿ ತೋರಿತು ಅಲ್ಲಿ ಯಹೂದಿ ಧರ್ಮದ ಹಲವಾರು ಕುರುಹುಗಳು ದೊರೆತವು. ನಾನು 'ಪೀರಪಂಜಾಲ್' ಪರ್ವತ ಶಿಖರಕ್ಕೆ ತಲುಪಿದಾಗ, ಅಲ್ಲಿಯ ಜನರ ಆಕಾರ-ಪ್ರಕಾರ, ರೀತಿ-ನೀತಿ ಎಲ್ಲವೂ ಯಹೂದಿಗಳ ಕ್ರಮವನ್ನೇ ಹೋಲುತ್ತಿದೆಯೆಂದು ತೋರಿತು. ದೇಶದೇಶಾಂತರಗಳ ಪ್ರವಾಸ ಕೈಕೊಳ್ಳುವ ಜನರಿಗೆ ಅಲ್ಲಿಯ ಜನರ ವೈಚಿತ್ರ್ಯ ಹಾಗೂ ವೈಶಿಷ್ಟ್ಯದ ವಿಚಾರ ಬಹುಬೇಗನೆ ತಿಳಿದುಹೋಗುತ್ತದೆ. ನನ್ನ ಈ ಅನುಭವವೇ ನನಗಿಂತ ಮೊದಲು ಬಂದ ಪ್ರವಾಸಿಗರಿಗೂ ಉಂಟಾಗಿತ್ತು. 'ಜೆಸು ಆರ್ಟರ್ ಫಾದರ್' ಕೂಡ ಹೀಗೇಯೇ ಬರೆದಿದ್ದಾರೆ. ಸಾಲೋಮನ್ ಕಾಶ್ಮೀರಕ್ಕೆ ಬಂದಿದ್ದನೆಂಬ ವದಂತಿಯಿದೆ ಕಾಶ್ಮೀರದಲ್ಲಿ ಈಗಲೂ ಸಾಲೋಮನನ ಸಿಂಹಾಸನವನ್ನು ತೋರಿಸುತ್ತಾರೆ." ಯೇಸು ಕೂಡ ಯಹೂದ್ಯನಾಗಿದ್ದನು ಮತ್ತು ಅವನ ಶಿಷ್ಯರೂ ಯಹೂದ್ಯರೇ ಇದ್ದರು.

ಶ್ರೀ ಎಫ್. ಡಬ್ಲ್ಯೂ. ಪೋಲಕರು ಕೆಲ ವರ್ಷಗಳ ಮೊದಲು ಮುಂಬಯಿಯಿಂದ 'ಇಂಡಿಯಾ ಆ್ಯಂಡ್ ಇಸ್ರಾಯಿಲ್' ಎಂಬ ಇಂಗ್ಲೀಷ್ ಪತ್ರಿಕೆಯೊಂದನ್ನು ನಡೆಸುತ್ತಿದ್ದರು. ಈ ಮಾಸಪತ್ರಿಕೆಯ ಡಿಸೆಂಬರ ೧೯೫೧ರ ಸಂಚಿಕೆಯಲ್ಲಿ ಎಲಿಸ್ ಈ. ಬಿಶಾರ್ಟ್ ಎಂಬ ಆಂಗ್ಲ ಮಹಿಳೆಯೊಬ್ಬಳ

ಪತ್ರವೊಂದು ಅಚ್ಚಾಗಿತ್ತು. ಅವಳು ಕಾಶ್ಮೀರದಲ್ಲಿ ಇಪ್ಪತ್ತು ವರ್ಷಗಳಿಂದ ಇದ್ದಳು. ಅವಳು ಹೀಗೆ ಬರೆಯುತ್ತಾಳೆ—"ಕಾಶ್ಮೀರದಲ್ಲಿ ಆಡು ಕುರಿಗಳನ್ನು ಸಾಕಿ ಜೀವನ ನಡೆಸುವ 'ಗುಜ್ಜರ' ಎಂಬ ಜಾತಿಯೊಂದಿದೆ. ಅವರು ತಮ್ಮನ್ನು 'ಬಾನೀ ಇಸ್ರಾಯೀಲ್' ಎಂದು ಕರೆದುಕೊಳ್ಳುತ್ತಾರೆ. ಅವರು ರುಬೇನ್ ಹಾಗೂ ಗ್ಯಾಡ್ ಜಾತಿಯ (ಯಹೂದಿ) ವಂಶಜರಾಗಲೀ ಯಹೂದಿಯ ಉಪಜಾತಿಯವರಾಗಲೀ ಆಗಿರಬಹುದೆಂದು ತೋರುತ್ತದೆ. ಮೊಗಲರ ಆಳ್ವಿಕೆಯ ವೇಳೆ ಬಲಾತ್ಕಾರದಿಂದ ಮುಸಲ್ಮಾನರಾದ ಹಲವಾರು ಜನರು ಇಂದು ಕಾಶ್ಮೀರದಲ್ಲಿ ಇದ್ದಾರೆ. ಅವರಲ್ಲಿ ಹಲವರು ತಮ್ಮ ಹಸರಿನ ಕೊನೆಗೆ 'ಜೂ' ಎಂಬ ಉಪಪದವನ್ನು ಸೇರಿಸುತ್ತಾರೆ. ಇವರೆಲ್ಲ ಶ್ರೀನಗರದಲ್ಲಿ ವ್ಯಾಪಾರಿಗಳಾಗಿದ್ದಾರೆ. ಇವರ ಮುಖಚರ್ಯೆ ವೈಕಟ್ಟು ಎಲ್ಲವೂ ಜ್ಯೂ (ಯಹೂದಿ) ವಿನಂತೆಯೇ ಇದೆ".

'ಹಳೆ ಒಡಂಬಡಿಕೆ'ಯಲ್ಲಿ ಉಲ್ಲೇಖಿಸಲ್ಪಟ್ಟ ಅನೇಕ ಹೆಸರುಗಳು ಕಾಶ್ಮೀರದಲ್ಲೂ ಬಳಕೆಯಲ್ಲಿವೆ ಕಾಶ್ಮೀರದ ಒಂದು ಪರ್ವತೀಯ ಪ್ರದೇಶದಲ್ಲಿ ಅರಾಬಾ ಹಾಗೂ ಹೆಬ್ರಾನ್ ಎಂಬ ಹಿಬ್ರೂ ಹೆಸರುಗಳು ಬಳಕೆಯಲ್ಲಿವೆಯೆಂದೂ ಆ ಆಂಗ್ಲ ಮಹಿಳೆ ತನ್ನ ಪತ್ರದಲ್ಲಿ ಬರೆದಿದ್ದಾಳೆ. "ಕಾಶ್ಮೀರೀ ಬ್ರಾಹ್ಮಣರ ಮುಖಾಕೃತಿ ಯಹೂದಿಯರ ಮುಖಾಕೃತಿಯನ್ನೇ ಹೋಲುತ್ತದೆ; ಮತ್ತು ಅವರ ಹೆಸರುಗಳು ಹಾಗೂ ಯಹೂದಿಯರ ಜಾತಿ, ಉಪಜಾತಿಗಳ ಹೆಸರುಗಳು ಹಳೇ ಒಡಂಬಡಿಕೆಯಲ್ಲಿ ವರ್ಣಿಸಲ್ಪಟ್ಟ ಹೆಸರುಗಳಂತೆಯೇ ಇವೆ. ಉದಾಹರಣೆಗಾಗಿ 'ಹಶಿಯಾ' ಎಂಬುದು ಜ್ಯೂ 'ಹೋಶಿಯಾ' ದಿಂದಲೂ 'ಕೌಲ್' ಎಂಬುದು 'ಕೌಲಿಯಾಹ್' ದಿಂದಲೂ ಬಂದಿರಬಹುದು. ಖಿಸ್ತ್ ಅರ್ಥಾತ್ ಯೇಸುವು ಸ್ವತಃ ಯಹೂದಿಯಾಗಿದ್ದು ಯಹೂದೀ ವ್ಯಾಪಾರಿಗಳೊಂದಿಗೆ ಭಾರತಕ್ಕೆ ಬಂದಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ."

ಯೇಸು ಭಾರತಕ್ಕೆ ಎರಡು ಬಾರಿ ಬಂದಿದ್ದ ಎಂಬುದಕ್ಕೆ 'ಅಹಮದಿಯಾ' ಮತವೇ ದೊಡ್ಡ ಪ್ರಮಾಣ. ೧೯೦೮ ರಲ್ಲಿ ಸರ್ ಫ್ರಾನ್ಸಿಸ್ ಯಂಗ್‌ಹಸಬಂಡರು ತಮ್ಮ 'ಕಾಶ್ಮೀರಯಾತ್ರೆ' ಎಂಬ ಪುಸ್ತಕವನ್ನು ಪ್ರಕಟಿಸಿದರು. ಅದರಲ್ಲಿ ಅವರು ಹೀಗೆ ಬರೆದಿದ್ದಾರೆ:

"ಈ ವರ್ಷ (೧೯೦೮) ಸೆಪ್ಟೆಂಬರ್ ತಿಂಗಳಲ್ಲಿ ಪಂಜಾಬಿನ ಒಂದು ವಿಚಿತ್ರ ಮತದ ಸಂಸ್ಥಾಪಕನು ಸತ್ತುಹೋದ ತಾನು ಯಹೂದಿಗಳ 'ಮಸೀಹಾ' ಮತ್ತು ಮುಸಲ್ಮಾನರ 'ಮೆಹದಿ' ಎಂದು ಆ ಸಂಸ್ಥಾಪಕನ ಹೇಳಿಕೆಯಾಗಿತ್ತು. ಅವನ ಅಭಿಪ್ರಾಯದಂತೆ ಯೇಸು ಶಿಲುಬೆಯ ಮೇಲೆ ಸಾಯಲಿಲ್ಲ. ಅಲ್ಲಿ ಅವನು ಬದುಕಿ ಉಳಿದ ಮತ್ತು ಶ್ರೀನಗರದಲ್ಲಿ ಯೇಸುವಿನ ಗೋರಿಯಿದೆ !"

ಮೌಲಾನಾ ಮಹಮ್ಮದ್ ಅಲಿಯವರು ಲಂಡನ್ನಿನಲ್ಲಿ ಅಹಮದಿಯಾ ಮತದ ಕುರಾನಿನ ಇಂಗ್ಲೀಷ್ ಅನುವಾದವನ್ನು ಪ್ರಕಟಪಡಿಸಿದರು. ಅದರ ಮುನ್ನುಡಿಯ ಆರನೇ ಭಾಗದಲ್ಲಿ ಕುರಾನಿನಲ್ಲಿ ಯೇಸುವಿನ ಉಲ್ಲೇಖದ ಕುರಿತು ಹೀಗೆ ಬರೆಯಲಾಗಿದೆ:— 'ಜೀಸಸ್ ಕ್ರಾಯಿಸ್ಟ್ (ಯೇಸು) ಶಿಲುಬೆಯನ್ನೇರಲೇ ಇಲ್ಲ. ಆದರೆ ಅವನು ಶಿಲುಬೆಯನ್ನೇರಿದಂತೆ ತೋರಿಸುವ ವ್ಯವಸ್ಥೆಯನ್ನು ಕೈಗೊಳ್ಳಲಾಗಿತ್ತು. ಅವನಿಗೂ ಅವನ ತಾಯಿಗೂ ಒಂದು ಎತ್ತರವಾದ, ಜಲಪಾತವಿರುವ ಸ್ಥಳದಲ್ಲಿ ಆಶ್ರಯಕೊಡಲಾಗಿತು !

"ಬೈಬಲಿ (ಗಾಸ್ಪೆಲ್ಸ್) ನ ಈ ವಿಷಯಗಳತ್ತ ಗಮನ ಕೊಡಿರಿ:— ( ) ಯೇಸು ಶಿಲುಬೆಯ ಮೇಲೆ ಕೆಲ ಗಂಟೆಗಳ ವರೆಗೆ ಮಾತ್ರ ಇದ್ದ. ಶಿಲುಬೆಯ ಮೇಲೆ ಮನುಷ್ಯ ಒಮ್ಮೆಲೇ ಸಾಯಲಾರ. ಸಾಯಲು ಸಾಕಷ್ಟು ವೇಳೆ ತಗಲುತ್ತದೆ. (೨) ಕಳ್ಳರನ್ನು ಶಿಲುಬೆಗೇರಿಸಿದಾಗ ಅವರು ಬಹುಹೊತ್ತು ಬದುಕಿ ಉಳಿದಿದ್ದರು. (೩)

ಕಳ್ಳರ ಕಾಲುಗಳನ್ನು ಕಡಿಯಲಾಗಿತ್ತು; ಆದರೆ ಯೇಸುವಿನ ಕಾಲುಗಳನ್ನು ಕಡಿದಿರಲಿಲ್ಲ. (೪) ಯೇಸುವನ್ನು ಶಿಲುಬೆಯಿಂದ ಕೆಳಗಿರಿಸಿದಾಗ ಸಿಪಾಯಿಗಳು ಅವನ ದೇಹಕ್ಕೆ ಏನನ್ನೋ ಚುಚ್ಚಿದರು. ಅದರಿಂದ ರಕ್ತ ಹೊರಟಿತು. ಅವನು ಆಗಲೂ ಬದುಕಿದ್ದನೆಂಬುದರ ಸಂಕೇತವದು. (೫) ಇಷ್ಟು ಕಡಿಮೆ ಸಮಯದಲ್ಲಿ ಅವನು ಸತ್ತಿರಬಹುದೆಂದು ಪಾಯಲೆಟನಿಗೂ ನಂಬಿಕೆಯಿರಲಿಲ್ಲ. (೬) ಶಿಲುಬೆಗೇರಿಸಿದ ಇತರ ಇಬ್ಬರು ಕಳ್ಳರನ್ನು ಅವರು ಸತ್ತ ಬಳಿಕ ಸಮಾಧಿಗೊಳಿಸಲಾಯಿತು. ಆದರೆ ಯೇಸುವಿನ ದೇಹವನ್ನು ಅವನ ಶಿಷ್ಯನೊಬ್ಬನಿಗೆ ಒಪ್ಪಿಸಲಾಯಿತು. ಆ ಶಿಷ್ಯನು ಅದನ್ನು ಬಹು ಜಾಗರೂಕತೆಯಿಂದ ಒಯ್ದು ಬೆಟ್ಟದ ಗುಹೆಯೊಂದರಲ್ಲಿ ಇರಿಸಿದ. (೭) ಮೂರನೇ ದಿನ ಆ ಗುಹೆಯ ಕಲ್ಲನ್ನು ಸರಿಸಲಾಯಿತು. (೮) ಮೇರಿಯು ಯೇಸುವನ್ನು ಕಂಡಾಗ ಅವನೊಬ್ಬ ತೋಟಗಾರನಂತೆ ತೋರಿದ. ಅಂದರೆ ಆಗ ಯೇಸು ತೋಟಗಾರನ ವೇಷದಲ್ಲಿದ್ದನೆಂದು ಅರ್ಥವಾಗುವುದು (ಇತ್ಯಾದಿ)"

೧೯೨೫ರಲ್ಲಿ ಡಾಕ್ಟರ್ ಸ್ಪೆನ್ಸರರು 'ಮಿಸ್ಟಿಕಲ್ ಲಾಯಿಫ್ ಆಫ್ ಜೀಸಸ್' (ಯೇಸುವಿನ ಗುಪ್ತ ಜೀವನ ಕ್ರಮ) ಎಂಬ ಪುಸ್ತಕ ಬರೆದರು. ಅದರಲ್ಲವರು ಹೀಗೆ ಬರೆದಿದ್ದಾರೆ: "ಯೇಸು ಶಿಲುಬೆಯ ಮೇಲೆ ಸಾಯಲಿಲ್ಲ. ಅವನು ತನ್ನ ವಯಸ್ಸಿನ ೬೦-೭೦ ವರ್ಷಗಳ ತನಕ ಬದುಕಿ ಉಳಿದ." (ಪುಟ ೨೮೯). ಅವನು ತನ್ನ ೧೩ ನೇ ವರ್ಷದಿಂದ ೩೦ರ ತನಕ ಎಲ್ಲಿದ್ದ ಎಂಬುದೂ ಈ ರೀತಿ ಉಲ್ಲೇಖಿಸಲ್ಪಟ್ಟಿದೆ:— "ಧಾರ್ಮಿಕ ಶಿಕ್ಷಣಕ್ಕಾಗಿ ಅವನು ಜಗನ್ನಾಥ ಪುರಿ ಹಾಗೂ ಕಾಶಿಗೆ ಹೋಗಿದ್ದನು. ಅವನು ವ್ಯಾಪಾರಿಗಳೊಂದಿಗೆ ಭಾರತಕ್ಕೆ ಬಂದು ವೈದಿಕ ಧರ್ಮ ಹಾಗೂ ಯೋಗಶಾಸ್ತ್ರದ ಜ್ಞಾನವನ್ನು ಸಂಪಾದಿಸಿದ."

ಯೇಸು ಜನ್ಮ ತಾಳಿದಾಗ ಮೂವರು ಜ್ಞಾನಿಗಳು ಅವನ ಜನ್ಮಸ್ಥಾನಕ್ಕೆ ಬಂದರು. ಇಂತಹ ಅವತಾರವಾಗುವುದೆಂಬುದು ಅವರಿಗೆ ತಿಳಿದಿತ್ತು. ಅವರೇ ಯೇಸುವಿನ ಶಿಕ್ಷಣಕ್ಕೆ ತಕ್ಕ ವ್ಯವಸ್ಥೆ ಮಾಡಿದರು. ಯೇಸು ಹಾಗೂ ಬುದ್ಧನ ಉಪದೇಶಗಳಲ್ಲಿ ಅತಿ ಹೆಚ್ಚು ಸಮಾನತೆಯಿದೆ. ಆ ಕಾಲದ ಪದ್ಧತಿಯಂತೆ ಧಾರ್ಮಿಕ ಶಿಕ್ಷಣವನ್ನು ಪಡೆಯಬಯಸುವ ಮನುಷ್ಯ ಆ ಧರ್ಮಕ್ಕೆ ಸಂಬಂಧಿಸಿದ ವಿದ್ಯಾಪೀಠಕ್ಕೇ ಹೋಗಿ ಕಲಿಯುತ್ತಿದ್ದ. ಆದ್ದರಿಂದ ನಡುವಿನ ಗುಪ್ತ ಅವಧಿಯಲ್ಲೂ ಆ ಬಳಿಕವೂ ಯೇಸು ಭಾರತಕ್ಕೆ ಬಂದಿದ್ದನೆಂದು ಸಹಜವಾಗಿಯೇ ಊಹಿಸಬಹುದು. *



ಸಿವಿಲ್ ಮೊಕದ್ದಮೆಯೊಂದರಲ್ಲಿ ತಮ್ಮ ಕಕ್ಷಿಗಾರನಿಗೆ ಪ್ರಶ್ನೆ ಹಾಕುತ್ತ ವಕೀಲರು ಕೋರ್ಟಿನಲ್ಲಿ ಕೇಳಿದರು:

"ನೀವು ಪ್ರತಿವಾದಿಗೆ ಲೆಕ್ಕ ತೀರಿಸೆಂದು ಕೇಳಿಕೊಂಡಿರಾ?"

"ಕೇಳಿಕೊಂಡೆ."

"ಪ್ರತಿವಾದಿ ಏನು ಹೇಳಿದ?"

"ನರಕಕ್ಕೆ ಹೋಗು ಎಂದ."

"ಆ ಮೇಲೆ ನೀವೇನು ಮಾಡಿದಿರಿ?"

"ನಿಮ್ಮ ಕಚೇರಿಗೆ ಬಂದೆ."

ಸಜ್ಜನ-ದುರ್ಜನ ಸಸ್ಯಗಳಿವೆ;

ಸುಖ-ದುಃಖ ಅವುಗಳಿಗೂ ಇವೆ;

ಕೋಪ-ಪ್ರೀತಿ ಸಹಿತ!



# ಸಸ್ಯಗಳು ಮಾನವೀಯವಾಗಿವೆ!

ಮುರಲೀಧರ

ಮೂವತ್ತು ವರ್ಷಗಳಿಗಿಂತಲೂ ಹಿಂದೆ ಜಗದೀಶಚಂದ್ರ ಬೋಸರು ಸಸ್ಯಗಳಿಗೂ ಪ್ರಾಣಿಗಳ ಹಾಗೆಯೆ ಸಂವೇದನಾ ಶಕ್ತಿಯುಂಟೆಂದೂ ಅವು ಕೂಡ ತಮ್ಮದೇ ರೀತಿಯಲ್ಲಿ ಸುಖದುಃಖಗಳನ್ನನುಭವಿಸುತ್ತವೆಯೆಂದೂ ಹೇಳಿದಾಗ ಅವರ ಮಾತನ್ನು ಸಹಸಾ ಯಾರೂ ನಂಬಲಿಲ್ಲ. ಯುರೋಪಿನಲ್ಲೆಲ್ಲ ಅವರು ತಾವೇ ನಿರ್ಮಿಸಿದ ಸೂಕ್ಷ್ಮಾತಿಸೂಕ್ಷ್ಮ ಉಪಕರಣಗಳ ಮೂಲಕ ತಮ್ಮ ಸಿದ್ಧಾಂತಗಳನ್ನು ಸಿದ್ಧಮಾಡಿ ತೋರಿಸಿದಾಗ ಪತ್ರಿಕೆಗಳೇನೋ ಇದೊಂದು ಮಹಾ ತಮಾಷೆಯೆಂದು ಉದ್ಬುದ್ಧ ವರದಿಗಳನ್ನು ಪ್ರಕಟಿಸಿದರೂ ವಿಜ್ಞಾನಿಗಳೆಂಬವರು ಬಹುತರವಾಗಿ ಬೋಸರ ಶೋಧಗಳನ್ನು ದುರ್ಲಕ್ಷದಿಂದಲೇ ನೋಡಿದರು.

ಇದಕ್ಕೆ ಕಾರಣಗಳು ದ್ವಿವಿಧವಾಗಿದ್ದವು. ಒಂದು, ಬೋಸರು ಪರಾಧೀನವಾಗಿದ್ದ ಭಾರತದವರಾಗಿದ್ದರು. ಎರಡು, ಅವರು ಮಾಡಿದ ಶೋಧಗಳು ಆ ಕಾಲದ ಸಸ್ಯವಿಜ್ಞಾನದ ಮಟ್ಟಕ್ಕಿಂತ ತೀರ ಮುಂದೆ ಹೋಗಿದ್ದುದರಿಂದ ಅಂದಿನ ವಿಜ್ಞಾನಿಗಳಿಗೆ ಅದನ್ನು ಅರಗಿಸಿಕೊಳ್ಳುವುದು ತುಂಬ ಕಷ್ಟವಾಗಿತ್ತು. ಇಂದು, ಸುಮಾರು ನಲುವತ್ತು ವರ್ಷಗಳ ನಂತರ ಅಮೇರಿಕನ್ ವಿಜ್ಞಾನಿ ಹುಬ್ಬರ್ಡರು ಸಂಶೋಧನೆಗಳ ನಂತರ ಅದೇ ತೀರ್ಮಾನಕ್ಕೆ ಬಂದಿದ್ದಾರೆ.

ಜಗದೀಶ ಬೋಸರ ಹಾಗೆ ಡಾ. ಎಲ್. ರೋನ್ ಹುಬ್ಬರ್ಡರೂ ಮೂಲತಃ ಭೌತಶಾಸ್ತ್ರಗಳಾಗಿದ್ದು ಸಸ್ಯ ಜೀವನದಲ್ಲಿ ಆಸಕ್ತಿ ತಾಳಿದವರೆಂಬುದು ಯೋಗಾಯೋಗವಾಗಿರಬಹುದು. ಈಗ ಇಂಗ್ಲಂಡಿನಲ್ಲಿ ಸಂಶೋಧನ ಕಾರ್ಯ ಮಾಡುತ್ತಿರುವ ಅವರು ಸೂಕ್ಷ್ಮ ಉಪಕರಣಗಳ ಮೂಲಕ ಪ್ರಾಣಿಗಳು ವಿಶಿಷ್ಟ ಪರಿಸ್ಥಿತಿಗೆ ತೋರುವ ಪ್ರತಿಕ್ರಿಯೆಯನ್ನೂ ಸಸ್ಯಗಳು ಅದೇ

ಪರಿಸ್ಥಿತಿಯಲ್ಲಿ ತೋರುವುದನ್ನೂ ಹೋಲಿಸಿ ಅವೆರಡರಲ್ಲಿ ಸಾಮ್ಯವಿರುವುದೆಂದು ಕಂಡುಹಿಡಿದಿದ್ದಾರೆ.

ಒಂದು ಸೂಜಿಯನ್ನು ನಿಮ್ಮ ಪಕ್ಕೆಗೆ ಚುಚ್ಚಿದರೆ ಪ್ರಥಮತಃ ಗಾಬರಿ, ಆ ಮೇಲೆ ಭಯ, ಉದ್ವೇಗಗಳುಂಟಾಗುತ್ತವೆ. ಅದೇ ಸೂಜಿಯನ್ನು ಒಂದು ಬೆಳೆಯುತ್ತಿರುವ ಟೋಮ್ಯಾಟೋದ ಮೈಯಲ್ಲಿ ಚುಚ್ಚಿದರೆ ಅದು ನಿಮ್ಮ ಹಾಗೆ ಹಾಯ್ ಎಂದು ಕೂಗಲಿಕ್ಕಿಲ್ಲ. ಆದರೆ ಅದೂ ನಿಮ್ಮಂತೆಯೆ ಗಾಬರಿ, ಭಯಗಳನ್ನು ಅನುಭವಿಸುತ್ತದೆಂದು ಹುಬ್ಬರ್ಡರು ಒಂದು ನಾಟಕೀಯ ಪ್ರಯೋಗದ ಮೂಲಕ ತೋರಿಸಿಕೊಡುತ್ತಾರೆ.

ಅವರು ಉಪಯೋಗಿಸುವ ಉಪಕರಣ ಅಮೇರಿಕದಲ್ಲಿ ಸುಳ್ಳು ಹೇಳುವವರ ಸುಳ್ಳನ್ನು ಕಂಡುಹಿಡಿಯಲು ಉಪಯೋಗಿಸುವ ಯಂತ್ರದಂತೆಯೆ ಇದೆ. ಅದು ಮನಸ್ಸಿನ ಆವೇಗವು ಚರ್ಮದ ಮೂಲಕ ವ್ಯಕ್ತವಾಗುವುದನ್ನು ಗುರುತು ಹಾಕುತ್ತದೆ. ಚಿಂತೆ, ಭಯಗಳಿಂದ ಪೀಡಿತನಾದ ಮನುಷ್ಯನಿಗೆ ಅದನ್ನು ತಗಲಿಸಿ ಯಂತ್ರದ ಸೂಜಿಯ ಚಲನೆಯನ್ನು ಡಾ. ಹುಬ್ಬರ್ಡರು ಮೊದಲು ಪ್ರದರ್ಶಿಸುತ್ತಾರೆ. ಅನಂತರ ಗಿಡದಲ್ಲಿರುವ ಟೊಮ್ಯಾಟೋಗೆ ತಗಲಿಸಿ ದಬ್ಬಣವನ್ನು ಅದರಲ್ಲಿ ಚುಚ್ಚುತ್ತಾರೆ. ತಕೋ! ಗಲ್ವನೋಮೀಟರ್ (ಯಂತ್ರ) ನ ಸೂಜಿ ಚಲಿಸತೊಡಗುತ್ತದೆ. ಅದರ ಚಲನೆ ಗಾಬರಿ, ಜೀವಭಯಗಳಿಂದ ಪೀಡಿತನಾದವನಿಗೆ ತಗಲಿಸಿದಾಗಿನ ಚಲನೆಯಂತೆಯೆ ಇರುತ್ತದೆ.

ಇದರ ಅರ್ಥವೇನು ? ಮನುಷ್ಯನ ಹಾಗೆಯೆ ಟೊಮ್ಯಾಟೊ ಕೂಡ 'ಚಿಂತಿಸ' ಬಲ್ಲದು ಮತ್ತು ತನ್ನ ಉಳಿಗಾಲದ ಬಗ್ಗೆ ಭೀತವಾಗಬಲ್ಲದು ಎಂದಲ್ಲವೆ ? ಎಂದು ಹುಬ್ಬರ್ಡ್ ಕೇಳುತ್ತಾರೆ.

ಸಸ್ಯಗಳಲ್ಲಿಯೂ ಸಜ್ಜನ ದುರ್ಜನ ಜಾತಿಗಳಿವೆಯೆಂದೂ ಅವುಗಳಲ್ಲಿಯೂ ಸಂತುಷ್ಟ ಅಸಂತುಷ್ಟ, ಧೀರ ಅಧೀರ ಮನೋವೃತ್ತಿಗಳು ಕಾಣಸುತ್ತವೆಯೆಂದೂ ಅವರು ಹೇಳುತ್ತಾರೆ.

ವಿಷ ಸಸ್ಯಗಳನ್ನವರು ದುರ್ಜನ ಸಸ್ಯಗಳ ಸಾಲಿನಲ್ಲಿ ಸೇರಿಸುತ್ತಾರೆ. ದಕ್ಷಿಣ ಅಮೇರಿಕದ ಅಮೇಜಾನ್ ಅರಣ್ಯಗಳಲ್ಲಿ ದಾರಿ ಹೋಕರನ್ನು ತಮ್ಮ ಟೊಂಗೆಗಳಿಂದ ಬಳಸಿ ಗಂಟಲು ಹಿಸುಕಲು ಯತ್ನಿಸುವ ವೃಕ್ಷಗಳಿವೆ. ಸಂಯುಕ್ತ ಸಂಸ್ಥಾನಗಳಲ್ಲಿರುವ ಅರಿಜೋನಾದಲ್ಲಿ ಒಂದು ಬಗೆಯ ಕಳ್ಳಿಯಿದೆ. ಅದು ಹತ್ತಿರ ಯಾರಾದರೂ ಹೋದರೆ ಅವರ ಮೇಲೆ ನೆಗೆಯುತ್ತದೆ.

"ತದ್ವಿರುದ್ಧವಾಗಿ ಸಾತ್ವಿಕ ಸಸ್ಯಗಳೂ ಇವೆ. ಅವೆಷ್ಟು ಮೃದು ಸ್ವಭಾವದವು! ಪ್ರಯೋಗದಲ್ಲಿ ಅವುಗಳ ಪ್ರೇಮಪೂರ್ಣ ಪ್ರವೃತ್ತಿಯನ್ನು ಪ್ರತ್ಯಕ್ಷ ನೋಡಿದ ಮೇಲೆ ಎಷ್ಟೋ ದಿನ ನನಗೆ ಸಾಲಡ್ ತಿನ್ನಲಿಕ್ಕೆ ಮನ ಒಪ್ಪಲೇ ಇಲ್ಲ" ಎನ್ನುತ್ತಾರೆ ಡಾ. ಹುಬ್ಬರ್ಡ್.

ಸಸ್ಯಗಳಿಗೆ ಕೂಡ ಇಷ್ಟಾನಿಷ್ಟಗಳಿವೆ. ಅಣ್ಣಾಮಲೆ ವಿಶ್ವವಿದ್ಯಾಲಯದ ಪ್ರೊ. ಟಿ. ಎನ್. ಸಿಂಗರ ಪ್ರಯೋಗಗಳಿಂದ ಸಸ್ಯಗಳಿಗೆ ಸಂಗೀತ ತುಂಬ ಮೆಚ್ಚಿಕೆಯೆಂದೂ ಹತ್ತಿರದಲ್ಲಿ ಭರತನಾಟ್ಯ ಮಾಡಿದರೂ ಅವುಗಳಿಗೆ ಸಂತೋಷವಾಗುತ್ತದೆಂದೂ ಸಿದ್ಧವಾಗಿದೆ. ನಿತ್ಯ ಅರ್ಧರ್ಧ ತಾಸು ಓಟೀಲು ಸಂಗೀತವನ್ನು ಹತ್ತಿರ ಬಾರಿಸಿದಾಗ ತಂಬಾಕಿನ ಗಿಡಗಳು ರಭಸದಿಂದ ಬೆಳೆದವು.

ಪ್ರೇಮದಿಂದ ಬೆಳಸಿ ದಿನವೂ ಮನುಷ್ಯ ಸಂಪರ್ಕಕ್ಕೆ ಬಂದ ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆಂಬುದು ಅನೇಕ ತೋಟಗಾರರ ಅನುಭವದ ಮಾತು. ಅಮೇರಿಕದ ಧಾರ್ಮಿಕ ಸಂಶೋಧನ ಸಂಘದವರು ಮನೆಯ ಹತ್ತಿರ, ಮಕ್ಕಳ ನಗು ಕೇಕೆಗಳ ಸಮೀಪದಲ್ಲಿರುವ ಸಸ್ಯಗಳು ಉಳಿದವುಗಳಿಗಿಂತ ಚೆನ್ನಾಗಿ ಬೆಳೆಯುತ್ತವೆ ಎನ್ನುತ್ತಾರೆ. ತದ್ವಿರುದ್ಧವಾಗಿ ಅಲಕ್ಷ ನಿಷ್ಕರುಣೆಗ

ಳಿಂದ ಬೆಳೆಸಿದ ಸಸ್ಯಗಳೂ ಪುಷ್ಪಗಳೂ ಕಾರ್ಬನ್ ಮೊನೊಕ್ಸೈಡ್ ವಿಷವಾಯು ವನ್ನು ಬಿಟ್ಟು ಸುತ್ತಲ ವಾತಾವರಣವನ್ನು ಕಲುಷಿತಗೊಳಿಸುವ ಮೂಲಕ ನಿಮಗೆ ಪ್ರತೀಕಾರ ಮಾಡುತ್ತವೆಂದು ಅವರ ಹೇಳಿಕೆ.

ಇತರ ಸಂಶೋಧನೆಗಳು ಸಸ್ಯರೋಗಗಳು ಬರಿ ಕೀಟ ಕ್ರಿಮಿ ಜೀವಾಣು ಜನ್ಯವಾಗಿರದೆ ಮಾನವನ ಹಾಗೆ ನರರೋಗಗಳೂ ಅಲರ್ಜಿಗಳೂ ಸಸ್ಯಗಳನ್ನು ಪೀಡಿಸಬಲ್ಲವೆಂಬ ಅಭಿಪ್ರಾಯಕ್ಕೆ ಪುಷ್ಟಿ ಕೊಟ್ಟಿವೆ. ಬಾಳೆಗಳ, ಟೊಮ್ಯಾಟೋಗಳ "ರಕ್ತನಾಳ"ಗಳಲ್ಲಿ ರಕ್ತದ ಗಟ್ಟಿಗಳುಂಟಾಗಿ (ಮನುಷ್ಯರ ಹಾಗೆ) ಅವು ಹೃದ್ರೋಗಗಳಿಂದ ಸಾಯಬಲ್ಲವೆಂದು ಗೊತ್ತಾಗಿದೆ. ಕ್ಯಾಬೇಜುಗಳನ್ನು ತಲೆ ಕೆಳಗಾಗಿ ಬೆಳಸಲು ಯತ್ನಿಸಿದಾಗ ಅವುಗಳು ಎಷ್ಟು ತೊಂದರೆ ಪಟ್ಟುಕೊಂಡವೆಂದರೆ ನರಗಳ ಶೈಥಿಲ್ಯದಿಂದ ಅವುಗಳ ಬೆಳವಣಿಗೆಯೆ ನಿಂತುಹೋಯಿತು.

ಡಾ. ಹುಬ್ಬರ್ಡರು ತಮ್ಮ ಸಂಶೋಧನೆಗಳಿಗೆ ಸಸ್ಯ ಮನೋವಿಜ್ಞಾನವೆಂದು ಹೆಸರಿಟ್ಟಿದ್ದಾರೆ. ಅವರ ಶೋಧಗಳ ಫಲಿತಾಂಶಗಳನ್ನು ಇನ್ನೂ ಸರಿಯಾಗಿ ವಿತರಣೆ ಮಾಡಬೇಕಾಗಿದ್ದರೂ ಸಸ್ಯಗಳ ಮನಸ್ಸನ್ನು ಸರಿಯಾಗಿ ಅರಿತರೆ ಕೃಷಿಯಲ್ಲಿ, ವಿಶೇಷವಾಗಿ ತೋಟಗಾರಿಕೆಯಲ್ಲಿ ಕ್ರಾಂತಿಯಾಗಬಹುದೆಂದು ಅವರು ನಂಬಿದ್ದಾರೆ.

ಈ ಶಾಸ್ತ್ರದ ಬಲದಿಂದ ಸಾವಿರಾರು ಅಗೆಗಳಲ್ಲಿ ಯಾವುವು ಚೆನ್ನಾಗಿ ಬೆಳೆದು ಫಲ ನೀಡಬಲ್ಲದೆಂದು ತೋಟಗಾರ ಮುಂದಾಗಿ ತಿಳಿಯಬಲ್ಲ. ಒಂದು ಸಸ್ಯ ಸಂತುಷ್ಟವಾಗಿದೆಯೋ ಇಲ್ಲವೋ ಎಂದು ಕಂಡು ಹಿಡಿಯಲು ಸಾಧ್ಯವಾದರೆ ಅದರ "ಮನಸ್ಸಿಗೆ" ಹಿತವಾದುದನ್ನು ಮಾಡಬಹುದು. ಸಂತುಷ್ಟವಾದ ಗಿಡಗಳು ಸಾಮಾನ್ಯಗಿಡಗಳಿಗಿಂತ ಬೇಗನೆ, ಒಳ್ಳೇ ಫಲ ಕೊಡುವವೆಂದೂ ಹುಬ್ಬರ್ಡರ ವಿಶ್ವಾಸ. ಸಸ್ಯದ ಮನಃಸ್ಥಿತಿಯ ಅಭ್ಯಾಸದಿಂದಲೇ ಅದಕ್ಕೆ ರೋಗ ಬರಬಹುದೇ ಎಂಬುದನ್ನು ಮುಂದಾಗಿ ತಿಳಿಯಬಹುದೆಂದೂ ಅವರು ಭಾವಿಸಿದ್ದಾರೆ. "ಸಸ್ಯಗಳು ಮೊದಲೇ ಸಾವಿನ ವಿಚಾರ ಮಾಡುತ್ತಿದ್ದರೆ ಮಾತ್ರ ಅವುಗಳಿಗೆ ರೋಗ ಅಂಟುತ್ತದೆ" ಎಂಬುದಾಗಿ ಹುಬ್ಬರ್ಡರು ಘೋಷಿಸುತ್ತಾರೆ.

ಮಾನವೋಚಿತವಾದ ಕೆಲ ಚಿಕಿತ್ಸೆಗಳು ಸಸ್ಯಗಳ ಮೇಲೂ ಸಫಲವಾಗಿವೆ. ಬೆಳವಣಿಗೆ ಕುಂಠಿತವಾಗಿದ್ದ ಟೊಮ್ಯಾಟೋ ಗಿಡಗಳಿಗೆ ವಿದ್ಯುತ್ "ಶಾಕ್" ಚಿಕಿತ್ಸೆ ಮಾಡಿ ಇಂಗ್ಲಂಡಿನಲ್ಲೊಬ್ಬ ಯಶಸ್ವಿಯಾಗಿದ್ದಾನೆ. ಬೇರುಗಳ ಕೆಳಗೆ ನೆಲಕ್ಕೆ ವಿದ್ಯುತ್ ಆಘಾತ ಚಿಕಿತ್ಸೆ ಕೊಟ್ಟು ಮೂರು ಪಟ್ಟು ಹೆಚ್ಚು ಹಣ್ಣುಗಳನ್ನು ಉತ್ಪಾದಿಸಲು ಸಾಧ್ಯವಾಗಿದೆ.

ಭವಿಷ್ಯತ್ತಿನಲ್ಲಿ ಸಸ್ಯಗಳನ್ನು ಅತ್ಯಂತ ಸಂತುಷ್ಟವಾಗಿಟ್ಟು ಬೆಳೆ ಹೆಚ್ಚಿಸುವುದಷ್ಟೇ ಅಲ್ಲ, ಅವು ವರ್ಷವೆಲ್ಲ ಹೂ ಹಣ್ಣುಗಳನ್ನು ಕೊಡುವಂತೆ ಅವುಗಳನ್ನು ಪುಸಲಾಯಿಸಲಿಕ್ಕೂ ಸಾಧ್ಯವಿದೆಯೆಂದು ಕೆಲ ತಜ್ಞರು ಆಶೆ ಹಿಡಿದಿದ್ದಾರೆ. *



## ನುಡಿಮುತ್ತು

ಸತ್ಯವು ಒಂದು ಮಹಾವೃಕ್ಷ. ಅದರ ಸೇವೆ ಮಾಡಿದಷ್ಟೂ ಅದರ ಫಲಗಳು ಹೆಚ್ಚುತ್ತವೆ. ಇದರ ಫಲಗಳೆಂದೂ ಒಣಗಿ ನಿಸ್ಸಾರವಾಗುವುದಿಲ್ಲ.

— ಗಾಂಧೀಜಿ.

# ಗೋವೆಯ ೪೫೦ ವರ್ಷಗಳ ಸ್ವಾತಂತ್ರ್ಯ ಸಮರ

ಗೋವಾ ಪ್ರಜೆಗಳು ಪೋರ್ತುಗೀಸರ ವಿರುದ್ಧ
ಹೋರಾಡದ ಕಾಲವೇ ಇಲ್ಲ!

ಇವಾಗ್ರಿಯೋ ಜಾರ್ಜ್

ಅಲ್ಬುಕರ್ಕ್ ಗೋವೆಯನ್ನು ಗೆದ್ದು ಇದೇ ಕಳೆದ ನವಂಬರ್ ೨೫ ಕ್ಕೆ ೪೫೦ ವರ್ಷಗಳಾದವು. ಭಾರತವಲ್ಲಿ ಮೊಟ್ಟಮೊದಲಿಗೆ ವಸಾಹತು ರಾಜ್ಯವನ್ನು ಕಟ್ಟಿದ ರಾಷ್ಟ್ರವಾದ ಪೋರ್ತುಗಾಲ್ ಈ ವಸಾಹತುಗಳ ಮೇಲಿನ ತನ್ನ ಪ್ರಭುತ್ವವನ್ನು ಬಿಟ್ಟುಕೊಡುವಲ್ಲಿಯೂ ಕೊನೆಯದೇ ಆಗಲಿದೆ. ಹಾಗೆಂದ ಮಾತ್ರಕ್ಕೆ ಗೋವೆಯ ಜನ ಪೋರ್ತುಗಾಲ್‌ನ ಆಡಳಿತವನ್ನು ಒಪ್ಪಿಕೊಂಡಿದೆಯೆನ್ನುವುದು ಸತ್ಯವಾಗದು. ಗೋವೆಯಲ್ಲಿ ಈ ೪೫೦ ವರ್ಷಗಳಲ್ಲಿ ನಡೆದ ಘಟನೆಗಳು ತದ್ವಿರುದ್ಧವನ್ನೇ ಹೇಳುತ್ತವೆ.

ಅದರಂತೆ ಭಾರತದಲ್ಲಿರುವ ಪೋರ್ತುಗೀಸ್ ಪ್ರದೇಶಗಳೆಲ್ಲವೂ ಅದರ ಅಧೀನದಲ್ಲಿ ಕಳೆದ ೪೫೦ ವರ್ಷಗಳಿಂದಲೂ ಇವೆಯೆನ್ನುವುದೂ ತಪ್ಪು. ನಿಜವಾಗಿಯೆಂದರೆ 'ಎಸ್ಟೆಡೊ ಡಾ ಇಂಡಿಯಾ ಪೋರ್ತುಗೀಸ್' (ಭಾರತದಲ್ಲಿರುವ ಪೋರ್ತುಗೀಸ್ ರಾಜ್ಯ) ಎಂಬ ಡೌಲಿನ ಹೆಸರಿರುವ ಪ್ರದೇಶದಲ್ಲಿ ಬರೀ ಒಂದು ಐದನೆ ಅಂಶ ಪ್ರದೇಶ ಮಾತ್ರ ಕಳೆದ ೪೫೦ ವರ್ಷಗಳಿಂದ ಅವರ ಅಧೀನದಲ್ಲಿದೆ. ಗೋವೆಯಲ್ಲಿಯ ಸಾಲ್ಸೇಟ್, ಇಲ್ಹಾಸ್ ಮತ್ತು ಬಾಡೋರ್ಝು ಗಳು ಸಮಾವೇಶವಾಗುವ ಈ ಪ್ರದೇಶವನ್ನವರು 'ವೆಲ್ಹಾಸ್ ಕೊಂಕ್ವಿಸ್ತಾಸ್', (ಹಳೆಯ ವಿಜಯಗಳು) ಎಂದು ಕರೆಯುತ್ತಾರೆ. ಉಳಿದ ಭಾಗಗಳೆಲ್ಲ ಅವರ ಅಧೀನದಲ್ಲಿ ಕೇವಲ ೨೦೦ ವರ್ಷಗಳಿಂದ ಮಾತ್ರ ಇವೆ. ಈಗ ನಗರ ಹವೇಲಿ ಮತ್ತು ದಾದರಾಗಳು ವಿಮೋಚನೆ ಹೊಂದಿರುವುದರಿಂದ ಪೋರ್ತುಗಾಲ್ ಭಾರತದಲ್ಲಿಯ ತನ್ನ ಪ್ರದೇಶದಲ್ಲಿ ಒಂದೆಂಟಾಂಶ ಸ್ಥಳವನ್ನು ಕಳೆದುಕೊಂಡಂತಾಗಿದೆ.

ಪೋರ್ತುಗೀಸರೇನೇ ಹೇಳಿಕೊಳ್ಳುತ್ತಿರಲಿ, ಗೋವೆ ಎಂದೂ ಪರಕೀಯ ಪ್ರಭುತ್ವವನ್ನು ಒಪ್ಪಿಕೊಂಡಿಲ್ಲ. "ಅನಾಗರಿಕರನ್ನು ನಾಗರಿಕರನ್ನಾಗಿ" ಮಾಡುವ ಪೋರ್ತುಗೀಸರ ಧರ್ಮಕಾರ್ಯ ಭಾರತದಲ್ಲಿ ಎಂದೂ ಸುಗಮವಾಗಿ ಸಾಗಿಲ್ಲ.

ಅವರು ಗೋವೆಯನ್ನು ಗೆದ್ದುಕೊಂಡ ಮೊದಲನೆಯ ಶತಮಾನದಲ್ಲಿಯೆ ದಕ್ಷಿಣ ಭಾಗದ

"ಹಿಂದುಸ್ತಾನ ಸ್ಟ್ಯಾಂಡರ್ಡ್" ನಿಂದ




ಹಳ್ಳಿಗಳಾದ ವೆರೋಡಾ, ಕಂಕೋಲಿ, ಅಸ್ಸೋಲ್ನಾ, ವೇಲಿ ಮತ್ತು ಅಂಬಲಿಗಳ ಜನ ದಂಗೆಯೆದ್ದರು. ಸಾಲ್ಸಿತಾ ತಾಲೂಕಿನ ಇತರ ಭಾಗಗಳಿಂದ ನದಿಯ ಮೂಲಕ ಪ್ರತ್ಯೇಕಿಸಲ್ಪಟ್ಟಿದ್ದ ಈ ಜನ ಪೋರ್ತುಗೀಸರ ಕ್ರೂರ ಆಳಿಕೆಯ ಕಥೆಗಳನ್ನೂ ದೇವಾಲಯಗಳನ್ನು ನಾಶಗೊಳಿಸಿ ಜನರನ್ನು ಬಲಾತ್ಕಾರದಿಂದ ಮತಾಂತರಿಸುವ ಸುದ್ದಿಗಳನ್ನೂ ಕೇಳಿದ್ದರು. ಕರನಿರಾಕರಣೆ ಮತ್ತು ಪೋರ್ತುಗೀಸ್ ಪಾದ್ರಿಗಳಿಗೆ ತಮ್ಮ ಹಳ್ಳಿಗಳಿಗೆ ಬರಲು ಅವಕಾಶ ಕೊಡದಿರುವುದು– ಇವುಗಳಿಂದ ಪೋರ್ತುಗೀಸ್ ಆಡಳಿತವನ್ನು ಧಿಕ್ಕರಿಸಲು ಈ ಹಳ್ಳಿಗರು ನಿರ್ಧರಿಸಿದರು.

ಈ ಜನರ ವಿರೋಧವನ್ನು ಹತ್ತಿಕ್ಕಲು, ಇವರನ್ನು ರಮಿಸಿ ವಶಪಡಿಸಿಕೊಳ್ಳಲು ಪೋರ್ತುಗೀಸರು ಉಪಯೋಗಿಸಿದ ಸಾಮ-ದಾನ-ದಂಡ-ಭೇದೋಪಾಯಗಳೆಲ್ಲ ನಿಷ್ಫಲವಾದವು. ಕೊನೆಯ ಪ್ರಯತ್ನವೆಂದು ಅವರು ಪಾದ್ರಿಗಳನ್ನು ಅಲ್ಲಿಗೆ ಕಳಿಸಿಕೊಟ್ಟರು. ಜನರನ್ನು ಮತಾಂತರಗೊಳಿಸಿದರೆ ಅವರ ನಿಷ್ಠೆ ದೊರಕೀತು ಎಂದು ಪೋರ್ತುಗೀಸರು ಭಾವಿಸಿದ್ದರು. ಆದರೆ ಧರ್ಮಾಂಧರಾದ ಈ ಜೆಸುಯಿಟ್ ಪಾದ್ರಿಗಳು ಉರಿಯುವ ಬೆಂಕಿಯನ್ನು ನಂದಿಸುವ ಬದಲು ಅದರಲ್ಲಿ ತುಪ್ಪವನ್ನು ಸುರಿದರು. ಅವರು ಒಂದು ಆಕಳನ್ನು ಕೊಂದು ಅದರ ರಕ್ತವನ್ನು ದೇವಾಲಯದ ಕೆರೆಯಲ್ಲಿ ಬೆರೆಸಿ ಅದನ್ನು ಅಪವಿತ್ರಗೊಳಿಸಿದರು. ಅವರ ಈ ದುಷ್ಕೃತ್ಯವು ಗೋವೆಯಲ್ಲಿನ ಮೊದಲನೆಯ ದೊಡ್ಡ ಬಂಡಾ

ಯವನ್ನು ಪ್ರಚೋದಿಸಿತು. ಜನರು ಈ ಪಾದ್ರಿಗಳನ್ನು ಕೊಂದುಹಾಕಿದರು.

ಆಗ ಪೋರ್ತುಗೀಸರು ಕೈಗೆ ಸಿಕ್ಕಿದ್ದನ್ನೆಲ್ಲ ನಾಶ ಮಾಡುವ ಆಜ್ಞೆಯಿತ್ತು ದೊಡ್ಡ ಸೈನ್ಯವೊಂದನ್ನು ಕಳಿಸಿದರು. ಜನ ಅದಕ್ಕೂ ಬಗ್ಗಲಿಲ್ಲ. ಅವರು ನೆರೆಯ ರಾಜ್ಯಗಳಿಗೆ ಓಡಿದರು. ಅವರಿಗೂ ಪೋರ್ತುಗೀಸರಿಗೂ ಅನೇಕ ಚಕಮಕಿಗಳಾದವು. ೧೫೮೭ ರಲ್ಲಿ ನಡೆದ ಇಂಥ ಒಂದು ಕದನದ ಸ್ಥಳ ಇಂದಿಗೂ 'ಝುಜುರ್ಝಾಗಾಲ' (ರಣಭೂಮಿ) ಕರೆಯಲ್ಪಡುತ್ತಿದೆ.

ಜನರ ಅಪರಾಧಕ್ಕೆ ಶಿಕ್ಷೆಯೆಂದು ಈ ಐದು ಹಳ್ಳಿಗಳ ಜಮೀನನ್ನು ಜಪ್ತಿ ಮಾಡಿ ಅದನ್ನು ಜೆಸುಯಿಟ್‌ರಿಗೆ ಹಂಚಲಾಯಿತು. ಕಂಕೋಲಿ ಹಳ್ಳಿಯ ೧೪ ಜನ ಹಿರಿಯರನ್ನು ಬಂಧಿಸಿ ಅವರನ್ನು ಅಸ್ಲೋನಾಕೋಟೆಯಲ್ಲಿ ಗಲ್ಲಿಗೇರಿಸಿದರು.

ಪೋರ್ತುಗೀಸ್ ಆಡಳಿತವನ್ನು ಜನ ಮಾತ್ರವಲ್ಲ, ಕೆಥೊಲಿಕ್ ಪಾದ್ರಿಗಳೂ ದ್ವೇಷಿಸುತ್ತಿದ್ದರು. ಬಿಚೋಲಿಯ ಮನವೇಲ್ ಕಾಸ್ಟ್ರೊ ಎಂಬ ಪಾದ್ರಿ ೧೬೬೪ ರಲ್ಲಿ ಛತ್ರಪತಿ ಶಿವಾಜಿಯ ಸಂಗಡ ಪತ್ರವ್ಯವಹಾರ ನಡೆಸಿ ಪೋರ್ತುಗೀಸರನ್ನು ಹೊಡೆದಟ್ಟಲು ಸಹಾಯ ಕೋರಿದ್ದನು ಎಂದು ಇತಿಹಾಸದಲ್ಲಿ ದಾಖಲೆಗಳಿವೆ.

ಮೊದಲನೆಯ ಬಂಡಾಯ ಮುಖ್ಯವಾಗಿ ಬಲಾತ್ಕಾರದ ಮತಾಂತರದ ವಿರುದ್ಧ ನಡೆದರೆ ಎರಡನೆಯ ಬಂಡಾಯ ಪೋರ್ತುಗೀಸರನ್ನು ಹೊಡೆದೋಡಿಸುವುದಕ್ಕಾಗಿ ನಡೆಯಿತು. ಗೋವೆಯ ವಸಹಾತು ಸ್ಥಾನಮಾನದಿಂದ ಗೋವೆಯ ಪಾದ್ರಿಗಳು ಅಸಂತುಷ್ಟರಾಗಿದ್ದರು. ತಮ್ಮ ನಾಡಿನ ಆಡಳಿತದಲ್ಲಿ ಅವರಿಗೆ ಏನೂ ಅಧಿಕಾರವಿರಲಿಲ್ಲ. ಚರ್ಚಿನಲ್ಲಿ ಮೇಲಿನ ಸ್ಥಾನಕ್ಕೆ ಏರುವ ಅವಕಾಶವೂ ಇರಲಿಲ್ಲ. ಇದರಿಂದ ಖತಿಗೊಂಡ ಅವರು ಎರಡನೆಯ ಬಂಡಾಯವನ್ನು ಎಬ್ಬಿಸಿದರು.

ಈ ಬಂಡಾಯ "ಕಾನ್ಸ್‌ಪಿರಸಿ ಆಫ್ ದಿ ಪಿಂಟೋಸ್" (ಪಿಂಟೋಗಳ ಒಳಸಂಚು) ಎಂದು ಪ್ರಸಿದ್ಧವಿದೆ. ಪಣಜಿಯ ಫಾದರ್ ಕೆಟಿನೊ ಫ್ರಾನ್ಸಿಸ್ಕೊ ಕೊಟೊ ಮತ್ತು ಪಿದಾದೆಯ ಫಾದರ್ ಜೋಸ್ ಅಂತೋನಿಯೊ ಗೊನ್ಸಾಲ್ವಿಸ್‌ರ ನೇತೃತ್ವದಲ್ಲಿ ೧೭೮೭, ಅಗಸ್ಟ್ ೧೦ ರಂದು ಈ ಬಂಡಾಯ ಏಳಬೇಕೆಂದು ಯೋಚಿಸಲಾಗಿತ್ತು. ಅವರಿಗೆ ಪೋರ್ತುಗೀಸ್ ಸೈನ್ಯದ ಒಂದು ಪಂಗಡದವರ ಸಹಾಯವಿತ್ತು. ಅವರು ಮರಾಠರ ಮತ್ತು ಟೀಪು ಸುಲ್ತಾನನ ಸಹಾಯವನ್ನೂ ಕೋರಿದ್ದರು.

ಆದರೆ ಪೋರ್ತುಗೀಸರಿಗೆ ಈ ಬಂಡಾಯದ ಸುಳಿವು ಮೊದಲೇ ಹತ್ತಿ ಅವರು ಅದರ ಧುರೀಣರಾದ ೪೭ ಜನರನ್ನು ಸೆರೆಹಿಡಿದರು. ಇವರಲ್ಲಿ ೧೭ ಜನ ಪಾದ್ರಿಗಳೂ ೭ ಜನ ಸೈನ್ಯಾಧಿಕಾರಿಗಳೂ ಇದ್ದರು. ಫಾದರ್ ಜೋಸ್ ಅಂತೋನಿಯೊ ಗೊನ್ಸಾಲ್ವಿಸ್ ಮತ್ತು ಇತರ ಏಳು ಜನರು ಭಾರತಕ್ಕೆ ಓಡಿಬಂದರು.

ಸೆರೆಸಿಕ್ಕ ದುರ್ದೈವಿಗಳಲ್ಲಿ ಕೆಲವರಿಗೆ ಮರಣ ದಂಡನೆಯಾಯಿತು, ಕೆಲವರಿಗೆ ಆಜೀವ ಕಾರಾಗೃಹವಾಸದ ಶಿಕ್ಷೆಯಾಯಿತು. ಒಬ್ಬಿಬ್ಬರಿಗೆ ಘಟಕಿ ಶಿಕ್ಷೆ ವಿಧಿಸಲ್ಪಟ್ಟಿತು.

ಮರಣದಂಡನೆಗೊಳಗಾದವರನ್ನು ಕುದುರೆಗಳ ಬಾಲಕ್ಕೆ ಕಟ್ಟಿ ಊರ ಬೀದಿಗಳಲ್ಲಿ ಎಳೆಸಿದರು. ಗಲ್ಲಿಗೇರಿಸುವ ಮೊದಲು ಅವರ ಕೈಗಳನ್ನು ಕತ್ತರಿಸಿದರು. ಅವರ ಹೆಣಗಳನ್ನು ತುಂಡುತುಂಡಾಗಿ ಮಾಡಿ ಆ ತುಂಡುಗಳನ್ನು ಭರ್ಚಿಗೆ ಚುಚ್ಚಿ ಜನರನ್ನು ಬೆದರಿಸಲೆಂದು ಊರಲ್ಲಿ ಅಲ್ಲಲ್ಲಿ ಮೆರೆಸಿದರು.

ರಾಣೆ ಜನರು ಯೋದ್ಧ ಕುಲದವರು. ರಾಜಸ್ಥಾನದಲ್ಲಿ ಮುಸ್ಲಿಮರ ದಾಳಿಯಾದಾಗ ಅಲ್ಲಿಂದ ಬಂದು ಇವರು ಗೋವೆಯಲ್ಲಿ ನೆಲೆಸಿದ್ದರು. ೧೭೫೫ ರಿಂದ ೧೯೧೨ ರ ಅವಧಿಯಲ್ಲಿ

ಇವರು ಇಪ್ಪತ್ತು ಸಲ ಪೋರ್ತುಗೀಸ್ ಆಡಳಿತದ ವಿರುದ್ಧ ಬಂಡೆದ್ದರು. ರಾಣೆ ಜನರ ವೀರ ಕೃತಿಗಳು ಗೋವೆಯಲ್ಲಿನ್ನೂ ಲಾವಣಿ, ಜಾನಪದ ಕಥೆಗಳಲ್ಲಿ ಸಜೀವವಾಗಿವೆ. ಗೋವೆಯ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಇವರ ಸಾಹಸಗಳು ಹಿರಿಯ ಸ್ಥಾನವನ್ನಲಂಕರಿಸಿವೆ.

೧೭೫೫ ರಿಂದ ೧೮೨೮ ರೊಳಗೆ ಹದಿನಾಲ್ಕು ಸಲ ರಾಣೆ ಜನರು ಬಂಡಾಯವೆದ್ದರು. ಪ್ರತಿ ಸಲವೂ ಅವರನ್ನು ಶಾಂತಗೊಳಿಸಲು ಪೋರ್ತುಗೀಸರು ಸವಲತ್ತುಗಳನ್ನು ಕೊಡಬೇಕಾಯಿತು. ಇವುಗಳಲ್ಲಿ ದೊಡ್ಡ ಬಂಡಾಯಗಳು ಎನಿಸಿದವುಗಳಲ್ಲಿ ಒಂದು ೧೮೨೪ ರಲ್ಲಿ ನಡೆಯಿತು. ಈ ಬಂಡುಗಾರರ ಧುರೀಣರನ್ನು ಹಿಡಿದು ಅಗೌಡಾ ಕೋಟೆಯಲ್ಲಿ ಬಂಧನದಲ್ಲಿಡಲು ಪೋರ್ತುಗೀಸರಿಗೆ ಒಂದು ವರ್ಷ ಹಿಡಿಯಿತು.

ಆಗೊಮ್ಮೆ ಈಗೊಮ್ಮೆ ಎಂದು ನಾಲ್ಕು ವರ್ಷಗಳ ಕಾಲ ಒಂದೇ ಸವನೆ ನಡೆದ ಇನ್ನೊಂದು ದೊಡ್ಡ ಬಂಡಾಯಕ್ಕೆ ಬಾಬು ರಾಣೆ ಧುರೀಣನಾಗಿದ್ದ. ಬಾಬು ರಾಣೆ ಮತ್ತು ಅವನ ಸಂಗಡಿಗರು ಸೆರೆಸಿಕ್ಕ ನಂತರವೇ ಈ ಬಂಡಾಯ ತಣ್ಣಗಾಯಿತು. ಈ ಬಂಡಾಯ ಆರಂಭವಾದದ್ದು ೧೮೪೫ ರಲ್ಲಿ.

ಈ ಬಂಡಾಯ ನಿಂತ ಎರಡು ವರುಷಗಳಲ್ಲೇ ದೀಪಾಜಿ ರಾಣೆ ನಾನುಜ್ ಕೋಟೆಯನ್ನು ಗೆದ್ದುಕೊಂಡ. ಪರ್ವತ ಪ್ರದೇಶದ ತನ್ನ ಗುಪ್ತ ಠಾಣೆಯಲ್ಲಿದ್ದುಕೊಂಡು ಈತ ಪೋರ್ತುಗೀಸ್ ಸೈನ್ಯವನ್ನು ಹಣ್ಣು ಹಣ್ಣು ಮಾಡಿದ. ಪೋರ್ತುಗೀಸರು ದೀಪಾಜಿಗೆ ಅವನ ಜಹಗೀರು ಮುಂತಾದವನ್ನು ಹಿಂದಕ್ಕೆ ಕೊಟ್ಟಿದ್ದಲ್ಲದೆ ಸಿಪಾಯಿಗಳ ಕ್ಯಾಪ್ಟನ್ ಹುದ್ದೆಯನ್ನಿತ್ತು ಅವನೊಡನೆ ಸಂಧಿ ಮಾಡಿಕೊಳ್ಳಬೇಕಾಯಿತು.

೧೮೬೯ ರಲ್ಲಿ ಕಸ್ತೋಬಾ ದೇಸಾಯಿ ಪ್ರಾರಂಭಿಸಿದ ಬಂಡಾಯ ೧೮೭೧ ರಲ್ಲಿ ಅವನನ್ನು ಪೋರ್ತುಗೀಸರು ಮೋಸದಿಂದ ಸೆರೆಹಿಡಿದ ನಂತರ ಕೊನೆಗಂಡಿತು.

೧೮೯೫ ರಲ್ಲಿ ಪೋರ್ತುಗೀಸ್ ಸೈನ್ಯದ ಮರಾಠಾ ಸಿಪಾಯಿಗಳು ದಂಗೆಯೆದ್ದಾಗಲೇ ಜನರ ಇನ್ನೊಂದು ಬಂಡಾಯವೂ ಆಯಿತು. ಈ ಬಂಡಾಯವನ್ನು ಹತ್ತಿಕ್ಕಲು ಪೋರ್ತುಗಾಲ್‌ನ ಅರಸನ ತಮ್ಮ ಪ್ರಿನ್ಸ್ ಅಫಾನ್ಸೊ ಸ್ವತಃ ಸೈನ್ಯದೊಂದಿಗೆ ಬಂದ ಆದರೆ ಶತ್ರುಗಳನ್ನು ಶಕ್ತಿಯಿಂದ ಹತ್ತಿಕ್ಕಲು ಅಸಮರ್ಥನಾದ ಅವನು ತಾನೇ ಸ್ವತಃ ಗೋವೆಯ ವೈಸರಾಯನಾಗಿ ಅಧಿಕಾರ ವಹಿಸಿಕೊಂಡು ಬಂಡುಗಾರರನ್ನು ಸಮಾಧಾನಪಡಿಸುವುದಕ್ಕಾಗಿ ಅವರಲ್ಲಿ ಸೆರೆಸಿಕ್ಕವರನ್ನೆಲ್ಲ ಬಿಡುಗಡೆ ಮಾಡಿದ್ದಲ್ಲದೆ ಇನ್ನೂ ಅನೇಕ ಸವಲತ್ತುಗಳನ್ನು ಕೊಟ್ಟನು.

ಆದರೆ ಪ್ರಿನ್ಸ್ ಅಫಾನ್ಸೊ ಪೋರ್ತುಗಾಲ್‌ಗೆ ಮರಳಿದ ಬಳಿಕ ವೈಸರಾಯ ಪಟ್ಟಕ್ಕೇರಿದವನು ಮತ್ತೆ ದಬ್ಬಾಳಿಕೆಯನ್ನಾರಂಭಿಸಿ ರಾವಜಿಯನ್ನೊಳಗೊಂಡು ಅನೇಕ ರಾಣೆ ಜನರನ್ನು ಕೊಲ್ಲಿಸಿದನು. ಪೋರ್ತುಗೀಸ್ ಧರ್ಮಾಧಿಕಾರಿಗಳನ್ನು ಧಿಕ್ಕರಿಸಿ ಸಿಸ್ಮೆಟಿಕ್ ಚರ್ಚನ್ನು ಸೇರಿದ ವರ್ಣಾದ ಪಾದ್ರಿ, ಫಾದರ್ ಅಲ್ವಾರಿಸನನ್ನೊಳಗೊಂಡು ಬಂಡಾಯಕ್ಕೆ ಸಹಾನುಭೂತಿ ತೋರಿದ ಅನೇಕರು ಬಂಧಿಸಲ್ಪಟ್ಟರು. ಫಾದರ್ ಅಲ್ವಾರಿಸ್ "ಬ್ರೆಡೊ ಇಂಡಿಯಾನೊ" (ಭಾರತದ ಕರೆ) ಎಂಬ ಪತ್ರಿಕೆಯ ಸಂಪಾದಕರಾಗಿದ್ದರು. ಅವರು ಮರಾಠಾ ಸಿಪಾಯಿಗಳ ಬಂಡಾಯವನ್ನು ಸಮರ್ಥಿಸಿ ಸರಕಾರದ ದಬ್ಬಾಳಿಕೆಯನ್ನು ಬಲವಾಗಿ ಖಂಡಿಸುತ್ತಿದ್ದರು.

೧೯೦೨ ರಲ್ಲಿ ದಾದಾ ರಾಣೆ ಮತ್ತು ಅವನ ಸಂಗಡಿಗರನ್ನು ಬಂಧಿಸಿ ವಿಚಾರಣೆಯ ಸೋಗು ನಡೆಸಿ ತಿಮೂರಕ್ಕೆ ಅವರನ್ನು ಗಡೀಪಾರು ಮಾಡಿದರು. ಅಲ್ಲಿಗೆ ಕಳಿಸಲ್ಪಟ್ಟ ಈ ಜನ ಮತ್ತೆ ಗೋವೆಯನ್ನು ಕಾಣಲಿಲ್ಲ.

ರಾಣೆ ಜನರ ಕೊನೆಯ ಬಂಡಾಯ ೧೯೧೨ ರಲ್ಲಿ ಮೋರಿಯೊ ಸಾವಂತ ಮತ್ತು ಗಿಲ್

ಸಾವಂತರ ಧುರೀಣತ್ವದಲ್ಲಿ ನಡೆಯಿತು. ಈ ಬಂಡಾಯವನ್ನು ಹತ್ತಿಕ್ಕಲು ಪೋರ್ತುಗೀಸ್ ಸರಕಾರ ಮೊಝಾಂಬಿಕ್‌ನಿಂದ ಸೈನ್ಯವನ್ನು ಕರೆಸಿತು. ಮೋರಿಯೋ ಮಲಗಿದ್ದಾಗ ಅವನನ್ನು ಕೊಂದು ಗಿಲ್ ಸಾವಂತನನ್ನು ಅವನ ಕೆಲ ಅನುಯಾಯಿಗಳೊಂದಿಗೆ ಪೋರ್ತುಗೀಸ್ ಪಶ್ಚಿಮ ಆಫ್ರಿಕೆಗೆ ಗಡೀಪಾರು ಮಾಡಿ ಸರಕಾರ ಈ ಬಂಡಾಯವನ್ನು ಬಲುಃ ಕ್ರೂರವಾಗಿ ಹತ್ತಿಕ್ಕಿತು.

ಇಲ್ಲಿಗೆ ೧೫೦ ವರ್ಷಗಳಿಂದ ಪೋರ್ತುಗೀಸರೊಂದಿಗೆ ರಾಣೆ ಜನರು ನಡೆಸಿದ ಹೋರಾಟ ಕೊನೆಗೊಂಡಿತು.

೧೮೪೪ ರಲ್ಲಿ ಪ್ರಿಫೆಕ್ಟರಾಗಿ ಆರಿಸಲ್ಪಟ್ಟ ಹದಿನೆಂಟೇ ದಿನಗಳಲ್ಲಿ ಪೋರ್ತುಗೀಸರಿಂದ ಪದಚ್ಯುತಗೊಳಿಸಲ್ಪಟ್ಟ ಬರ್ನಾರ್ಡೋ ಪೆರೆಸ್ ಡಿ ಸಿಲ್ವಾ ಬ್ರಿಟಿಶ್ ಭಾರತಕ್ಕೆ ಓಡಿ ಬಂದರು. ಅವರಿಗೆ ಬ್ರಿಟಿಶ್ ಸರಕಾರ ಆಶ್ರಯವಿತ್ತಿತು. ಬಂದ ಕೆಲ ತಿಂಗಳಲ್ಲಿ ಇವರು ದಮನದಲ್ಲಿ ಸ್ಥಾಪಿಸಿದ ತಾತ್ಪೂರ್ತಿಕ ಸರಕಾರಕ್ಕೆ ಭಾರತದಲ್ಲಿಯ ಬ್ರಿಟಿಶ್ ಸರಕಾರ ಮನ್ನಣೆಯಿತ್ತಿತು. ಈ ತಾತ್ಪೂರ್ತಿಕ ಸರಕಾರ ದಮನ, ದೀವ್, ನಗರ ಹವೇಲಿ ಮತ್ತು ದಾದರಾಗಳಲ್ಲಿ ಎರಡು ವರ್ಷಗಳ ಕಾಲ ಆಳಿಕೆ ನಡೆಸಿತು.

ಇಂಗ್ಲೀಷ್, ಅಮೇರಿಕನ್ ಮತ್ತು ಡಚ್ ಅಧಿಕಾರಿಗಳ ಸಹಾಯದಿಂದ ಐದು ಯುದ್ಧದ ಹಡಗುಗಳನ್ನು ಸಜ್ಜುಗೊಳಿಸಲು ಕೂಡ ಬರ್ನಾರ್ಡೋ ಪೆರೆಸ್ ಡಿ ಸಿಲ್ವಾ ಸಮರ್ಥರಾದರು. ದಮನ, ದೀವ್, ಸಿಂಧ, ರತ್ನಾಗಿರಿ ಮತ್ತು ಮುಂಬಯಿಗಳಿಂದ ನಾವಿಕ ಸೈನಿಕರು ಕಳಿಹಾಕಲ್ಪಟ್ಟರು. ಆದರೆ ದುರ್ದೈವದಿಂದ ಗೋವೆಯನ್ನು ಗೆಲ್ಲಲು ಕಳಿಸಲ್ಪಟ್ಟ ಈ ಹಡಗುಗಳು ಹಾದಿಯಲ್ಲಿ ಬಿರುಗಾಳಿಗೆ ಸಿಕ್ಕು ನಾಶವಾದವು.

೧೮೬೨ ರಲ್ಲಿ ಫ್ರಾನ್ಸಿಸ್ಕೊ ಲುಯಿಸ್ ಗೋಮ್ಸ್ ಪೋರ್ತುಗೀಸ್ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕೆಂದು ಪೋರ್ತುಗೀಸ್ ಪಾರ್ಲಿಮೆಂಟಿನಲ್ಲಿ ಪ್ರತಿಪಾದಿಸಿದ.

೧೯೧೦ ರಲ್ಲಿ ಪೋರ್ತುಗಾಲ್‌ನಲ್ಲಿ ಪ್ರಜಾಪ್ರಭುತ್ವ ಬಂದಿತು. ಪ್ರಜಾಪ್ರಭುತ್ವ ಸರಕಾರವು ವಸಾಹತುಗಳಿಗೆ ಬಹುಮಟ್ಟಿಗೆ ಸ್ವಾತಂತ್ರ್ಯವಿತ್ತು ಹಿಂದಿನ ಆಳಿಕೆಗಳಲ್ಲಿ ನಡೆಸುತ್ತಿದ್ದ ಧಾರ್ಮಿಕ ಅತ್ಯಾಚಾರಗಳನ್ನು ನಿಲ್ಲಿಸಿತು.

ಆದರೆ ದುರ್ದೈವದಿಂದ ಪೋರ್ತುಗಾಲ್‌ನಲ್ಲಿ ಪ್ರಜಾಪ್ರಭುತ್ವ ಬಹುಕಾಲ ಬಾಳಲಿಲ್ಲ. ೧೪ ವರ್ಷಗಳ ನಂತರ ನಡೆದ ಸೈನಿಕ ಕ್ರಾಂತಿಯಲ್ಲಿ ಪ್ರಜಾಪ್ರಭುತ್ವ ಉರುಳಿ ಡಾಕ್ಟರ್ ಸಾಲಾಝಾರರ ಸರ್ವಾಧಿಕಾರಿ ಫ್ಯಾಸಿಸ್ಟ್ ಆಳಿಕೆ ಶುರುವಾಯಿತು. ತಮ್ಮ ಸ್ಥಾನ ಭದ್ರವಾದ ನಂತರ ೧೯೩೦ ರಲ್ಲಿ ಡಾ. ಸಾಲಾಝಾರರು ನೂತನ ಸಂವಿಧಾನದ ಮೂಲಕ ವಸಾಹತುಗಳ ಮೇಲಿನ ಪೋರ್ತುಗಾಲ್‌ನ ಅಧಿಕಾರ ಅಬಾಧಿತವಾದದ್ದೆಂದೂ ಅಲ್ಲಿಯ ಜನರನ್ನು ಸುಧಾರಿಸುವ ಕರ್ತವ್ಯದ ಹೊಣೆ ಪೋರ್ತುಗಾಲ್ ಮೇಲಿದೆಯೆಂದೂ ಸಾರಿದರು. ಡಾ. ಸಾಲಾಝಾರರ ಸರ್ವಾಧಿಕಾರಿ ಆಡಳಿತದಲ್ಲಿ ಗೋವೆ ಹಾಗೂ ಪೋರ್ತುಗಾಲ್‌ನ ಇತರ ವಸಾಹತುಗಳು ನುಗ್ಗುನುಗ್ಗಾಗುತ್ತಿವೆ.

ಗೋವೆಯಲ್ಲೀಗ ನಾಗರಿಕ ಸ್ವಾತಂತ್ರ್ಯವಿಲ್ಲ. ಬ್ಯಾಂಕಿನಲ್ಲಿ ದೊಡ್ಡ ರಕಮನ್ನು ಠೇವಿಡದೆ, ಪ್ರಸಿದ್ಧಿಸುವ ವಿಷಯಗಳನ್ನೆಲ್ಲ ಮೊದಲೇ ಸೆನ್ಸಾರ್ ಅಧಿಕಾರಿಗಳಿಗೆ ತೋರಿಸದೆ ಯಾವ ಪತ್ರಿಕೆಯೂ ಪ್ರಕಟವಾಗುವಂತಿಲ್ಲ. ಅಧಿಕಾರಿಗಳು ಯಾವ ಕ್ಷಣದಲ್ಲಿ ಬೇಕಾದರೂ ಪತ್ರಿಕೆಯನ್ನು ನಿಲ್ಲಿಸಬಲ್ಲರು. ಸರಕಾರೀ ಪಕ್ಷವಾದ "ನ್ಯಾಶನಲ್ ಯುನಿಯನ್" ಪಕ್ಷವನ್ನು ಬಿಟ್ಟು ಮತ್ತಾವ ರಾಜಕೀಯ ಪಕ್ಷವೂ ಅಲ್ಲಿ ತಲೆ ಎತ್ತು

ವಂತಿಲ್ಲ. ಮುಂಚಿತವಾಗಿ ಅಪ್ಪಣೆ ಪಡೆಯದೆ ಸಭೆ ಸೇರಿಸಲು ಸಾಧ್ಯವಿಲ್ಲ. ಕೆಲಸಗಾರರಿಗೆ ಮುಷ್ಕರ ಹೂಡುವ ಅಧಿಕಾರವಿಲ್ಲ. ಪೋಲಿಸರಿಗೆ ಸಭೆಗಳನ್ನು ಪ್ರತಿಬಂಧಿಸುವುದು, ಸಂಶಯಿತರ ಮನೆಗಳನ್ನು ಶೋಧಿಸುವುದೇ ಮುಂತಾದ ಅನೇಕ ಅಧಿಕಾರಗಳಿವೆ. ಪೋರ್ತುಗಾಲ್‌ನ ಜನ ಸರ್ವಾಧಿಕಾರಿ ಆಡಳಿತದ ವಿರುದ್ಧ ಹೋರಾಡುತ್ತಿದ್ದರೆ ಗೋವೆ ಜನ ಸರ್ವಾಧಿಕಾರಿ ಆಡಳಿತ ಮತ್ತು ವಸಾಹತುವಾದ ಎರಡರ ವಿರುದ್ಧವೂ ಹೋರಾಡಬೇಕಾಗಿದೆ.

೧೯೨೮ ರಲ್ಲಿ ಡಾ. ಟಿ. ಬಿ. ಕುನ್ಹಾರ ನೇತೃತ್ವದಲ್ಲಿ ಗೋವೆಯ ಜನ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿ ಅದನ್ನು ಅಖಿಲ ಭಾರತ ಕಾಂಗ್ರೆಸ್ಸಿನ ಅಂಗವನ್ನಾಗಿ ಮಾಡಿದರು. ಮುಂದೆ ಕಾರಣಾಂತರಗಳಿಂದ ಈ ಸಂಬಂಧ ತಪ್ಪಿದರೂ ೧೯೪೬ ರ ವರೆಗೂ ಈ ಗೋವಾ ಕಾಂಗ್ರೆಸ್ಸು ತನ್ನ ಚಟುವಟಿಕೆ ನಡೆಸುತ್ತಲಿತ್ತು.

ಭಾರತಕ್ಕೆ ಸ್ವಾತಂತ್ರ್ಯ ದೊರೆಯುವುದಕ್ಕೆ ಒಂದು ವರ್ಷ ಮೊದಲು ಅಂದರೆ ೧೯೪೬, ಜೂನ್ ೧೮ ರಂದು ಗೋವೆಯ ಜನ ಸಾಮೂಹಿಕ ಚಳವಳಿಯನ್ನಾರಂಭಿಸಿದರು. ಪೋರ್ತುಗೀಸ್ ಸರಕಾರ ದಬ್ಬಾಳಿಕೆಯನ್ನಾರಂಭಿಸಿತು. ಸಾವಿರಾರು ಜನ ಜೇಲು ಕಂಡರು. ಧುರೀಣರಾದ ಡಾ. ಟಿ. ಬಿ. ಕುನ್ಹಾ, ಪಿ. ಕಾರೋಳಕರ, ಡಾ. ಆರ್. ಹೆಗಡೆ, ಜೆ. ಆಯ್. ಡಿ ಲೊಯೋಲಾ ಮತ್ತು ಎಲ್. ಬೆಂಬ್ರೆ ಇವರಿಗೆ ೪ ರಿಂದ ೯ ವರ್ಷಗಳ ಶಿಕ್ಷೆ ವಿಧಿಸಲ್ಪಟ್ಟು ಅವರನ್ನು ಪೋರ್ತುಗಾಲಕ್ಕೆ ಕಳಿಸಿದರು.

ಆದರೆ ಚಳವಳಿ ನಿಲ್ಲಲಿಲ್ಲ. ಈ ಲೇಖಕನು ಭಾರತದ ಸ್ವಾತಂತ್ರ್ಯೋದಯದ ದಿನ (೧೯೪೭, ಅಗಸ್ಟ ೧೫) ಬಂಧಿಸಲ್ಪಟ್ಟು ಅವನಿಗೆ ೫ ವರ್ಷ ಕಠಿನ ಶಿಕ್ಷೆ ವಿಧಿಸಲ್ಪಟ್ಟಿತು. ಗೋವಾ ನ್ಯಾಶನಲ್ ಕಾಂಗ್ರೆಸ್ಸನ್ನು ಪುನರುಜ್ಜೀವಿಸಿದ ಧುರೀಣ ಪಾಂಡುರಂಗ ಶಿರೋಡಕರ, ಡಾ. ವಿ. ಮಹೇನಕರ, ಗಿಲ್‌ಹೆರ್ಮ್ಸ್ ಡಿಸೋಜಾ, ಎನ್. ಕಾರಪುರಕರರಿಗೆ ೧೫ ವರ್ಷ ಕಠಿಣ ಶಿಕ್ಷೆಯಾಯಿತು. ಇನ್ನೂ ಕೆಲವರಿಗೆ ೨೮ ವರ್ಷ ಶಿಕ್ಷೆ ವಿಧಿಸಲ್ಪಟ್ಟು ಅವರನ್ನು ಪೋರ್ತುಗೀಸ್ ಪಶ್ಚಿಮ ಆಫ್ರಿಕೆಗೆ ಕಳಿಸಲಾಯಿತು. ಅವರಿನ್ನೂ ಅಲ್ಲೇ ಇದ್ದಾರೆ.

೧೯೫೪ ರಲ್ಲಿ ಇನ್ನೊಂದು ಸತ್ಯಾಗ್ರಹ ಚಳವಳಿ ನಡೆಯಿತು. ಡಾ. ಪಿ. ಡಿ. ಗಾಯತೊಂಡೆಯವರನ್ನು ಪೋರ್ತುಗಾಲ್‌ಗೆ ಗಡೀಪಾರು ಮಾಡಿ ಅನೇಕ ಕಾರ್ಯಕರ್ತರನ್ನು ಸ್ಥಾನಬದ್ಧರನ್ನಾಗಿ ಮಾಡಿದ ಬಳಿಕ ಮುಂಬಯಿಯಲ್ಲಿ ವಾಸಿಸುತ್ತಿದ್ದ ಗೋವಾ ಜನರು ಗೋವೆಯನ್ನು ಪ್ರವೇಶಿಸತೊಡಗಿದರು. ಮತ್ತೆ ದಬ್ಬಾಳಿಕೆ ನಡೆಯಿತು.

ದಬ್ಬಾಳಿಕೆಗೊಳಗಾಗದ ಗೋವೆಯ ತಮ್ಮ ಬಂಧುಗಳ ಸಹಾಯಕ್ಕೆ ಭಾರತದ ಜನ ಬಂದದ್ದು ೧೯೫೫ ರಲ್ಲಿ. ಅವರು ನಿಶ್ಶಸ್ತ್ರರಾಗಿ ಬಂದರೂ ಪೋರ್ತುಗೀಸ್ ಸೈನಿಕರು ಅವರನ್ನು ಎದುರಿಸಿದರು. ಬಂದವರಲ್ಲಿ ೨೨ ಜನ ಸತ್ತರು. ಅನೇಕರು ಗಾಯಗೊಂಡರು. ಅನೇಕರು ಸೆರೆಮನೆ ಕಂಡರು.

ಗೋವೆಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ಇಷ್ಟೆಲ್ಲ ಇತಿಹಾಸವಿರುವಾಗ ಗೋವಾ ಸಮಸ್ಯೆ ಭಾರತ ಸರಕಾರ ಹುಟ್ಟಿಸಿಕೊಂಡ ಸಮಸ್ಯೆ ಎಂದು ಪೋರ್ತುಗಾಲ್ ಹೇಳುವುದರಲ್ಲಿ ಏನು ತಥ್ಯವಿದೆ?

*



ಲಗ್ನವಾದ ಮೇಲೆ ಪಶ್ಚಾತ್ತಾಪಪಡಬೇಕಾಗುತ್ತದೆ. ಆದರೆ ಲಗ್ನವಾಗದಿದ್ದರೂ ಪಶ್ಚಾತ್ತಾಪವನ್ನೇ ಪಡಬೇಕಾಗುತ್ತದೆ.

—ಝುಕ್ ಗಾಡೆ

# ಇದುವೆ ಜೀವ, ಇದು ಜೀವನ

ನಾನು ಮುಂಬಯಿಗೆ ಹೊರಟಿದ್ದೆ. ಹರಿಹರದಲ್ಲಿ ರೈಲು ಏರಿದಾಗ ಒಂದು ಕಡೆಯಲ್ಲಿ ಒಬ್ಬ ಮುದುಕ, ಒಬ್ಬಳು ಯುವತಿ ಮತ್ತು ಒಬ್ಬ ಯುವಕ ಹೀಗೆ ಸಾಲಿಗೆ ಕುಳಿತಿದ್ದರು. ಆ ಯುವಕನ ಪಕ್ಕದಲ್ಲಿ ಒಬ್ಬರು ಕುಳಿತುಕೊಳ್ಳುವಷ್ಟು ಜಾಗವಿತ್ತು. ನಾನು ಅಲ್ಲಿ ಹೋಗಿ ಕುಳಿತೆ. ಒಂದೆರಡು ನಿಲ್ದಾಣಗಳು ದಾಟಿದ ಮೇಲೆ ನಾನು ನನ್ನ ಪ್ಯಾಕಿನಿಂದ ಸಿಗರೇಟು ತೆಗೆದು ಹೊತ್ತಿಸಿದೆ. ನನ್ನ ಪಕ್ಕದಲ್ಲಿ ಕುಳಿತ ಯುವಕ ನನ್ನಕಡೆಗೆ ನೋಡಿ "ಸರ್, ಸಿಗರೇಟ್ ಪ್ಲೀಸ್" ಎಂದ. ನೋಡುವುದಕ್ಕೆ ಆತ ಸುಶಿಕ್ಷಿತನಂತಿದ್ದ. ಆತ ಕೇಳಿದ ಮೇಲೆ ಕೊಡದಿರುವುದು ಸಂಪ್ರದಾಯವಿರೋಧವೆಂದೆಣಿಸಿದ ನಾನು (ಅವರ ಸ್ನೇಹ ಮಾಡಿಕೊಳ್ಳುವುದಕ್ಕೂ ಒಂದು ಸಂದರ್ಭವೆಂದು ಯೋಚಿಸಿ) ನನ್ನ ಪ್ಯಾಕನ್ನು ಅವನ ಕಡೆಗೆ ಬಿಡಿಸಿ ಹಿಡಿದೆ. ಆ ಯುವಕ ನನ್ನ ಪ್ಯಾಕಿನಲ್ಲಿದ್ದ ನಾಲ್ಕೈದು ಸಿಗರೇಟುಗಳನ್ನು ಎಳೆದುಕೊಂಡು ಬಿಟ್ಟ. ಸುಶಿಕ್ಷಿತನಂತಿದ್ದ ಆತ ಹಾಗೆ ಮಾಡಿದುದನ್ನು ಕಂಡು ನಾನು ದಂಗಾದೆ. ನನಗೆ ಮಾತೇ ಬರಲಿಲ್ಲ.

ಅದು ವರೆಗೂ ಬೇರೆ ಕಡೆಯೇ ನೋಡುತ್ತಿದ್ದ ಆ ಯುವತಿ (ಬಹುಶಃ ಆ ಯುವಕನ ಹೆಂಡತಿಯಾಗಿರಬೇಕು) ಆತ ಸಿಗರೇಟು ತೆಗೆದುಕೊಂಡದ್ದನ್ನು ಕಂಡು ಆ ಯುವಕನ ಕೈಯಿಂದ ಸಿಗರೇಟುಗಳಷ್ಟನ್ನೂ ಕಸಿದುಕೊಂಡಳು. ಅವಳು ತೆಗೆದುಕೊಂಡುದನ್ನು ನೋಡಿದ ನಾನು ಆಕೆ ನನ್ನ ಸಿಗರೇಟುಗಳನ್ನು ವಾಪಸು ನನಗೇ ಕೊಡುತ್ತಾಳೆಂದು ಎಣಿಸಿದ್ದೆ. ಆದರೆ ಆಕೆ ಹಾಗೆ ಮಾಡದೆ, ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಾ— "ರೀ, ನೀವು ಮಾತ್ರ ಸೇದಿದರೆ ಸಾಕು. ಅವರಿಗೆ (ಆ ಯುವಕನತ್ತ ಕೈ ತೋರಿಸಿ) ಯಾಕೆ ಆ ಹಾಳು ವ್ಯಸನ ಅಭ್ಯಾಸ ಮಾಡಿಸ್ತಾ ಇದ್ದೀರಿ? ಅವರಿಗೆ ತಲೆ ಸರಿಯಿಲ್ಲ. ಹುಚ್ಚರ ಆಸ್ಪತ್ರೆಗೆ ಸೇರಿಸುವುದಕ್ಕೆ ನಾನು ಪೂನಾಕ್ಕೆ ಕರೆದುಕೊಂಡು ಹೋಗ್ತಾ ಇದ್ದೇನೆ. ನೀವು ಸ್ವಲ್ಪ ಸುಮ್ಮನೆ, ತೆಪ್ಪಗೆ ಕುಳಿತುಕೊಂಡು ಇರಿ" ಎಂದು ಗುಡುಗಿದಳು.

ಇಷ್ಟು ಹೇಳಿದ ಆಕೆ, ತನ್ನ ಕೈಯಲ್ಲಿದ್ದ ಸಿಗರೇಟುಗಳನ್ನು ಪಕ್ಕದಲ್ಲಿ ಕುಳಿತುಕೊಂಡಿದ್ದ ಮುದುಕನ ಕೈಯಲ್ಲಿ ಇಟ್ಟಳು; ಆ ಮುದುಕ ತನ್ನ ಕೋಟಿನ ಕಿಸೆಯಿಂದ ಬೆಂಕಿಪೊಟ್ಟಣ ತೆಗೆದು ಒಂದು ಸಿಗರೇಟು ಹೊತ್ತಿಸಿ ಉಳಿದವನ್ನು ತನ್ನ ಕಿಸೆಯೊಳಗೇ ಹಾಕಿಕೊಂಡು, ಹಾಯಾಗಿ ಸಿಗರೇಟು ಎಳೆಯುತ್ತಾ ಕುಳಿತ.

ನನಗೆ ನಗು ಬಂತು, ನಿಜಕ್ಕೂ ಈ ಮೂವರಲ್ಲಿ ಯಾರಿಗೆ ಹುಚ್ಚು ಎಂದು!

—ಎಚ್. ಶಿವಾನಂದ ಹಂದೆ

"ಡಾಕ್ಟರ್ರೇ, ಡಾಕ್ಟರ್ರೇ, ಬೇಗ ನಮ್ಮ ಮನೆಗೆ ಹೊರಡಬೇಕು. ನನ್ನ ಹೆಂಡತಿ ಮುಗಿಲಿಗೆ ಕೈಚಾಚಿ ನಿಂತುಬಿಟ್ಟಿದ್ದಾಳೆ. ಕೈ ಕೆಳಗೇ ಇಳಿಯಲೊಲ್ಲದು" ಎಂದು ನಮ್ಮ ನೆರೆಮನೆಯಲ್ಲಿದ್ದ ಡಾಕ್ಟರರ ಮನೆಯನ್ನು ಪ್ರವೇಶಿಸುತ್ತಲೇ ನಮ್ಮ ಇನ್ನೊಬ್ಬ ನೆರೆಯವ ಹೇಳಿದ.

ಡಾಕ್ಟರರು ತುಸು ಕಷ್ಟದಿಂದಲೇ ಅವನಿಂದ ವಿವರಗಳನ್ನು ಕಲೆ ಹಾಕಿದರು. ಅದರ ಸಾರಾಂಶ ಇಷ್ಟು: ಕೋಲಿನ ಮೇಲಿನ ಸೀರೆಯನ್ನು ನೆಗೆದು ಎಳೆದುಕೊಳ್ಳಬೇಕೆಂದಾಗ ಅವನ ಹೆಂಡತಿಯ ಮೇಲೆತ್ತಿದ ತೋಳು ಹಾಗೇ ನಿಂತುಬಿಟ್ಟಿತ್ತು.

ಆತನ ಮನೆಗೆ ಬಂದ ಡಾಕ್ಟರರು ಆ ತರು

ಣಿಯ ಅನುಕಂಪನೀಯ ಪರಿಸ್ಥಿತಿಯನ್ನು ಕಂಡು ಒಂದರೆ ನಿಮಿಷ ಕಣ್ಣು ಮುಚ್ಚಿ ವಿಚಾರ ಮಾಡಿ ನಂತರ, "ಹಾಗೇ ಬಂದುಬಿಟ್ಟೆನಲ್ಲ. ಬ್ಯಾಗನ್ನೂ ತರಲಿಲ್ಲ. ಒಂದು ಇಂಜಕ್ಶನ್ ಆದರೂ ಕೊಟ್ಟು ಹೋಗುತ್ತಿದ್ದೆ" ಎಂದು ಮುಗುಳ್ನಗೆಯಿಂದ ನುಡಿದು, "ನಾನು ಈಗ ನಿನ್ನ ಹೆಂಡತಿಯ ಮೇಲೆ ಮಹಾಪ್ರಯೋಗ ನಡೆಸುತ್ತೇನೆ. ನೀನೂ ಇಲ್ಲಿರು. ಆದರೆ ನನ್ನ ಪ್ರಯೋಗ ಮುಗಿಯುವವರೆಗೂ ಆಕ್ಷೇಪಿಸಬಾರದು" ಎಂದು ಹೇಳಿದರು.

"ಆಗಲಿ, ಹೇಗಾದರೂ ಮುಂಚಿನಂತಾದರೆ ಸಾಕು," ಎಂದು ಆತ ಹೂಂಗುಟ್ಟಿದ.

ಡಾಕ್ಟರರು ಆ ತರುಣಿಯನ್ನು ಮುಂದೆ ಕರೆದರು. ಅರ್ಧಗಂಟೆಯ ಹಿಂದೆ ನಡೆದ ಘಟನೆಯನ್ನೆಲ್ಲ ಕೇಳಿಕೊಳ್ಳುತ್ತ ಸರಕ್ಕನೆ ಆಕೆಯ ಸೀರೆಯ ಸೆರಗಿಗೆ ಕೈಹಾಕಿ ಸೆಳೆದರು. ವಸ್ತ್ರಾಪಹರಣದ ಭೀತಿಗೊಳಗಾದ ಆಕೆ ಹಠಾತ್ತಾಗಿ ಸೀರೆಯನ್ನು ಹಿಡಿದುಕೊಳ್ಳಲು ಎರಡೂ ಕೈಗಳನ್ನು ಸೊಂಟಕ್ಕೆ ತಂದಳು. ಹಿಡಿದ ಚಳಕು ಬಿಟ್ಟುಹೋಗಿತ್ತು.

ದ. ಲ. ಕೆರೂರ

ನಮ್ಮಜ್ಜನಿಗೆ ತುಸು ಸಂಶಯ ಪ್ರಕೃತಿ. ಅವರಿಗೊಂದು ಸಲ ಆಕಳ ತುಪ್ಪ ತಂಪು, ಎಮ್ಮೆ ತುಪ್ಪ ಕಾವು ಎಂದು ಹೇಗೋ ತಲೆಯಲ್ಲಿ ಹೊಕ್ಕಿಕೊಂಡಿತು. ಅವರು ದೊಡ್ಡ ಆಚಾರ್ಯರು. ಭೋಜನಕ್ಕೆ ಆಮಂತ್ರಣವಿಲ್ಲದ ದಿನವೇ ಇಲ್ಲವೆಂದರೂ ಸರಿಯೆ.

ಒಂದು ದಿನ ಅವರು ಇಂಥ ಒಂದು ಭೋಜನದಿಂದ ಮರಳಿ ಬಂದವರು ಕನ್ನಡಿಯಂತೆ ಹೊಳೆಯುವ ಹಾಗೆ ಹಸನಾಗಿಸಿದ್ದ ನಮ್ಮ ಪಡಸಾಲೆಯಲ್ಲಿ ಹೊರಳಾಡುತ್ತ, ಹೊಟ್ಟೆಯ ಮೇಲೆ ಕೈಯಾಡಿಸಿ, "ಮಗಾ, ಆಕಳ ತುಪ್ಪವಂತೆ, ನಾಲ್ಕಾರು ಚಮಚ ಹಾಕಿಬಿಟ್ಟರು. ತಿಂದುಬಿಟ್ಟೆ. ತಂಪಾಯಿತು ನೋಡು" ಎಂದರು.

ಅವರ ಮಗ, ನಮ್ಮ ಮಾವ, ಅವರೂ ಆಚಾರ್ಯಗಿರಿ ಮುಟ್ಟಿದವರೆ. ಲೋಕವ್ಯವಹಾರ ಬಲ್ಲವರಾಗಿ ಹೇಳಿದರು: "ಎಲ್ಲಿ ಅಪ್ಪಾ, ಈಗೆಲ್ಲಿ ಅಷ್ಟು ಆಕಳ ತುಪ್ಪ ಸಿಕ್ಕುತ್ತೆ? ಆಕಳ ತುಪ್ಪ ಅಂತ ಹೇಳಿ ಎಮ್ಮೆ ತುಪ್ಪವೇ ಹಾಕಿಬಿಡುತ್ತಾರೆ."

ನಮ್ಮಜ್ಜ ತಟ್ಟನೆ ಎದ್ದು ಕುಳಿತರು. ಪಕ್ಕೆಗಳನ್ನು ತಿಕ್ಕಿಕೊಳ್ಳುತ್ತ, "ಹೌದಾ ಮಗಾ? ಅದಕ್ಕೇ ಅಂತ ಕಾಣುತ್ತೆ ಪಕ್ಕೆಯಲ್ಲಿ ಏನೋ ಕುಕ್ಕುತ್ತಾ ಇದೆ. ಶೀರ ಕಾವಾಗಿ ಹೋಯಿತು. ಶ್ರೀರಾಮಾ, ಒಂದಿಷ್ಟು ಜೀರಿಗೆ ಕಷಾಯಮಾಡಿ ಎರಡು ಚಮಚ ಆಕಳ ತುಪ್ಪ ಹಾಕಿ ಕೊಡಲಿಕ್ಕೆ ಹೇಳಪ್ಪಾ ನಿನ್ನಮ್ಮನಿಗೆ" ಎಂದರು.

—ವೆಂಕಟಾಚಾರ್ಯ

ಸಿಟಿ ಬಸ್ಸು, ವಾಣಿವಿಲಾಸ ಮೊಹಲ್ಲಾದಲ್ಲಿ, ಐಯಂಗಾರ್ ಹೋಟೆಲ್ ಬಳಿ ಇರುವ ಬಸ್ ಸ್ಟಾಪಿನ ಹತ್ತಿರ ಬಂದು ನಿಂತುಕೊಳ್ಳುವ ಸಮಯಕ್ಕೆ ನಾನಲ್ಲಿಯೇ ತಿರುಗಾಡುತ್ತಿದ್ದೆ. ಹತ್ತಬೇಕಾದವರೆಲ್ಲರೂ ಹತ್ತಿದ ನಂತರ ಕಂಡಕ್ಟರ್ 'ರೈಟ್' ಎಂದ. ಅಷ್ಟರಲ್ಲಿ ಸುಮಾರು ಐವತ್ತು ಗಜ ದೂರದಲ್ಲಿ ಹೆಂಗಸೊಬ್ಬಳು ಏದುತ್ತಾ ಬೇಗ ಬೇಗ ಬರುತ್ತಿದ್ದುದು ನನ್ನ ಕಣ್ಣಿಗೆ ಬಿತ್ತು. ಏ. ಸಿ. ಸಿ. ವಿದ್ಯಾರ್ಥಿಯಾಗಿದ್ದ ನಾನು, ಕೊನೇ ಪಕ್ಷ ಈ ಒಂದು ಉಪಕಾರವನ್ನಾದರೂ ಮಾಡೋಣ ಎಂದುಕೊಂಡು "ಹೋಲ್ಡಾನ್! ಪ್ಯಾಸೆಂಜರ್ ಬರ್ತಿದಾರೆ" ಎಂದು ಕೂಗಿದೆ. ಹೊರಟಿದ್ದ ಬಸ್ಸು ಹಾಗೆಯೇ ನಿಂತಿತು. ಮೋಟಾರು ಧ್ವನಿಸುತ್ತಲೇ ಇತ್ತು. ಆಕೆ ತನ್ನ ಸ್ಥೂಲ ಕಾಯದೊಂದಿಗೆ ಬಸ್ಸಿನ ಬಳಿಗೆ ಬರಲು ಸುಮಾರು ಐದು ನಿಮಿಷವಾಯಿತು. ನಾನು ಅಲ್ಲಿಂದ ಹೊರಟೆ. ಸ್ವಲ್ಪ ಮುಂದೆ ಹೋಗಿ ಹಿಂತಿರುಗಿ ನೋಡಿದೆ. ಕಂಡಕ್ಟರ ದುರುಗುಟ್ಟಿಕೊಂಡು ನನ್ನನ್ನೇ ನೋಡುತ್ತಿದ್ದ. ಅವನ ಬಾಯಿಂದ ಅಪಶಬ್ದಗಳ ಪ್ರವಾಹ ಭೋರ್ಗರೆಯುತ್ತ ಹೊರಟಿತ್ತು. ಆಗ ಅರ್ಥವಾಯಿತು, ಆಕೆ ಬಸ್ಸಿನ ವರೆಗೂ ಬಂದು, ಅಲ್ಲಿಯೇ ಇದ್ದ ಟಾಂಗಾ ಒಂದರಲ್ಲಿ ಕುಳಿತು ಹೊರಟಿದ್ದಳು.

—ಎನ್. ರಮೇಶ್, ಮೈಸೂರು



ಜ್ಯೋತಿಷ ಸುಳ್ಳೆಂದು ತಿರಸ್ಕರಿಸುವ
ಮೊದಲು ಇದನ್ನೋದಿರಿ



ಕನ್ಹಯ್ಯಾಲಾಲ ಮುನಶಿ

# ಅದ್ಭುತ ಭೃಗು ಸಂಹಿತೆಗಳು!

ನನಗೆ ಜ್ಯೋತಿಷ ಗೊತ್ತಿಲ್ಲ. ಯಾವ ಕೆಲಸ ಮಾಡುವುದಕ್ಕೂ ನಾನು ಗ್ರಹಗತಿಯನ್ನು ನೋಡಿ ಪ್ರವೃತ್ತನಾಗುವುದಿಲ್ಲ. ಜ್ಯೋತಿಷಿಗಳನ್ನು ಕೇಳಿ ಕಾರ್ಯ ಮಾಡುವುದು ದುರ್ದೈವಿ ಪದ್ಧತಿಯೆಂದು ನನ್ನೆಣಿಕೆ. ಏಕೆಂದರೆ ಮೇಲಿಂದ ಮೇಲೆ ನಿಮಿತ್ತ ಕೇಳುವುದರಿಂದ ಮನುಷ್ಯನ ಜೀವನ ದೃಷ್ಟಿ ವಿಕೃತವಾಗಿ ಅವನ ಕ್ರತುಶಕ್ತಿ ಕುಂಠಿತವಾಗುತ್ತದೆ.

ಆದರೂ ಜ್ಯೋತಿಷ ನನ್ನನ್ನು ಮುಗ್ಧಗೊಳಿಸದೆ ಬಿಟ್ಟಿಲ್ಲ. ಮಿತ್ರರೂ ಜ್ಯೋತಿಷಿಗಳೂ ಜನನ ಕಾಲದ ಗ್ರಹಸ್ಥಿತಿಯನ್ನು ಅಭ್ಯಸಿಸುವುದನ್ನು ಮೊದಲಿಂದಲೂ ನಾನು ಆಸಕ್ತಿಯಿಂದ ನೋಡುತ್ತ ಬಂದಿದ್ದೇನೆ. ಈ ವಿದ್ಯೆಯ ಬಗ್ಗೆ ನನಗೆ ತಿರಸ್ಕಾರವಿಲ್ಲ.

ಜ್ಯೋತಿಷವನ್ನು ಯೋಚನೆಯಿಲ್ಲದೆ ಖಂಡಿಸಿದರೆ ನಾವು ಜ್ಞಾನದೃಷ್ಟಿಯುಳ್ಳ ಒಂದು ವಿಜ್ಞಾನದ ಪ್ರಯೋಜನಗಳಿಗೆರವಾಗುತ್ತೇವೆ. ಅದನ್ನು ಸಹನೆ ಪ್ರಾಮಾಣಿಕತೆ ಜಾಣ್ಮೆಗಳಿಂದ ಆ-ಮೂಲಾಗ್ರವಾಗಿ ಅಭ್ಯಸಿಸಿದರೆ ಜೀವನದಿಂದ ಮರಣವನ್ನೂ ವರ್ತಮಾನದಿಂದ ಭವಿಷ್ಯತ್ತನ್ನೂ ಬೇರ್ಪಡಿಸುವ ಗೋಡೆಯನ್ನು ಭೇದಿಸಲು ನಮಗೆ ಸಾಧ್ಯವಾಗಬಹುದು.

ಆದರೆ ನಾನೀಗ ಜ್ಯೋತಿಷ ವೃತ್ತಿಯನ್ನು ಚರ್ಚಿಸದೆ (ಕೆಲ ಸಮರ್ಥ ಜ್ಯೋತಿಷಿಗಳನ್ನು ನಾನು ಕಂಡಿದ್ದರೂ) "ಸಂಹಿತೆ"ಗಳನ್ನು ಕುರಿತು ಹೇಳುತ್ತೇನೆ.

ಸಂಹಿತೆಗಳೆಂದರೆ ಅಸಂಖ್ಯ ಜನ್ಮ ಕುಂಡಲಿಗಳ ಫಲಗಳನ್ನೊಳಗೊಂಡ ಭಾರಿ ಭವಿಷ್ಯ ಕೋಶಗಳು. ಉತ್ತರದಲ್ಲಿ ಅವುಗಳನ್ನು ಭೃಗು ಸಂಹಿತೆಗಳೆನ್ನುತ್ತಾರೆ. ಭೃಗುಋಷಿ ಈ ವಿದ್ಯೆಯ ಮೂಲಪುರುಷನಂತೆ. ಅನೇಕ ಭೃಗು ಸಂಹಿತೆಗಳಿದ್ದು ಅವುಗಳ ವ್ಯಾಪ್ತಿ, ಶೈಲಿ ಮತ್ತು ಯೋಗ್ಯತೆ ಒಂದೇ ತೆರನಾಗಿಲ್ಲ ಕೆಲವೇ ರೂಪಾಯಿಗಳಿಗೆ ಸಿಗುವ ಮುದ್ರಿತ ಭೃಗು ಸಂಹಿತೆಗಳುಂಟು; ಹಾಗೆಯೆ ಸಾವಿರಾರು ಜಾತಕಗಳ ಫಲ ಹೇಳುವ ಸಂಹಿತೆಗಳೂ ಉಂಟು. ದಕ್ಷಿಣದಲ್ಲಿ ಹೆಚ್ಚಾಗಿ ತಮಿಳು ಗ್ರಂಥ ಲಿಪಿಯಲ್ಲಿ ಬರೆದ ಅನೇಕ ಸಂಸ್ಕೃತ (ಮತ್ತು ಕೆಲ ತಮಿಳು) "ನಾಡಿ" ಸಂಹಿತೆಗಳು ವಿವಿಧ ಋಷಿ ದೇವತೆಗಳ ಹೆಸರಲ್ಲಿ ಪ್ರಚಲಿತವಾಗಿವೆ.

ಈ ವರೆಗೆ ನನಗೆ ಇಂಥ ೧೧ ಸಂಹಿತೆಗಳ ಪರಿಚಯವಾಗಿದೆ. ಅವುಗಳಲ್ಲಿ ಒಂದು ಹೊರತು

ಉಳಿದೆಲ್ಲ ಸಂಸ್ಕೃತದಲ್ಲಿವೆ. ಲಿಪಿ ಮಾತ್ರ ಮೂರರದು ತಮಿಳು ಗ್ರಂಥ ಲಿಪಿ, ಒಂದು ಟಿಬೇಟಿ ಲಿಪಿ, ಉಳಿದದ್ದೆಲ್ಲ ದೇವನಾಗರಿ.

ಪ್ರತಿಯೊಂದು ಸಂಹಿತೆಯನ್ನೂ ನಾನು ಕೆಲ ಪರೀಕ್ಷೆಗಳಿಗೊಳಪಡಿಸಿದೆ. ಮೊದಲನೆಯದಾಗಿ, ಅವುಗಳ ಕಾಲವನ್ನು ನಾನು ಪರಿಶೀಲಿಸಿದೆ. ಹಳೇ ಗ್ರಂಥದಿಂದ ಪ್ರತಿ ಮಾಡಿದ ಒಂದು ಸಂಹಿತೆಯನ್ನು ಹೊರತು ಉಳಿದೆಲ್ಲವೂ ಕನಿಷ್ಠ ಒಂದು ಶತಮಾನ ಹಳೆಯವೆಂದು ಖಚಿತವಾಯಿತು.

ಪ್ರತಿಯೊಂದರಲ್ಲೂ ನನ್ನ ಅಥವಾ ನನ್ನ ಮಿತ್ರರ ಜೀವನದ ಬಗ್ಗೆ ಹೇಳಲಾದ ಪ್ರತಿ ಗತ ಘಟನೆಯ ಸತ್ಯತ್ವವನ್ನು ತಾಳೆ ನೋಡಿದೆ. ಪುನಃ ಪುನಃ ಓದಿಸಿ ಕೇಳಿ ತಪ್ಪುತಡೆಗಳನ್ನು ಗುರುತು ಹಾಕಿಕೊಂಡೆ. ನನ್ನ ಜೀವನದ ಮುಖ್ಯ ಘಟನೆಗಳು ಪ್ರಸಿದ್ಧವಾಗಿರುವುದರಿಂದ ಧೂರ್ತ ಜ್ಯೋತಿಷಿಗಳು ಅದರ ಪ್ರಯೋಜನ ಹೊಂದುವರೆಂದುಕೊಂಡು ಕ್ಷುದ್ರ ಘಟನೆಗಳ ಸತ್ಯತ್ವವನ್ನೇ ಒರೆಗೆ ಹಚ್ಚಿದೆ. ಗಮನಾರ್ಹ ಫಲಗಳ ವಿಷಯದಲ್ಲಿ, ಪುಸ್ತಕವು ನಾಗರಿ ಲಿಪಿಯಲ್ಲಿದ್ದರೆ, ಸ್ವತಃ ನಾನೇ ಅದನ್ನು ಓದಿದೆ; ತಿಳಿಯದ ಲಿಪಿಯಾಗಿದ್ದರೆ ಬಲ್ಲವರಿಂದ ಓದಿಸಿ ಖಾತ್ರಿ ಮಾಡಿಕೊಂಡೆ.

ಈ ಎಲ್ಲ ಪರೀಕ್ಷೆಗಳಲ್ಲಿ "ಮರತಸ" ಮತ್ತು "ವರಣಸ" ಎಂಬ ಸಂಹಿತೆಗಳು ಸಂಪೂರ್ಣ ತೇರ್ಗಡೆಯಾದವು.

ಎಲ್ಲ ಭೃಗು ಸಂಹಿತೆಗಳೂ ಭೃಗು ಋಷಿಗೂ ಅವನ ಮಗ ಶುಕ್ರಾಚಾರ್ಯನಿಗೂ ನಡೆದ ಸಂವಾದದ ರೂಪದಲ್ಲಿವೆ. ನಾನು ಸಂಹಿತೆಗಳಲ್ಲಿ ಮಾಡಿದ ನಾಲ್ಕು ಗುಂಪುಗಳ ಪೈಕಿ ನಾಲ್ಕನೇ ಗುಂಪಿನ ಪುಸ್ತಕಗಳಲ್ಲಿ ಮಗನು ಕುತೂಹಲದಿಂದ ಈ ಮನುಷ್ಯ ಹೀಗೇ ಏಕೆ ವರ್ತಿಸುತ್ತಾನೆ, ಬೇರೆಯಾಗಿ ಏಕಿಲ್ಲ ಎಂದು ನಡುನಡುವೆ ಪ್ರಶ್ನೆಗಳನ್ನು ಕೂಡ ಕೇಳಿ ಸಮಾಧಾನಪಡೆಯುತ್ತಾನೆ.

ಮೊದಲನೇ ಗುಂಪನ್ನು ಬಿಟ್ಟು ಉಳಿದೆಲ್ಲವುಗಳಲ್ಲಿ ಜನ್ಮ ದಿನದ ಉಲ್ಲೇಖವಿದೆ. ಭೃಗು ಸಂಹಿತೆಗಳಲ್ಲಿ ತಂದೆ-ತಾಯಿಗಳು (ಪ್ರಶ್ನ ಕಾಲದಲ್ಲಿ) ಬದುಕಿರುವರೋ, ಅಣ್ಣ ತಮ್ಮ ಅಕ್ಕ ತಂಗಿ, ಹೆಣ್ಣು-ಗಂಡು ಮಕ್ಕಳೆಷ್ಟು ಎಂದೂ ಹೇಳುತ್ತವೆ. ಪ್ರಶ್ನಕರ್ತನ ಜಾತಿ ಧರ್ಮಗಳನ್ನೂ ಕೊಟ್ಟಿದೆ. ನಾಲ್ಕನೆಯ ಗುಂಪಿನ ಸಂಹಿತೆಗಳಲ್ಲಿ ಜಾತಿಯನ್ನೂ ಮುಸ್ಲಿಮನಾದರೆ "ಮ್ಲೇಂಛ," ಇಂಗ್ಲೀಷನಾದರೆ "ಯವನ" (ದಕ್ಷಿಣದ ಸತ್ಯ ಸಂಹಿತೆಯಲ್ಲಿ "ಹೂಣ", "ಕ್ರಿಸ್ತಿ" ಎಂಬ ಪದಗಳಿವೆ) ಎಂದೂ ಹೇಳಿದೆ.

ಸ್ವತಃ ನನ್ನ ವಿಚಾರವನ್ನೇ ನೋಡಿರಿ. ಕೊನೆಯ ಮೂರು ಗುಂಪುಗಳಲ್ಲಿ, ನಾನು ಒಂದು ನದಿಯ ತೀರದಲ್ಲಿ ಹುಟ್ಟಿದೆ, ಸಮುದ್ರ ತೀರದಲ್ಲಿ ಬೆಳೆದೆ ಎಂದು ಬರೆದಿದೆ. ಕೊನೆಯ ಗುಂಪಿನವುಗಳಲ್ಲಿ ನನ್ನ ಜನ್ಮಸ್ಥಾನ ಭಡೋಚವೆಂದೂ ನಾನು ಮ—ನಗರದಲ್ಲಿ (ಮುಂಬಯಿ) ಯಲ್ಲಿ ವಾಸಿಸಿದ್ದೇನೆಂದೂ ಹೇಳಲಾಗಿದೆ.

ಎಲ್ಲ ಭೃಗು ಸಂಹಿತೆಗಳಲ್ಲೂ ತಮಿಳಿನ ಅಗಸ್ತ್ಯ ಸಂಹಿತೆಯಲ್ಲೂ ವರ್ತಮಾನ ಕಾಲದ ವಿಷಯ ಬಲು ಸರಿಯಾಗಿ ಹೇಳಲ್ಪಟ್ಟಿದೆ. ಕೆಲ ವೇಳೆ ಇಂಥಲ್ಲಿ, ಇಂಥ ವರ್ಷ, ಇಂಥ ತಿಂಗಳು, ಇಂಥ ದಿನವೇ ನಾನೀ ಫಲವನ್ನು ಓದಿಸಿ ಕೇಳುತ್ತೇನೆಂದು ಕೂಡ ಬರೆದಿಟ್ಟಿದೆ.

ವರ್ತಮಾನ ವಿಷಯದಲ್ಲಿ "ಮರತಸ" ಸಂಹಿತೆ ಅದ್ಭುತವಾಗಿದೆ. ಮೊದಲು ಸ್ಥೂಲವಾಗಿ ಭೂತ ವರ್ತಮಾನ ಭವಿಷ್ಯತ್ತುಗಳನ್ನು ವಿವರಿಸಿ ಹೆಚ್ಚಿನ ವಿವರಗಳಿಗೆ ಬೇರೆ ಅಧ್ಯಾಯಗಳನ್ನು ನಿರ್ದೇಶಿಸಲಾಗಿದೆ. ನೈನಿತಾಲದಲ್ಲಿ ನಾನೊಮ್ಮೆ ಸಂಹಿತೆಯನ್ನೋದಿಸಿದಾಗ ಪರ್ವತ ವೃಕ್ಷಗಳ ಮತ್ತು ನೈನಿದೇವಿಯ ದೇವಾಲಯದ ವರ್ಣನೆ ಬಂದದ್ದು ನೋಡಿ ನಾನು ಬೆರಗಾದೆ. ಕೆಲ ಅಧ್ಯಾಯಗಳಲ್ಲಿ ವಾಚನ ಸ್ಥಳದಲ್ಲಿ ಅದೇ

ನಡೆದ ಅಥವಾ ನಡೆಯುತ್ತಿರುವ ಘಟನೆಗಳನ್ನು ಹೇಳಿ ಇನ್ನು ನಡೆಯಲಿರುವುದನ್ನೂ ನಿಮ್ಮ ಮನಸಿನ ವಿಚಾರಗಳನ್ನೂ ಹೊರಗೆಡಹಲಾಗಿದೆ.

ಒಂದು ಸಲ ನಾನು ಸಂಹಿತೆಯನ್ನೋದಿಸುತ್ತಿದ್ದಾಗ ೧೦ ನೇ ಅಧ್ಯಾಯದ ಪ್ರಸ್ತಾಪ ಬಂತು. ಅಷ್ಟರಲ್ಲಿ ನನ್ನ ಕಾರ್ಯದರ್ಶಿ ಬಂದು ಕಾಶ್ಮೀರ ಮಹಾರಾಜರಿಗೆ ಪತ್ರ ಬರೆಯಬೇಕೆಂದಿದ್ದುದನ್ನು ನೆನಪು ಮಾಡಿಕೊಟ್ಟು ಹೋದ. ಓದು ಮುಂದುವರಿಯಿತು :

"ಇದನ್ನೋದುತ್ತಿರುವಾಗ ಜಾತಕನ ಕಾರ್ಯದರ್ಶಿ ಬಂದು ಕುಂಕುಮದೇಶದ ದೊಡ್ಡ ಅಧಿಕಾರಿಯೊಬ್ಬನಿಗೆ ಪತ್ರ ಬರೆಯುವ ಪ್ರಸ್ತಾಪವೆತ್ತಿದರೆ ಮಾತ್ರ ೧೦ ನೇ ಅಧ್ಯಾಯವನ್ನೋದು. ಕಾರ್ಯದರ್ಶಿ ಪಂಜಾಬಿ, ಶಿಕ್ಷಣ ಬರ್ಮಾದಲ್ಲಿ; ಈಗ ಆರ್ಯಾವರ್ತದಲ್ಲಿ ನೌಕರಿ ಮಾಡುತ್ತಾನೆ. ಅವನ ಹೆಂಡತಿಯೂ ತಂದೆಯೂ ಡಾಕ್ಟರರು...." ನಾನು ಪುಸ್ತಕವನ್ನು ಇಸಿದುಕೊಂಡು ಸ್ವತಃ ನೋಡಿದೆ. ಓದಿದ್ದೆಲ್ಲ ಅಲ್ಲಿತ್ತು.

ಇನ್ನೊಮ್ಮೆ ನನ್ನ ಹೆಂಡತಿಯ ಫಲ ಓದಿಸಿದಾಗ ಅವಳಿರುವ ರಾಜ್ಯದ ವಿಷಯ ಬಂತು. "ನಿನ್ನ ಗಂಡನ ರಾಜ್ಯದಲ್ಲಿ ಬ್ರಾಹ್ಮಣ ಮಂತ್ರಿ ಹೋಗಿ ಕಾಯಸ್ಥ ಮಂತ್ರಿ ಬರುತ್ತಾನೆ, ಅವನಿಗೆ ವೈಶ್ಯ ಮಂತ್ರಿ ಸಹಕಾರಿಯಾಗುತ್ತಾನೆ. ಇದು ಇವಳ ೫೬ ನೇ ವಯಸ್ಸಿನ ೨ನೇ ತಿಂಗಳ ೨೫ ನೇ ದಿನದೊಳಗೆ ಘಟಿಸುತ್ತದೆ" ಎಂಬ ಭವಿಷ್ಯ ಬಂತು. ಅದೇ ಸುಮಾರಿಗೆ ಮುಖ್ಯ ಮಂತ್ರಿ ಪಂಡಿತ ಪಂತರು ದಿಲ್ಲಿಗೆ ಹೋಗಬೇಕಾದುದರಿಂದ ಕಾಯಸ್ಥರಾದ ಸಂಪೂರ್ಣಾನಂದರು ಮುಖ್ಯಮಂತ್ರಿಯಾಗಿಯೂ ವೈಶ್ಯರಾದ ಚಂದ್ರಭಾನು ಗುಪ್ತರು ಉಪ ಮುಖ್ಯ ಮಂತ್ರಿಯಾಗಿಯೂ ನನ್ನ ಹೆಂಡತಿಯ ೫೬ ನೇ ವಯಸ್ಸಿನ ೨ನೇ ತಿಂಗಳ ೨೨ ನೇ ದಿನ ನನ್ನೆದುರು ಪ್ರತಿಜ್ಞೆ ಸ್ವೀಕರಿಸಿದರು.

ಕೆಲ ಸಂಹಿತೆಗಳಲ್ಲಿ ಪ್ರಶ್ನೆ ಕೇಳುವವನ ಜನನ ದಿನ, ಕಾಲ ಕೂಡ ಕೊಡಲ್ಪಡುತ್ತದೆ. ಅವನು ಪ್ರಶ್ನೆ ಕೇಳಲು ಬರುವಾಗಿನ ವಯಸ್ಸು, ದಿನ, ತಿಂಗಳು, ಅವನ ಜಾತಿ, ಬಣ್ಣ, ಎತ್ತರಗಳನ್ನು ವರ್ಣಿಸಿ ಅವನ ಜೀವನದ ಕೆಲ ವಿಚಿತ್ರ ಘಟನೆಗಳನ್ನೂ ವಿವರಿಸಲಾಗುತ್ತದೆ. ನನ್ನ ವಿಚಾರದಲ್ಲೇ ಒಂದು ಸಂಹಿತೆಯಲ್ಲಿ ಬಂದ ಸಂಗತಿಗಳನ್ನು ನೋಡಿ :

ಶುಕ್ರಾಚಾರ್ಯ ಕೇಳುತ್ತಾನೆ :

"ಋಷಿಗಳೇ, ನಿಮ್ಮ ಭೃಗುವಂಶದಲ್ಲಿ ಹುಟ್ಟುವ (ನಾನು ಭಾರ್ಗವ ಗೋತ್ರದ ಬ್ರಾಹ್ಮಣ) ಈತ ವೈಶ್ಯ ರಮಣಿಯನ್ನೇಕೆ ಮದುವೆಯಾಗುತ್ತಾನೆ?"

ಭೃಗುವಿನ ಉತ್ತರ :

"ಮಗೂ, ಈತ ೨೬ ನೇ ವಯಸ್ಸಿನಲ್ಲಿ ಒಂದು ಕಾದಂಬರಿ (ರಂಗಮಾಯಿ ಕಥಾ) ಬರೆಯುವನು. ಅದರ ನಾಯಿಕೆ ವೈಶ್ಯ ಜಾತಿಯವಳಿರುತ್ತಾಳೆ. ಆದ್ದರಿಂದ ೩೯ ನೇ ವಯಸ್ಸಿಗೆ (೨೬ + ೧೩) ಅವನೊಬ್ಬ ವೈಶ್ಯಳನ್ನು ಮದುವೆಯಾಗುತ್ತಾನೆ."

ಕಾರಣ ವಿಚಿತ್ರವೇ ಸೈ, ಆದರೆ ಅದು ನಡೆದದ್ದು ಅಕ್ಷರಶಃ ನಿಜ.

"ವರಣಸ" ಸಂಹಿತೆಯಂತೂ ಅದ್ಭುತದಲ್ಲಿ ಅದ್ಭುತವಾಗಿದೆ. ಅದು ಜಾತಕನ, ಅವನ ಹೆಂಡತಿ ಮಕ್ಕಳ, ತಂದೆತಾಯಿಗಳ, ಕೆಲವೇಳೆ ಹೆಂಡತಿಯ ಸಂಬಂಧಿಕರ, ಅವನ ಮಾವ ಅತ್ತೆಯರ, ಅವಳ ಅಕ್ಕತಂಗಿಯರ ಮತ್ತು ಅವರ ಮಕ್ಕಳ, ಮತ್ತು ಅವನ (ಮಹಿಳೆಯರ ಸಹಿತ) ಮಿತ್ರರ ಹೆಸರುಗಳನ್ನೂ ಕೊಡುತ್ತದೆ.

ನನ್ನ ಆತ್ಮಚರಿತ್ರವನ್ನೆಲ್ಲ ಹುಡುಕಿದರೂ ನಿಮಗೆ ಈ ಕೆಳಗಿನ ವಿವರಗಳು ಸಿಗಲಾರವು :

"ಈ ಶಿಶು ಸ್ವತಂತ್ರದಲ್ಲಿದ್ದಾನೆ ನರು ಅವನ ಮಿತ್ರ–ಅವನು ಮೊಂಗಿಣಿಯಲ್ಲಿ ಸುರಾಪಾನ ಮಾಡಿದ್ದಾನೆ. ಅವನ ಪ್ರೀತಿಯ ಹೆಸರು ಕನು. ತಾರಾ, ಧಾನು, ಜಾದವ ಇವರು ಅಕ್ಕತಂಗಿಯರು. ತಂದೆ ಮಣೇಕ, ತಾಯಿ ತಾಪಿ; ತುಲಜಾ

ಅವನ ತಂದೆಯ ಅಕ್ಕ (ನಾನು ಹುಟ್ಟುವ ಮೊದಲೇ ಸತ್ತಿದ್ದರವರು.) ಮಾಖನ ದಾಸ ಇದ್ದರು. ಅವರ ಮಕ್ಕಳೇ ಮೂಲಚಂದ, ಚಿಮಣ ಮತ್ತು ಬಾಲು ಚಿಮಣನಿಗೆ ಮೂವರು ಹೆಂಡಂದಿರು. ಅವನ ಮಗಳು ತಾಪಿ. ಅವಳ ತಾಯಿಯ ಹೆಸರು ಕೇಸರ್. ಅವಳು ರೂಪಾನ ಮಗಳು." ಹೀಗೇ ೨೫೦ ವರ್ಷಗಳ ಹಿಂದಿನ ವರೆಗೂ ಹೋಗಿತ್ತು ಪೂರ್ವ ೩-ರ ನಾಮಮಾಲೆ. ನನಗೆ ಗೊತ್ತಿದ್ದ ಪ್ರತಿಯೊಂದು ಹೆಸರೂ ಸರಿಯಾಗಿತ್ತು. ಅವರಲ್ಲಿ ಕೆಲವರ ಕಾರ್ಯಗಳನ್ನು ಚುಟುಕಾಗಿ, ಆದರೆ ಚಿತ್ರವತ್ತಾಗಿ ವರ್ಣಿಸಿತ್ತು.

ನಾನು ಪ್ರತ್ಯಕ್ಷಾಪ್ರತ್ಯಕ್ಷವಾಗಿ ಕೇಳಿದ ೫೦-೬೦ ಜನರ ಫಲವಾಚನದಲ್ಲಿ ಬಂದ ಹೆಸರುಗಳಲ್ಲಿ ಒಂದೇ ಒಂದು ತಪ್ಪಾಗಿಲ್ಲ. ಎಷ್ಟೋ ಸಲ ಭೃಗು ಸಂಹಿತೆಯನ್ನಿಟ್ಟುಕೊಂಡ ಪಂಡಿತನಿಗೆ ಪೂರ್ವ ಸೂಚನೆ ಕೊಡದೆ ಓದಿಸಿದ್ದುಂಟು. ಒಬ್ಬ ಅಪರಿಚಿತ ಅಮೇರಿಕನ್ನನ ಜನನ ಸಮಯ ಹೇಳಿದೊಡನೆ ಅವನ ಫಲ ತೆಗೆದು ಓದಲಾಯಿತು. ಒಂದೆರಡು ಸಲ ಹೆಸರುಗಳು ತಪ್ಪೆನಿಸಿದರೂ ವಿಚಾರಿಸಿದಾಗ ಆಯಾ ವ್ಯಕ್ತಿಯ ನಾಮಕರಣದ ಹೆಸರು ಅದೇ ಇತ್ತೆಂದು ತಿಳಿದು ಬಂತು.

ಈ ಸಂಹಿತೆಯ ಪ್ರತಿಯೊಂದು ವಾಚನದ ವ್ಯವಸ್ಥೆ ಹೀಗಿದೆ: ಯೋಗದೃಷ್ಟಿಯಿಂದ ಋಷಿಯು ತಾನು ಹೇಳತಕ್ಕದ್ದನ್ನು ಜಾತಕನು ಯಾವಾಗ ಕೇಳಲಿರುವನೋ ಆ ಕಾಲವನ್ನು ಗಾಢವಾಗಿ ಅವಲೋಕಿಸುತ್ತಾನೆ ಮತ್ತು ತನಗಾಗ ಕಾಣುವುದನ್ನು ಉಸುರುತ್ತಾನೆ.

ಉದಾಹರಣೆಗೆ, ನೈನಿತಾಲದಲ್ಲಿ ಸಂಹಿತೆಯನ್ನು ಓದಿಸಿದಾಗ, ಜಾತಕನು ನೈನಿತಾಲದಲ್ಲಿದ್ದಾನೆ, ಆ ದೇಶದ ಪ್ರಧಾನ ಮಂತ್ರಿ ತನ್ನ ತಂಗಿ ಯಾವ ದೇಶದಲ್ಲಿ ಪೇಚಿಗೆ ಸಿಕ್ಕಿದ್ದಾಳೋ (ರಶಿಯಾ) ದೇಶಕ್ಕೆ ಹೋಗಿದ್ದಾನೆ ಎಂಬ ಉಲ್ಲೇಖ ಬಂತಲ್ಲದೆ ಅವನನ್ನೆದುರಿಸಿರುವ ಸಮಸ್ಯೆಗಳು, ಅವುಗಳನ್ನು ಬಿಡಿಸುವ ರೀತಿ ಎಲ್ಲ ವಿವರಗಳೂ ಹೊರಟವು.

ಇಂಥ ಎಷ್ಟೋ ವಾಚನಗಳನ್ನು ಕೇಳಿದ ಮೇಲೆ, ಈ ಗ್ರಂಥಗಳನ್ನು ಯಾರೇ ಬರೆದಿರಲಿ, ಯಾವಾಗಲೇ ಬರೆದಿರಲಿ, ಅವನು, ಜಾತಕನು ಯಾವ ಕ್ಷಣದಲ್ಲಿ ಈ ಫಲವನ್ನು ಕೇಳಲು ಬರುವನೋ ಆ ಕ್ಷಣವನ್ನೇ ಲಕ್ಷದಲ್ಲಿಟ್ಟುಕೊಂಡು ಬರೆದಿದ್ದಾನೆಂದು ನನಗೆ ತೋರಿತು. ತಾನು ಬರೆದದ್ದನ್ನು ವಿಶಿಷ್ಟ ವ್ಯಕ್ತಿ, ವಿಶಿಷ್ಟ ಪರಿಸರದಲ್ಲಿ, ವಿಶಿಷ್ಟ ಘಟನೆಯ ಒತ್ತಡದಲ್ಲಿ ಕೇಳಬೇಕೆಂದು ಅವನ ಉದ್ದೇಶವಿರಬೇಕು. ಋಷಿಯು ತನ್ನ ಅಪರೋಕ್ಷ ಜ್ಞಾನದಿಂದಲೇ ಆಯಾ ವ್ಯಕ್ತಿಯ ಜೀವನದ ವಿಶಿಷ್ಟ ಕ್ಷಣವನ್ನು ಆ ಕ್ಷಣದ ಆಗುಹೋಗುಗಳ ಸಮೇತವಾಗಿ ಕಾಣಲು ಸಮರ್ಥನಾಗಿದ್ದನೆಂದು ಹೇಳಬೇಕಾಗುತ್ತದೆ.

"ವರಣಸ" ದಲ್ಲಿ, ಉದಾಹರಣೆಗೆ, ವರ್ತಮಾನ ಎಂದರೆ ಜಾತಕನು ಪ್ರಶ್ನೆ ಕೇಳಿ ಫಲ ಓದಿಸುವ ಕ್ಷಣ, ಆ ಕ್ಷಣದ ಹಿಂದಿನ ಘಟನೆಗಳನ್ನು ವಿವರವಾಗಿ ಚರ್ಚಿಸುವುದಲ್ಲದೆ ಅವನ ಮಿತ್ರರು ಮತ್ತು ಅವರು ಮಿತ್ರರಾದ ಬಗೆ ಇವುಗಳನ್ನೂ ವರ್ಣಿಸಲಾಗುತ್ತದೆ.

ಒಂದು ವಾಚನದಲ್ಲಿ ನನ್ನ ಹೆಂಡತಿಗೂ ನನಗೂ ಆದ ಪ್ರಥಮ ಪರಿಚಯದ ವಿಚಾರ ಹೇಳಲ್ಪಟ್ಟಿತು. ಎಲ್ಲಿಯೂ ದಾಖಲೆಯಿಲ್ಲದ ಮತ್ತು ನಾವು ಕೂಡ ಮರೆತುಬಿಟ್ಟ ಸಂಗತಿಗಳನ್ನು ಕೊಡಲಾಯಿತು. ನಾವು ಭೆಟ್ಟಿಯಾದ ಕಟ್ಟಡದ ಹೆಸರೂ ಬಂತು. ಈ ಪುಸ್ತಕ ಬರೆಯಲ್ಪಟ್ಟಾಗ ಆ ಕಟ್ಟಡ ಇದ್ದಿಲ್ಲವಷ್ಟೇ ಅಲ್ಲ, ಅದರ ಒಡೆಯನ ಅಜ್ಜ ಕೂಡ ಹುಟ್ಟಿರಲಿಕ್ಕಿಲ್ಲ. ಆ ಮೇಲೆ ನಾವು ಪಟ್ಟ ಪಾಡು, ನಾವು ಮದುವೆಯಾದ ಮನೆ, ಕನ್ಯಾದಾನ ಮಾಡಿದವರ ಹೆಸರು—ಎಲ್ಲವೂ ಬಂತು.

ಎರಡು ಸಂಹಿತೆಗಳ ಬೇರೆ ಬೇರೆ ಅಧ್ಯಾಯಗಳಲ್ಲಿ ದಿಲ್ಲಿಯ ಆಗು ಹೋಗುಗಳ ವಿಚಾರ

ವಿತ್ತು. ಸಂಬಂಧಪಟ್ಟ ವ್ಯಕ್ತಿಗಳ ಸತ್ಯವಾದ ವ್ಯಕ್ತಿಚಿತ್ರವಿತ್ತು. "ಮರತಸ" ದಲ್ಲೊಂದೆಡೆ ಒಬ್ಬಳ ಹೆಸರಿನ ವ್ಯಂಜನಗಳನ್ನು ಹೇಳಿ ಅವಳು ವಿದೇಶಿ ಗೂಢಚಾರಿಣಿ ಎಂದಿತ್ತು. ಅವಳ ಚಟುವಟಿಕೆಗಳ ವಿವರವೂ ಇತ್ತು. ಆಗ ಅಂಥ ವ್ಯಕ್ತಿ ಇದ್ದದ್ದೇ ನನಗೆ ಗೊತ್ತಿದ್ದಿಲ್ಲ. ಅವಳನ್ನು ಕುರಿತು ಸಂಬಂಧಪಟ್ಟವರನ್ನು ಎಚ್ಚರಿಸಬೇಕು ಎಂದೂ ನನಗೆ ಸೂಚನೆಯಿತ್ತು. ಉಚ್ಚಾಧಿಕಾರಿಯೊಬ್ಬನನ್ನು ಕೇಳಿದಾಗ ಆತ ಅವಳ ಪೂರ್ಣ ಹೆಸರು ಮತ್ತು ವಿವರಗಳನ್ನು ನನಗೊದಗಿಸಿದ. ಕೆಲವೊಮ್ಮೆ ಈ ಸಂಹಿತೆಗಳು ನಮ್ಮ ಮಿತ್ರರ ಒಳಗುಟ್ಟುಗಳನ್ನು ಕೊಟ್ಟು ನಮ್ಮನ್ನು ತುಂಬ ಪೇಚಿಗೊಳಪಡಿಸುವುದೂ ಉಂಟು.

ಮುಖ್ಯ ಸಂಹಿತೆಗಳಲ್ಲಿ ಒಬ್ಬನ ಬಗ್ಗೆಯೆ ಒಂದಕ್ಕಿಂತ ಹೆಚ್ಚು ಕಡೆ ಬೇರೆ ಬೇರೆ ಉಲ್ಲೇಖಗಳಿರುವುದುಂಟು. ಪ್ರತಿಯೊಂದನ್ನೂ ಜೀವನದ ವಿಶೇಷ ಮುಹೂರ್ತದಲ್ಲಿ ಓದಬೇಕೆಂಬುದು ನಿರ್ಬಂಧ.

ಓದುವ ಗಳಿಗೆಯ ವರೆಗಿನ ಘಟನೆಗಳು ವಿವರವಾಗಿಯೂ ಸರಿಯಾಗಿಯೂ ಇರುತ್ತವೆ. ಭವಿಷ್ಯತ್ತು ಮಾತ್ರ ಸ್ಥೂಲ ನಿರ್ದೇಶಾತ್ಮಕವಾಗಿಯೆ ಇರುತ್ತದೆ. ಇಂದಿನ ಅವಸ್ಥೆಯಿಂದ ಮುಂದಿನದರ ಅರ್ಥ ಮಾಡಬೇಕಷ್ಟೆ.

ಕಾಲಾಂತರದಲ್ಲಿ ಹೊಸ ಮುಹೂರ್ತದಲ್ಲಿ ಆ ಮುಹೂರ್ತದ ಫಲ ಓದಿಸಿದಾಗ ಹಿಂದಿನ ವಾಚನದಲ್ಲಿ ಹೇಳಿದ ಫಲ ಒಟ್ಟಿನ ಮೇಲೆ ಸರಿಯಾಗಿದ್ದರೂ ಕೆಲವು ಘಟನೆಗಳು ವ್ಯತ್ಯಸ್ತವಾಗಿರುವುದು ಕಾಣಬರುವುದುಂಟು. ಆದರೆ ಓದಿಸಿದ ಕ್ಷಣದ ವರೆಗಿನ ಘಟನೆಗಳು ಮತ್ತೆ ಸರಿಯಾಗಿಯೆ ಇರುತ್ತವೆ. ಮತ್ತೆ ಆ ಕ್ಷಣದ ಮುಂದಿನ ಭವಿಷ್ಯ ಅಸ್ಪಷ್ಟವಾಗಿಯೇ ಹೇಳಲ್ಪಟ್ಟಿರುತ್ತದೆ.

ಇದನ್ನೆಲ್ಲ ನೋಡಿ ನನಗೊಮ್ಮೆ ಈ ಪಂಡಿತ ನಿಜವಾಗಿ ಪುಸ್ತಕದಲ್ಲಿರುವುದನ್ನು ಓದದೆ ಪರೇಂಗಿತ ಜ್ಞಾನದ ಶಕ್ತಿಯಿಂದ ಆತ ಹಿಂದಿನದನ್ನು ಹೇಳುತ್ತಿದ್ದಾನೆಂದೂ ಆದ್ದರಿಂದಲೇ ಅವನ ಭೂತಕಾಲದ ಕಥೆ ಸರಿಯಾಗಿದ್ದರೂ ಭವಿಷ್ಯ ಮಸಕಾಗಿರುತ್ತದೆಂದೂ ಸಂಶಯ ಬಂತು. ಅದಕ್ಕಾಗಿ ಅವನನ್ನು ಪರೀಕ್ಷಿಸಲು ನನ್ನ ಭಾವಿ ಮುಹೂರ್ತಗಳ ಫಲಗಳನ್ನೋದಲು ಕೇಳಿಕೊಂಡೆ.

ಸಾಮಾನ್ಯವಾಗಿ ಆತ ಇದಕ್ಕೊಪ್ಪುವುದಿಲ್ಲ. ಆದರೆ ಬಹಳ ಹೇಳಿಕೊಂಡ ಮೇಲೆ ಭವಿಷ್ಯತ್ತಿನ ಮುಹೂರ್ತದ ಕೆಲ ಪುಟಗಳನ್ನು ಓದಲು ಆತ ಸಿದ್ಧನಾದ. ೧೯೫೯ ಅಗಸ್ಟಿನ ಒಂದು ಮುಹೂರ್ತದ ನನ್ನ ಫಲ ಓದಿಸಿದಾಗ ಅಗಸ್ಟಿನಿಂದ ಡಿಸೆಂಬರ ವರೆಗಿನ ಫಲ ಅಸ್ಪಷ್ಟವಾಗಿತ್ತು. ಬಳಿಕ ಬರಲಿದ್ದ ಡಿಸೆಂಬರಿನ ಮುಹೂರ್ತದ ಫಲವನ್ನು ಓದಿಸಿದೆ. ಡಿಸೆಂಬರಿನ ವರೆಗಿನ ನನ್ನ ಜೀವನದ ಘಟನೆಗಳು ಅದರಲ್ಲಿ ಹೇಳಿದಂತೆಯೇ ಮುಂದೆ ಘಟಿಸಿದವು.

ಹೀಗಾಗಲು ಕಾರಣವೇನು? ಜಾತಕನ ಜೀವನದ ವಿಶಿಷ್ಟ ಕ್ಷಣದ ಮೇಲೆ ಋಷಿಯು ಮನಸ್ಸನ್ನು ಕೇಂದ್ರಿಸಿದಾಗ ಆ ಕ್ಷಣದ ಹಿಂದಿನ ಘಟನೆಗಳು ಅವನಿಗೆ ಸ್ಪಷ್ಟ ಗೋಚರವಾದರೂ ಭವಿಷ್ಯತ್ತಿನವು ಅಸ್ಪಷ್ಟವಾಗಿಯೆ ಕಾಣಿಸುತ್ತಿರಬೇಕು. ಅಥವಾ ಜಾತಕನ ಭವಿಷ್ಯತ್ತಿನ ಸುಖಕಷ್ಟಗಳೆಲ್ಲದರ ವಿವರವನ್ನು ಮುಂಚಿತವಾಗಿಯೆ ಕೊಟ್ಟು ಅವನ ಉತ್ಸಾಹವನ್ನು ಅಪಹರಿಸುವುದು ತರವಲ್ಲೆಂದೂ ಅವನಿಗೆ ಪ್ರಯತ್ನಶೀಲನಾಗಲೆಡೆಯಿರಲೆಂದೂ ಸ್ಥೂಲ ಭವಿಷ್ಯವನ್ನಷ್ಟೇ ಹೇಳುವುದು ಋಷಿಯ ಉದ್ದೇಶವಿರಬೇಕು.

ಇದನ್ನೆಲ್ಲ ನೋಡಿದರೆ ಈ ಕೆಳಗಿನ ಸಿದ್ಧಾಂತಗಳು ಹೊರಡುತ್ತವೆ:

೧. ಜನನ ಕಾಲದ ಗ್ರಹಗಳ ಸ್ಥಿತಿಯನ್ನು ನೋಡಿ ಮನುಷ್ಯನ ಜೀವನದ ಘಟನೆಗಳನ್ನು ಊಹಿಸಲು ಸಾಧ್ಯವಿದೆ. ಅರ್ಥಾತ್ ಗ್ರಹಗಳು ಜೀವನದ ಮೇಲೆ ಪ್ರಭಾವ ಬೀರುತ್ತವೆ.

೨. ಯೋಗಶಕ್ತಿಯಿಂದಾಗಲಿ ಇನ್ನಾವ ಶಕ್ತಿಯಿಂದಾಗಲಿ ಜನನ ಮುಹೂರ್ತದ ಗ್ರಹ ಸಂಪತ್ತಿನ ಆಧಾರದಿಂದ ವ್ಯಕ್ತಿಯ, ಅವನ ಪೂರ್ವಜರ, ಬಂಧುಭಾಂಧವ ಮಿತ್ರರ ಹೆಸರುಗಳನ್ನು ಸರಿಯಾಗಿ ಊಹಿಸುವುದು ಸಾಧ್ಯವುಂಟು.

೩. ಜಾತಕವನ್ನು ಯೋಗದೃಷ್ಟಿಯಿಂದ ನೋಡಿ ಸಾಮಾನ್ಯ ಜ್ಯೋತಿಷ ಶಾಸ್ತ್ರದಲ್ಲಿ ಹೇಳಿರದ ಯಾವುದೋ ವಿಧಾನದಿಂದ ವ್ಯಕ್ತಿಯ ಜೀವನದ ವಿಶಿಷ್ಟ ಮುಹೂರ್ತದಿಂದ ಹಿಡಿದು ಗತ ಘಟನೆಗಳನ್ನೂ ಭಾವಿ ಘಟನೆಗಳನ್ನೂ ಕಾಣಲು ಸಾಧ್ಯವಿದೆ.

೪. ಯಾವುದೊಂದು ವಿಶಿಷ್ಟ ಮುಹೂರ್ತದಲ್ಲಿ ಹಿಂದಿನ ಘಟನೆಗಳಷ್ಟು ಸ್ಪಷ್ಟವಾಗಿ ಮುಂದಿನ ಘಟನೆಗಳು ಋಷಿಗೆ ಗೋಚರವಾಗುವುದಿಲ್ಲ.

೫. ಒಟ್ಟಿನ ಮೇಲೆ, ಮನಸ್ಸನ್ನು ಯಾವುದಾದರೊಂದು ಭವಿಷ್ಯತ್ ಮುಹೂರ್ತದಲ್ಲಿ ಕೇಂದ್ರೀಕರಿಸಿ ಆ ವರೆಗೆ ನಡೆಯಲಿರುವುದನ್ನು ಸರಿಯಾಗಿ ಕಾಣುವ ಉಪಾಯಗಳು— ಈ ವರೆಗೆ ನಮಗೆ ಗೊತ್ತಿಲ್ಲದಿದ್ದರೂ—ಇವೆ.

ಆದ್ದರಿಂದ ಇದು ಬರಿ ಭವಿಷ್ಯ ಹೇಳುವ ಪ್ರಶ್ನೆಯಲ್ಲ, ಭವಿಷ್ಯತ್ತನ್ನು ನೋಡುವುದರ ಸಾಧ್ಯತೆಯ ಪ್ರಶ್ನೆಯೆಂದು ಬಗೆದು ವಿಜ್ಞಾನಿಗಳು ಈ ಆಶ್ಚರ್ಯಕರ ವಿದ್ಯೆಯನ್ನು ತಿರಸ್ಕರಿಸುವುದನ್ನು ತೊರೆಯುವುದವಶ್ಯವೆಂದು ನನ್ನ ಭಾವನೆ. *



## ಪ್ರೇಮ ಮತ್ತು ಸೌಂದರ್ಯ

ಬಹು ಹಿಂದಿನ ಕಾಲದ ಮಾತು. ಆಗ ಪ್ರೇಮ ಕುರುಡಾಗಿರಲಿಲ್ಲ. ಸೌಂದರ್ಯ ಮೂಕವಾಗಿರಲಿಲ್ಲ. ಒಂದು ದಿನ ಇಬ್ಬರೂ ಆಕಾಶದಲ್ಲಿ ಸಂಚರಿಸುತ್ತಿದ್ದಾಗ, ಮೋಡಗಳ ಮರೆಯಿಂದ ಪೂರ್ಣಿಮೆಯ ಚಂದ್ರ ಹೊರಗೆ ಬಂದ. ಪ್ರೇಮದ ದೃಷ್ಟಿ ಚಂದ್ರನ ಮೇಲೆ ನಟ್ಟಿತು. ಸೌಂದರ್ಯಕ್ಕೆ ಬಹು ಕೆಡಕೆನಿಸಿತು. ಅದು ತನ್ನನ್ನು ಪ್ರಶಂಸಿಸಿಕೊಳ್ಳುತ್ತಾ, ಚಂದ್ರನನ್ನು ಹೀಗಳೆಯಲಾರಂಭಿಸಿತು. ಪ್ರೇಮಕ್ಕೆ ಬಹು ಸಿಟ್ಟು ಬಂದಿತು. ಇಬ್ಬರಿಗೂ ಜಗಳ ಪ್ರಾರಂಭವಾಯಿತು. ಚಂದ್ರನ ಸೌಂದರ್ಯಕ್ಕೆ ಮಾರು ಹೋಗಿದ್ದ ಪ್ರೇಮದ ಕಣ್ಣುಗಳನ್ನು ಸೌಂದರ್ಯ ಕಿತ್ತು ಹಾಕಿತು. ಪ್ರೇಮ, ಸೌಂದರ್ಯದ ನಾಲಿಗೆಯನ್ನು ಕಿತ್ತುಹಾಕಿತು. ಅಂದಿನಿಂದ ಪ್ರೇಮಕ್ಕೆ ಕಣ್ಣಿಲ್ಲದಾಯಿತು, ಸೌಂದರ್ಯಕ್ಕೆ ಬಾಯಿಯಿಲ್ಲದಾಯಿತು. ಇವೆರಡರ ಮಧ್ಯೆ ಅಂದಿನಿಂದಲೂ ನಿರಂತರ ವೈರ ಬೆಳೆಯುತ್ತಾ ಬಂದಿದೆ.

—ಬಿ. ಪಿ. ರಾವ್

## ಗಾದೆಯ ವೇದ

ದುಡ್ಡು ಮಾತಾಡುವಾಗ ದಿಟವು ಮೂಕವಾಗಿರುತ್ತದೆ. — ರಶಿಯನ್ ಗಾದೆ.

ದಾರಿದ್ರ್ಯವು ಆರನೆಯ ಇಂದ್ರಿಯ. — ಜರ್ಮನ್ ಗಾದೆ.

ಯಾವ ಚಿಂತೆಯನ್ನೂ ಮಾಡದವನ ಹೆಂಡತಿ ಗಂಡನಿದ್ದೂ ವಿಧವೆ.

— ಹಂಗೇರಿಯನ್ ಗಾದೆ



ಗ್ರೀನ್‌ಲಂಡಿನ ವಿಶಾಲ ಬರ್ಫಮಯ ಪ್ರದೇಶದ ಅಡಿಯಲ್ಲಿ ಅಮೇರಿಕದ ಸೈನ್ಯಶಾಖೆಯ ಇಂಜಿನಿಯರರು ಜಗತ್ತಿನ ಅತಿ ವಿಚಿತ್ರ ನಗರವನ್ನು ಕಟ್ಟುತ್ತಿದ್ದಾರೆ. ಹಿಮದ ರಾಶಿಯಲ್ಲಿ ಸಂಪೂರ್ಣವಾಗಿ ಅಡಗಿರುವ ಈ ನಗರ ಪರಮಾಣುಶಕ್ತಿಯ ಸಹಾಯದಿಂದ ಬದುಕುವುದು. ಪರಮಾಣು ಅಸ್ತ್ರಗಳ ದಾಳಿಯ ಕಾಲದಲ್ಲಿ ಇದು ಅತ್ಯಂತ ಸುರಕ್ಷಿತ ಸ್ಥಳವಾಗಿರುವುದು. ಮೊದಲನೆಯದಾಗಿ ಇದನ್ನು ಕಂಡು ಹಿಡಿಯುವುದೇ ಕಷ್ಟಸಾಧ್ಯವಾಗುವುದು. ಒಂದು ವೇಳೆ ಕಂಡುಹಿಡಿದು ಅಲ್ಲಿ ದಾಳಿಯನ್ನು ಮಾಡಿದ್ದೇ ಆದರೂ ಪರಮಾಣು ಸ್ಫೋಟದ ಆಘಾತದ ಬಹ್ವಂಶವನ್ನು ಹಿಮವೇ ಹೀರಿಕೊಳ್ಳುವುದು. ನಗರದಲ್ಲಿಯ ನಿವಾಸಿಗಳನ್ನು ಬಹುಮಟ್ಟಿಗೆ ಪರಮಾಣು ವಿಕಿರಣದ ಅಪಾಯದಿಂದಲೂ ಅದು ರಕ್ಷಿಸುವುದು.

ಈ ನಗರವನ್ನು ಉತ್ತರ ಧ್ರುವದಿಂದ ೮೦೦ ಮೈಲು ದೂರದಲ್ಲಿ ಕಟ್ಟುತ್ತಿದ್ದಾರೆ. ಗ್ರೀನ್‌ಲಂಡ್ ಡೆನ್ಮಾರ್ಕಿನ ಆಧಿಪತ್ಯದಲ್ಲಿರುವುದರಿಂದ ಅಮೇರಿಕನ್ ಇಂಜಿನಿಯರರು ಡೇನಿಶ್ ಸರಕಾರದ ಸಹಕಾರ ಪಡೆದಿದ್ದಾರೆ ಈ ಪಟ್ಟಣವನ್ನು ಕಟ್ಟಿ ಅವರು ಅತ್ಯಂತ ದುರ್ಭೇದ್ಯವೆನಿಸಿದ ಆರ್ಕ್‌ಟಿಕ್ ಪ್ರದೇಶವನ್ನು ಪಳಗಿಸಿ ಹತೋಟಿಗೆ ತರಬಹುದು ಎಂದು ಸಿದ್ಧಮಾಡಿ ತೋರಿಸಿದ್ದಾರೆ. ಈ ನಗರದ ಸ್ಥಾನದಿಂದ ಪಶ್ಚಿಮಕ್ಕೆ ೧೫೦ ಮೈಲು ದೂರದಲ್ಲಿರುವ ಥುಲೆ ಎಂಬ ವಿಮಾನ ನಿಲ್ದಾಣದಿಂದ ಈ ನಗರದ ವರೆಗೆ ಹಿಮವನ್ನು ಕೊರೆದು ಮಾಡಿರುವ ಸುರಂಗ ಮಾರ್ಗದಲ್ಲಿ ಒಂದು ಇಲೆಕ್ಟ್ರಿಕ್ ಟ್ರೇನು ಓಡಾಡುವುದು.

ಈ ನಗರದಲ್ಲಿ ವಾಸಿಸಲಿರುವ ನೂರು ವಿಜ್ಞಾ



ಒಂದು ಎಂಜಿನಿಯರಿಂಗ್ ವಿಸ್ಮಯ

# ಹಿಮಗರ್ಭದಲ್ಲೊಂದು ನಗರ

ಹರ್ಬರ್ಟ್ ಓ ಜಾನ್ಸನ್

ನಿಗಳು, ಇಂಜಿನಿಯರರು ಮತ್ತು ಸೈನಿಕರು ಇಷ್ಟರಲ್ಲೇ ಇಲ್ಲಿಗೆ ವಾಸಕ್ಕೆಂದು ಬರಲಿರುವರು. ಹಗಲಿಡಿ ಕೆಲಸ ಮಾಡಿ ದಣಿದಾಗ ಇವರು ಕೋಲಂಬಸನು ಅಮೇರಿಕವನ್ನು ಶೋಧಿಸುವುದಕ್ಕಿಂತ ಮೊದಲು ರೂಪುಗೊಂಡ ಬರ್ಫವನ್ನು ನೆಲದಾಳದಿಂದ ಅಗೆದು ಉಪಯೋಗಿಸಿದ ಶೀತಲ ಪಾನೀಯವನ್ನು ಸೇವಿಸಬಹುದಾಗಿದೆ.

ಈ ಮುಂಚೆ ಈ ಪ್ರದೇಶದಲ್ಲಿ ಮನುಷ್ಯ ಸಕಲ ವಿಧದ ವೈಜ್ಞಾನಿಕ ಸಹಾಯಗಳನ್ನು ಪಡೆದರೂ ವರ್ಷದಲ್ಲಿ ಐದು ತಿಂಗಳ ಕಾಲ ಅಂದರೆ ಮೇಯಿಂದ ಸೆಪ್ಟೆಂಬರ್ ವರೆಗೆ ಮಾತ್ರ ಇರಬಲ್ಲವನಾಗಿದ್ದ. ಆದರೆ ಈಗ ಈ ನಗರ-"ಕ್ಯಾಂಪ್ ಸೆಂಚುರಿ"ದಲ್ಲಿ ಮನುಷ್ಯ ಇಡೀ ವರ್ಷ ಸುಖದಿಂದ ಇರಬಲ್ಲ, ದುಡಿಯಬಲ್ಲ. ಇಲ್ಲಿ ಚಳಿಗಾಲದಲ್ಲಿ ಉಷ್ಣತಾಮಾನ ಶೂನ್ಯಾಂಶಕ್ಕಿಂತಲೂ ೭೦° ಕಡಿಮೆಯಾಗಿರುವುದು. ಬಿರುಗಾಳಿಗಳು ನೂರು ಮೈಲು ವೇಗದಲ್ಲಿ ಹಿಮಕಣಗಳನ್ನು ಹಾರಿಸುತ್ತಿರುವವು. ಆದರೆ ಕ್ಯಾಂಪ್ ಸೆಂಚುರಿಯಲ್ಲಿರುವವರಿಗೆ ಅವು ಏನನ್ನೂ ಮಾಡಲಾರವು.

ಅವರು ಇಲ್ಲಿ ಬೇರೆ ಬೇರೆ ಪೂರ್ವನಿರ್ಮಿತ ಮನೆಗಳಲ್ಲಿ ವಾಸಿಸುವರು. ಅವುಗಳಿಗೆ ಉಷ್ಣ ಶೀತಗಳು ಒಳಗೆ ಹಾಯದಂತೆ ಇನ್‌ಸುಲೇಶನ್ ಇರುವುದು. ಮನೆಯಿಂದ ಮನೆಗೆ ಹಿಮದ ಸುರಂಗ ಮಾರ್ಗವಿರುವುದು. ಈ ಜನಕ್ಕೆ ಸಾಮಾನ್ಯವಾಗಿ ಆರ್ಕ್‌ಟಿಕ್ ಪ್ರದೇಶದಲ್ಲಿ ಅಗತ್ಯವೆನಿಸುವ ಅತಿ ಭಾರದ ಹಾಗೂ ಅಡಮುಟ್ಟಾದ ಉಣ್ಣೆಯ ಬಟ್ಟೆಗಳು, ಟೊಪ್ಪಿಗೆಗಳು, ಪಾದತ್ರಾಣಗಳು ಯಾವುವೂ ಬೇಕಾಗುವುದಿಲ್ಲ. ಕೆಲಸದ ಸ್ಥಳಗಳಲ್ಲಿ ಇಲ್ಲಿಯ ಉಷ್ಣತಾಮಾನವನ್ನು ಯಾವಾಗಲೂ ೪೦° ಇಡಲಾಗುವುದು.

ಮಲಗುವ ಕೋಣೆಗಳಲ್ಲಿ ಉಷ್ಣತಾಮಾನ ೬೦° ಇರುವುದು. ಮನೆಗಳ ಗೋಡೆಗಳು ಬರ್ಫದವೇ. ಅವು ಕರಗಿ ಹೋಗದಂತೆ, ಉಪಯೋಗಿಸಿದ ಬಿಸಿ ಗಾಳಿಯು ಹೊರಗೆ ಹೋಗುವುದಕ್ಕಾಗಿ "ಹೊಗೆಕಿಂಡಿ" ಯನ್ನಿಟ್ಟಿದ್ದಾರೆ. ಗೋಡೆಗಳ ಉಷ್ಣತಾಮಾನ ೨೦° ಗಳಿಗಿಂತ ಏರುವಂತಿಲ್ಲ. ನೆಲ ಕರಗಬಾರದೆಂದು ಅದರಡಿ ತಂಪು ಹವೆ ಓಡಾಡುವಂತೆ ಏರ್ಪಾಡು ಮಾಡಲಾಗಿದೆ.

ನಗರವನ್ನು ಬಿಟ್ಟು ಭೂಮಿಯ ಮೇಲ್ಭಾಗಕ್ಕೆ ಬರದ ವಿನಾ ಕ್ಯಾಂಪ್ ಸೆಂಚುರಿ ನಿವಾಸಿಗಳಿಗೆ ಸೂರ್ಯದರ್ಶನವಾಗಲಾರದು. ಡಿಸೆಂಬರ್ ಮತ್ತು ಜನೆವರಿ ತಿಂಗಳುಗಳಲ್ಲಿಯಂತೂ ಅವರು ಮೇಲೆ ಬಂದರೂ ಸೂರ್ಯದರ್ಶನವಾಗುವಂತಿಲ್ಲ. ಗ್ರೀನ್‌ಲ್ಯಾಂಡಿನಲ್ಲಿ ಆ ತಿಂಗಳುಗಳಲ್ಲಿ ಸೂರ್ಯೋದಯವೇ ಇಲ್ಲ.

ನೆಲದಡಿಯ ಈ ವಿಚಿತ್ರ, ಅದ್ಭುತ ನಗರದಲ್ಲಿ ಜೀವನ ಅಸ್ವಾಭಾವಿಕವೂ ಅಸಹ್ಯವೂ ಆಗಬಹುದು ಎಂಬ ವಿಚಾರ ಬರುವುದು ಸಹಜ. ಆದರೆ ಹಾಗಿಲ್ಲ. ಕ್ಯಾಂಪ್ ಸೆಂಚುರಿಯ ಜನರಿಗೆ ಕೆಲಸದ ಜೊತೆಗೆ ಮನೋರಂಜನೆಯೂ ಸಾಕಷ್ಟು ಒದಗಿಸಲ್ಪಡುವುದು. ಈ ಜನ ಅಡಿಗೆಯಿಂದ ಹಿಡಿದು ಸಂಶೋಧನದ ವರೆಗಿನ ಕಾರ್ಯಗಳಲ್ಲಿ ದಿನದಲ್ಲಿ ೮ ರಿಂದ ೧೦ ತಾಸುಗಳ ವರೆಗೆ ಮಗ್ನರಾಗಿರುವರು. ಆ ಮೇಲೆ ಪ್ರತಿಯೊಬ್ಬನೂ ತನಗೆ ಇಷ್ಟವಾದ ರೀತಿಯಲ್ಲಿ ಮನೋರಂಜನೆ ಮಾಡಿಕೊಳ್ಳಬಹುದು. ಆಟದ ಕೋಣೆಗಳು, ವ್ಯಾಯಾಮ ಮಂದಿರ, ವಾಚನಾಲಯ, ಸಿನೇಮಾ, ಟೆಲಿವಿಜನ್ ರೇಡಿಯೊ (ಮಾಸ್ಕೊ ಆಕಾಶವಾಣಿಯ ಕಾರ್ಯಕ್ರಮವನ್ನು ಅತಿ ಸ್ಪಷ್ಟವಾಗಿ ಕೇಳಬಹುದು. ಥುಲೆಯಲ್ಲಿರುವ ಮಿಲಿಟರಿ ಟೆಲಿವಿಜನ್ ಸ್ಟೇಶನ್ನಿನ ಕಾರ್ಯಕ್ರಮಗಳನ್ನೂ ನೋಡಬಹುದು.)— ಇನ್ನೇನು ಬೇಕು ಮನೋರಂಜನೆಗೆ! ಅತ್ಯುತ್ತಮ ಆಹಾರವನ್ನೂ ಇವರಿಗೆ ಒದಗಿಸಲಾಗುವುದು. ಮಲಗಿಕೊಳ್ಳಲು ಚೀಲದ ಬದಲು ಬೆಚ್ಚಗಿರುವ ಕೋಣೆಗಳಿರುವವು. ಬಿಸಿ ಮತ್ತು ತಣ್ಣೀರು ಸ್ನಾನದ ವ್ಯವಸ್ಥೆ, ಅಗಸರ ಮತ್ತು ಕ್ಷೌರದ ಅಂಗಡಿ, ಆಪರೇಶನ್ ಕೋಣೆ ಕೂಡ ಇರುವ ಹತ್ತು ಹಾಸಿಗೆಗಳ ಆಸ್ಪತ್ರೆ, ಇಗರ್ಜಿ, ಪಾದ್ರಿ–ಮನುಷ್ಯನ ದೈಹಿಕ, ಮಾನಸಿಕ, ಲೌಕಿಕ, ಪಾರಲೌಕಿಕ ಅಗತ್ಯಗಳೆಲ್ಲವನ್ನೂ ಪೂರೈಸುವ ಸಲಕರಣೆಗಳು ಕ್ಯಾಂಪ್ ಸೆಂಚುರಿಯಲ್ಲಿ ಲಭ್ಯವಾಗುವವು. ಸಂಸಾರವಂದಿಗರಿಗೆ ಇಲ್ಲಿ ಒಂದೇ ಒಂದು ಕೊರತೆ ಇದ್ದರೂ ವಿಮಾನ ಮೂಲಕ ಪತ್ರವ್ಯವಹಾರ, ಟೆಲಿಫೋನಿನಲ್ಲಿ ಪತ್ನಿ ಮತ್ತು ಇತರ ಇಷ್ಟಮಿತ್ರ ಬಂಧುಗಳೊಡನೆ ಸಂಭಾಷಣೆ ಮುಂತಾದವುಗಳ ಮೂಲಕ ಈ ನೂರು ಜನರ ಏಕಾಂತ ಜೀವನವನ್ನು ಹಗುರಗೊಳಿಸುವ ಏರ್ಪಾಡು ಆಗುತ್ತಿದೆ.

ಕ್ಯಾಂಪ್ ಸೆಂಚುರಿ ನಗರವನ್ನು ಉತ್ತರ ಧ್ರುವದ ಹಿಮಶಿಖರದಿಂದ ನೂರು ಮೈಲು ಅಂತರದಲ್ಲಿ ಕಟ್ಟಬೇಕೆಂದಿದ್ದರು. ಅಮೇರಿಕನ್ ಸೈನ್ಯಶಾಖೆಯ ಎಂಜನಿಯರರು ಐದು ವರ್ಷಕಾಲ ಗ್ರೀನ್‌ಲ್ಯಾಂಡಿನ ಬರ್ಫ ಶಿಖರದಲ್ಲಿ ನಗರ ನಿರ್ಮಾಣ ಪ್ರಯೋಗಗಳನ್ನು ಮಾಡಿದ ನಂತರವೇ ಕ್ಯಾಂಪ್ ಸೆಂಚುರಿಯ ನಿರ್ಮಾಣ ಕಾರ್ಯವನ್ನು ಕೈಕೊಂಡಿದ್ದಾರೆ. ಸೈನ್ಯದ ಸಂಶೋಧನೆ ಮತ್ತು ಅಭಿವೃದ್ಧಿ ಶಾಖೆಯ ಪ್ರಮುಖರು ಇಲ್ಲಿಯ ಸಂಶೋಧನೆಗಳ ನೇತೃತ್ವ ವಹಿಸುವರು. ಈ ನಗರದ ಕೆಲಸದ ಭಾಗದಲ್ಲಿ ಪ್ರಯೋಗಶಾಲೆಗಳಿರುವವು. ಖಂಡಾಂತರ ಅಸ್ತ್ರಗಳನ್ನು ಹಾರಿಸಲು ಅಥವಾ ಅಂಥ ಅಸ್ತ್ರಗಳನ್ನು ನಡುವೆಯೆ ತಡೆದು ನಿರ್ನಾಮ ಮಾಡಲು ಇಲ್ಲಿ ಏನಾದರೂ ಸೈನಿಕ ಠಾಣೆಯೊಂದನ್ನು ಕಟ್ಟಬೇಕಾದ ಪ್ರಮೇಯ ಬಂದರೆ ಅದಕ್ಕೂ ಸಕಲ ಪೂರ್ವಸಿದ್ಧತೆಗಳಾಗಿವೆ.

ಹತ್ತಿರವೇ ಸಿಗುವ ಬರ್ಫ ಮತ್ತು ಹಿಮದಿಂದ ಮನೆಗಳನ್ನು ಕಟ್ಟುವುದು, ಆಹಾರಾದಿಗಳನ್ನು ಶೇಖರಿಸಿಡುವುದಕ್ಕಾಗಿ ಬರ್ಫದಲ್ಲಿ ಗವಿ

ಗಳನ್ನು ಕೊರೆಯಲು ಕಲ್ಲಿದ್ದಲಿ ಗಣಿ ತೋಡುವ ಯಂತ್ರಗಳಿಂದ ಕೆಲಸ ಮಾಡಿಸಿಕೊಳ್ಳುವುದು, ಆರ್ಕ್‌ಟಿಕ್‌ನಲ್ಲಿ ಯಾವಾಗಲೂ ಗಂಭೀರವಾಗಿರುವ ನೀರಿನ ಸಮಸ್ಯೆಯನ್ನು ೧೫೦ ಅಡಿ ಆಳದ ಬಾವಿ ತೋಡಿ ನಿವಾರಿಸುವುದು, ಬೆಳಕು, ಕಾವು, ವಿದ್ಯುಚ್ಛಕ್ತಿಗಳ ಪೂರೈಕೆಗಾಗಿ ೨,೦೦೦ ಕಿಲೊವ್ಯಾಟ್ ಶಕ್ತಿಯನ್ನು ಉತ್ಪಾದಿಸಬಲ್ಲ ಪರಮಾಣು ಶಕ್ತಿ ಕೇಂದ್ರವನ್ನು ಸ್ಥಾಪಿಸುವುದು-ಇವೆಲ್ಲ ಇಂಥ ಹಿಮದಲ್ಲಿಯೂ ಸಾಧ್ಯವಿದೆಯೆಂದು ಇಂಜಿನಿಯರರು ಸಿದ್ಧಪಡಿಸಿ ತೋರಿಸಿದ್ದಾರೆ. ಇಲ್ಲಿ ೫೦ ಪೌಂಡಿಗಿಂತಲೂ ಕಡಿಮೆ ಯುರೇನಿಯಂ-೨೩೫ ರಿಂದ ೩೫,೦೦೦ ಪೀಪಾಯಿ ಎಣ್ಣೆಯಿಂದ ಉತ್ಪಾದಿಸಬಹುದಾದಷ್ಟು ಶಕ್ತಿಯನ್ನು ಉತ್ಪಾದಿಸುತ್ತಾರೆ

ಆದರೆ ಇಂಜನಿಯರರಿಗೆ ಒಂದು ಕಾರ್ಯ ಮಾತ್ರ ಇನ್ನೂ ಸಾಧ್ಯವಾಗಿಲ್ಲ. ಬರ್ಫದ ಮೃದುವಾದ ಚಲನದಿಂದ ಇಲ್ಲಿಯ ಕಟ್ಟಡದ ಗೋಡೆಗಳು ಸಾವಕಾಶವಾಗಿ ಒಳಸರಿಯುವವು. ಮಾರ್ಗಗಳು ಡೊಂಕಾಗುವವು. ಇದನ್ನು ಹೇಗೆ ನಿಲ್ಲಿಸಬೇಕು ಎಂದು ಅವರಿಗಿನ್ನೂ ಬಗೆಹರಿದಿಲ್ಲ. ಆಗಾಗ ಬರ್ಫವನ್ನು ಕೆತ್ತಿದರೆ ಈ ನಗರ ಹತ್ತು ವರ್ಷ ತಡೆದೀತು ಎಂದು ಅವರು ಎಣಿಸಿದ್ದಾರೆ. ಆ ಮೇಲೆ ಅದನ್ನು ಪುನಃ ಹೊಸತಾಗಿಯೆ ಕಟ್ಟಿದಂತೆ ಮಾಡಿಕೊಳ್ಳಬೇಕಾಗುವುದು.

ಈ ಬರ್ಫ ನಗರದಲ್ಲಿ ಶೇಖರಿಸುವ ಸಲಕರಣೆಗಳು ಜಂಗು (ತುಕ್ಕು) ತಿನ್ನುವುದಿಲ್ಲ. ಆಹಾರವು ಹಾಳಾಗುವುದಿಲ್ಲ. ಕ್ಯಾಂಪ್ ಸೆಂಚುರಿಯನ್ನು ಕಟ್ಟಿದ ವಿಧಾನದಿಂದ ಬೃಹತ್ ಗುದಾಮುಗಳನ್ನು ಬರ್ಫದ ಅಡಿಯಲ್ಲಿ ಕಟ್ಟಬಹುದೆಂದೂ ಮುಂದಿನ ಪೀಳಿಗೆಯವರಿಗೆ ಬರಗಾಲ ಸಮಯದಲ್ಲಿ ಉಪಯೋಗಕ್ಕೆ ಬರುವಂತೆ ಅಲ್ಲಿ ಆಹಾರ ಸಾಮಗ್ರಿಯನ್ನು ಇಡಬಹುದೆಂದೂ ವಿಜ್ಞಾನಿಗಳು ಹೇಳುತ್ತಾರೆ.

ಈ ನಗರವನ್ನು ಕಟ್ಟುವ ಉದ್ದೇಶವೇನು? ಆಹಾರಾದಿಗಳ ಸಂಗ್ರಹದ ಮಾತು, ಖಂಡಾಂತರ ಅಸ್ತ್ರಗಳನ್ನು ಹಾರಿಸುವ ಮಾತು-ಇವಂತೂ ಆಯಿತು. ಜೊತೆಗೆ ಇದು ಹಿಮ ಮತ್ತು ಬರ್ಫದ ಗುಣ-ಧರ್ಮಗಳನ್ನು ಅಭ್ಯಸಿಸಲು ಅತ್ಯಂತ ಅನುಕೂಲವಾದ ಪ್ರಯೋಗಶಾಲೆಯಾಗುವುದು. ಹವೆಯ ಮೇಲೆ ಇವುಗಳ ಪರಿಣಾಮ ಹೇಗಾಗುವುದು ಎಂದು ಅಭ್ಯಸಿಸಬೇಕಾದುದು ಅಗತ್ಯವಿರುವಂತೆ ಇಲ್ಲಿ ಪಡೆದ ಅನುಭವಗಳ ಉಪಯೋಗವನ್ನು ಇದೀಗ ಪ್ರಯಾಣಸಾಧ್ಯವಾಗಿ ಮಾಡಿಕೊಂಡಿರುವ ಅಂಟಾರ್ಕ್ಟಿಕ್ (ದಕ್ಷಿಣ-ಧ್ರುವ) ಪ್ರದೇಶದಲ್ಲೂ ಮಾಡಿಕೊಳ್ಳಬಹುದಾಗಿದೆ.

೭,೦೮,೦೦೦ ಚದುರ ಮೈಲು ವಿಸ್ತಾರವಾಗಿ ಎರಡು ಮೈಲು ದಪ್ಪನಾಗಿರುವ ಬರ್ಫಾಚ್ಛಾದಿತ ಪ್ರದೇಶ ಗ್ರೀನ್‌ಲ್ಯಾಂಡ್. ಜಗತ್ತಿನ ಉತ್ತರಾರ್ಧದ ಹೆಚ್ಚಿನ ಪ್ರದೇಶದ ಹವಾಮಾನ ಬದಲಾವಣೆಗಳಿಗೆ ಇದೇ ತವರುಮನೆ. ಯುಗಯುಗಾಂತರದಿಂದ ಶೇಖರವಾಗಿರುವ ಬರ್ಫದ ಹಾಳೆಯನ್ನು ಕೊರೆದು ಅದರ ಕಣಗಳ ಪರೀಕ್ಷೆಯಿಂದ ವಿಜ್ಞಾನಿಗಳು ಸಾವಿರಾರು ವರ್ಷಗಳಿಂದಾದ ಹಿಮ ವರ್ಷದ ಬಗ್ಗೆ ಮಾಹಿತಿಯನ್ನೂ ವಾಯುವಿನ ಚಲನವಲನದ ಇತಿಹಾಸವನ್ನೂ ಪಡೆಯಬಹುದಾಗಿದೆ. ಈ ಮಾಹಿತಿಯ ಬಲದಿಂದ ನಾವು ಮುಂದಿನ ಹವಾಮಾನ ಚಕ್ರದ ಸ್ವರೂಪವನ್ನು ಬಹುಮಟ್ಟಿಗೆ ಸರಿಯಾಗಿ ಭವಿಷ್ಯ ಹೇಳಲು ಸಾಧ್ಯವಾಗುವುದು ಎಂದು ಅಮೇರಿಕನ್ ಸೈನ್ಯಶಾಖೆಯ ಹಿಮ, ಬರ್ಫ, ಮಂಜು ವಿಜ್ಞಾನಿ ಡಾ. ಹೆನ್ರಿ ಬೇಡರ್ ಹೇಳಿದ್ದಾರೆ.

೧೮೮೩ ರಲ್ಲಿ ಡಚ್ ಈಸ್ಟ್ ಇಂಡೀಸ್‌ನಲ್ಲಿ ಸಂಭವಿಸಿದ ಕ್ರಕಟೋವಾ ಜ್ವಾಲಾಮುಖಿ ಸ್ಫೋಟದಲ್ಲಿ ಹಾರಿ ಜಗತ್ತನ್ನು ವ್ಯಾಪಿಸಿದ ಧೂಳು ಇಲ್ಲಿ ೧೬೦ ಅಡಿ ಆಳದ ಬರ್ಫದ ಕಣಗಳಲ್ಲಿ ಕಾಣಸಿಕ್ಕಿದೆ. ಅಂದರೆ ಶತಮಾನಗಳ ಹಿಂದಿನ ಹವಾಮಾನದ ಕುರುಹುಗಳು ಇಲ್ಲಿ

ನಿಕ್ಷೇಪ ಹೊಂದಿವೆಯೆಂದಾಯಿತು. ಆದ್ದರಿಂದ ೧೮ನೇ ಶತಮಾನದಲ್ಲಿ ಜರುಗಿದ ಔದ್ಯಮಿಕ ಕ್ರಾಂತಿಯ ಫಲವಾದ ಮನುಷ್ಯ ನಿರ್ಮಿತ ಕಾರ್ಬಾನೆ ಇತ್ಯಾದಿಗಳ ಹೊಗೆಮಂಜಿನಿಂದ ಹವೆಯ ಮೇಲೆ ಎಷ್ಟು ದುಷ್ಪರಿಣಾಮವಾಗಿದೆ ಯೆಂದು ಇಲ್ಲಿ ಪರೀಕ್ಷೆ ನಡೆಸಲಿದ್ದಾರೆ. ಪ್ರತಿ ವರ್ಷ ಇಲ್ಲಿ ಕೂಡುವ ಮೂರು ಅಡಿ ಬರ್ಫದ ಸ್ತರದಲ್ಲಿ ಹಿರೊಶಿಮಾದಲ್ಲಿ ಪರಮಾಣು ಬಾಂಬು ಬಿದ್ದ ನಂತರದಲ್ಲಿ ಪ್ರತಿವರ್ಷ ಹವೆಯಲ್ಲಿ ಲೀನವಾಗುತ್ತಿರುವ ಪರಮಾಣುವಿಕಿರಣದ ( atomic fallout ) ದಾಖಲೆಯಿದೆ. ಗಿಡದ ಆಯುಸ್ಸನ್ನು ಅದರ ಮೇಲಿನ ವರ್ತುಲ ಗಳಿಂದ ಹೇಳಬಹುದಾದಂತೆ ಬರ್ಫದ ಸ್ತರಗಳ ಮೇಲಿಂದ ಅವು ಯಾವ ಯಾವ ವರ್ಷದವು ಎಂದು ಹೇಳಬಹುದಾಗಿದೆ.

ಆಗಲೆ ೧,೦೦೦ ವರ್ಷ ಹಿಂದಿನ ಬರ್ಫದ ಮಾದರಿಗಳನ್ನು ವಿಜ್ಞಾನಿಗಳು ಇಲ್ಲಿ ಹೊರ ದೆಗೆದಿದ್ದಾರೆ. ಕ್ಯಾಂಪ್ ಸೆಂಚುರಿಯಲ್ಲಿ ಅವರು ೧೦,೦೦೦ ಅಡಿ ಆಳದ ವರೆಗೆ ಬರ್ಫವನ್ನು ಕೊರೆದು ನೋಡಬಲ್ಲೆವು ಎಂದು ಆಶಿಸಿದ್ದಾರೆ. ಆಗ ಅವರಿಗೆ ಶಿಲಾಯುಗದ ಮಾನವನಿಗಿಂತಲೂ ಹಿಂದಿನ ಕಾಲದ ಬರ್ಫದ ಸ್ತರ ಎಟುಕಬಹು ದಾಗಿದೆ. *

By permission of Readers Digest, Pleasantville, New York



## ಸಮಸ್ಯೆ

ನವ ವಿವಾಹಿತ ಯುವಕ, ಮಿತ್ರನಿಗೆ: "ಮಹಾರಾಯಾ, ತುಂಬಾ ಪೇಚಾಟಕ್ಕೆ ಸಿಕ್ಕಿದ್ದೇನೆ. ಇನ್ನೂ ನಮಗೆ ಇರಲಿಕ್ಕೆ ಮನೆ ಸಿಕ್ಕಿಲ್ಲ."

ಮಿತ್ರ: "ಮಾವನ ಮನೆಯಲ್ಲೆ ಇರಲ್ಲ, ದೊಡ್ಡ ಮನೆ ಇದೆ ಅವರಿಗೆ."

ನವ ವಿವಾಹಿತ: "ಅದೇ ಕಷ್ಟ. ನನ್ನ ಮಾವ ಸ್ವತಃ ತನ್ನ ಮಾವನ ಮನೆಯಲ್ಲೆ ಇದ್ದಾನೆ."

## ಮನದ ಮಾತು

"ಹೌದು, ನಾನು ಮನದ ವಿಚಾರಗಳನ್ನು ಚೆನ್ನಾಗಿ ತಿಳಿಯಬಲ್ಲೆ. ಎರಡನೆ ಯವರ ಮನಸ್ಸಿನಲ್ಲಿ ಏನು ನಡೆದಿದೆಯೆಂದು ಅಕ್ಷರಶಃ ಹೇಳಬಲ್ಲೆ" ಎಂದ ಆ ಜಂಭದ ಗೃಹಸ್ಥ.

"ಓ! ಹಾಗಾದರೆ ನೀವು ನನ್ನನ್ನು ಕ್ಷಮಿಸಬೇಕು" ಎಂದ ಅವನ ಮಾತುಗಳಿಂದ ಬೇಸತ್ತು ಆಕಳಿಸುತ್ತಿದ್ದ ಗೃಹಸ್ಥ.

## ಸೂಕ್ತ ಉಪಾಯ

"ಅಲ್ರಿ, ಪತ್ರಿಕೆಯಿಂದ ಅದಾವ ಸುದ್ದಿ ಕತ್ತರಿಸುತ್ತಿರುವಿರಿ ?"

"ನ್ಯೂಯಾರ್ಕಿನಲ್ಲಿ ಒಬ್ಬಾತನಿಗೆ ಅವನ ಹೆಂಡತಿ ಅವನ ಕಿಸೆಯಲ್ಲಿ ಕೈಹಾಕಿ ಅಲ್ಲಿರುವುದನ್ನು ತೆಗೆದುಕೊಳ್ಳುತ್ತಿದ್ದಳೆಂಬ ಕಾರಣಕ್ಕಾಗಿ ವಿವಾಹ ವಿಚ್ಛೇದನಕ್ಕೆ ಅಪ್ಪಣೆ ದೊರೆಯಿತಂತೆ. ಆ ಸುದ್ದಿಯು...."

"ಯಾಕೆ?"

"ಅದನ್ನು ನನ್ನ ಕಿಸೆಯಲ್ಲಿ ಇಡಬೇಕೆಂದಿದ್ದೇನೆ."



# ಟಾರ್--ಟಿ ಎಂಬ ಹುಲಿಮರಿ

ಥಾ ದರ್ ಸ್ವೆ
ಅವರ ಬರ್ಮೀ ಕಥೆ

ಕಿವಿ ಗಡಚಿಕ್ಕುವಂತೆ ಸಪ್ಪಳ ಮಾಡುತ್ತ ಗುಂಡು ಹಾರಿತು. ದೂರದ ಗುಡ್ಡಗಳಿಂದ ಪ್ರತಿಧ್ವನಿ ಬಂತು. ಕೆಲ ನಿಮಿಷಗಳ ವರೆಗೆ ನಾವು ಮುಖವನ್ನು ಮುಚ್ಚಿಕೊಂಡೆವು. ಮುಖ ಮೇಲಕ್ಕೆತ್ತಿ ನೋಡುವ ಧೈರ್ಯ ನಮಗಾದಾಗ, ತಂದೆ ಬಂದೂಕನ್ನು ತಿರಸ್ಕಾರದಿಂದ ದೂರ ಚೆಲ್ಲಿ ನಿಂತುಕೊಂಡಿದ್ದರು. ಅವರ ನಿಶ್ಚಲ ದೃಷ್ಟಿ ರಕ್ತದ ಮಡುವಿನಲ್ಲಿ ಬಿದ್ದುಕೊಂಡಿದ್ದ ಟಾರ್ ಟಿಯ ಮೇಲಿತ್ತು. ಟಾರ್ ಟಿಗೆ ಆದ ಗಾಯದಿಂದ ರಕ್ತ ಚಿಮ್ಮುತ್ತಲೇ ಇತ್ತು.

ತಂದೆ ಮೊಣಕಾಲೂರಿ ಕುಳಿತು ನಿರ್ಜೀವವಾಗಿದ್ದ ಆದರೆ ಇನ್ನೂ ಬೆಚ್ಚಗಿದ್ದ ಟಾರ್ ಟಿಯ ದೇಹವನ್ನು ಅಪ್ಪಿಕೊಂಡರು. ತಮ್ಮ ಮುಖವನ್ನು ಟಾರ್ ಟಿಯ ಮುಖಕ್ಕೆ ಆನಿಸಿದರು. ತಂದೆ ಆಗ ಅತ್ತರೊ ಇಲ್ಲವೊ ಹೇಳಲಾರೆವು. ಆದರೆ ಅವರ ಪುಷ್ಟವಾದ ಬೆನ್ನು ಥರಥರ ಕಂಪಿಸುತ್ತಿದ್ದುದನ್ನು ಮಾತ್ರ ಕಂಡೆವು.

ನಾವೆಲ್ಲ ಮಂಕು ಹಿಡಿದವರಂತೆ ನಿಂತಿದ್ದೆವು. ಏನಾಯಿತೆಂದು ವಿಚಾರಿಸಲು ನೆರೆಹೊರೆಯವರು ಓಡಿ ಬಂದರು. ನಡೆದದ್ದನ್ನು ಕಂಡು ಅವರಿಗೆ ಆಘಾತವಾಯಿತು. ನಮಗೆಲ್ಲ ಒಂದು ಯುಗವೇ ಕಳೆಯಿತು ಎಂದೆನಿಸುತ್ತಿದ್ದಾಗ ತಂದೆ ಟಾರ್-

ಟಿಯ ಮುಖವನ್ನು ತನ್ನ ಅಂಗೈಗಳಲ್ಲಿ ಬಹು ಮೃದುವಾಗಿ ಹಿಡಿದುಕೊಂಡರು. ಅವರ ಮುಖ ಕೆಂಪು ಕೆಂಪಾಗಿತ್ತು. ಹಣೆಯ ಮೇಲಿನ ನರಗಳು ಇನ್ನೇನು ಒಡೆದುಹೋಗುವುವೊ ಎಂಬಂತೆ ದಪ್ಪವಾಗಿ, ಬಡಿದುಕೊಳ್ಳುತ್ತಿದ್ದವು. ಆತ ಅವಡುಗಚ್ಚಿ ಪ್ರಯಾಸದಿಂದ ಉಗುಳು ನುಂಗಿದರು. ಆತ ಅಮ್ಮನನ್ನು ಕರೆದು "ಮಾಯಿ, ಆತನನ್ನು ಆ ಹೊಸ ಕಂಬಳಿಯಲ್ಲಿ ಸುತ್ತಿ ಆ ಗಿಡಗಂಟಿಯ ಬುಡದಲ್ಲಿ ಹೂಳಿಬಿಡು. ಟಾರ್ ಟಿಯ ವಸ್ತುಗಳನ್ನೆಲ್ಲ ಜೊತೆಗೇ ಹೂಳು. ಒಂದು ಗುರುತೂ ಸಿಕ್ಕದಂತೆ ಮಾಡು. ನಾನು ತಿರುಗಿ ಬರುವ ಮೊದಲೇ ಎಲ್ಲ ಕೆಲಸ ಮುಗಿದಿರಲಿ," ಎಂದು ಹೇಳಿದರು.

ದುಃಖಭಾರದಿಂದ ತಲೆ ತಗ್ಗಿಸಿಕೊಂಡು ಹೊರಟು ಹೋದ ತಂದೆಯನ್ನು ಅನುಸರಿಸಿದ ಅಮ್ಮನ ಕಣ್ಣುಗಳು ಸಹಾನುಭೂತಿಯಿಂದ ತೇವಗೊಂಡಿದ್ದವು. ಅವಳು ಸಾವಕಾಶವಾಗಿ ತಲೆಯಲ್ಲಾಡಿಸಿದಳು.

* * *

ಬ್ರಿಟಿಶರ ಆಳಿಕೆಯ ಕಾಲದಲ್ಲಿ ತಂದೆ ಅಮೇರಿಕನ್ ಮಿಶನ್ ಶಾಲೆಯೊಂದರ ಪ್ರಿನ್ಸಿಪಾಲರಾಗಿದ್ದರು. ನಾವೆಲ್ಲರೂ ಸುಖದಿಂದಿರಲು, ನಮಗೆಲ್ಲರಿಗೂ ಉತ್ತಮ ಶಿಕ್ಷಣ ಕೊಡಿಸಲು ಸಾಲುವಷ್ಟು ಸಂಬಳ ಅವರಿಗೆ ಸಿಗುತ್ತಿತ್ತು. ಅವರು ತಮ್ಮ ಮಕ್ಕಳನ್ನು ಪ್ರೀತಿಸುತ್ತಿದ್ದರೂ ಅತಿ ಮುದ್ದು ಮಾಡುವವರಾಗಿರಲಿಲ್ಲ. ನಮಗಂತೂ ಅವರು ತುಸು ಉಗ್ರರೂ ಕಠೋರರೂ ಎಂದೇ ಅನಿಸುತ್ತಿತ್ತು. ನಮಗೆ ಬೇಕಾದ್ದನ್ನು ಅವರು ಕೊಡಿಸುತ್ತಿದ್ದರು, ಅಗತ್ಯ ಬಿದ್ದಾಗ ಗದರಿಸುತ್ತಲೂ ಇದ್ದರು. ನಾವು ಅವರನ್ನು ಪ್ರೀತಿಸುತ್ತಿದ್ದೆವು, ಗೌರವಿಸುತ್ತಿದ್ದೆವು, ಅವರಿಗೆ ಅಂಜುತ್ತಿದ್ದೆವು. ಅವರ ವಿದ್ಯಾರ್ಥಿಗಳೂ ಅಷ್ಟೇ.

ಆದರೆ ತಂದೆಯ ಘನಗಾಂಭೀರ್ಯ ಟಾರ್ ಟಿ ಬಂದ ಮೇಲೆ ಮಾಯವಾಗಿತ್ತು. ಅವರು ಟಾರ್ ಟಿಯನ್ನು ಅಪ್ಪಿ ಮುದ್ದಾಡುತ್ತಿದ್ದರು. ಹುಚ್ಚಾಪಟ್ಟೆಯಾಗಿ ಬಾಲಭಾಷೆಯಲ್ಲಿ ಅದರೊಂದಿಗೆ ಮಾತಾಡುತ್ತಿದ್ದರು.

"ಹೊಟ್ಟೆಯ ಮಕ್ಕಳಿಗಿಂತಲೂ ಈ ಸಾಕು ಪ್ರಾಣಿಯನ್ನು ಹೆಚ್ಚಾಗಿ ಪ್ರೀತಿಸುತ್ತೀರಿ ನೀವು" ಎಂದರೆ ತಂದೆ ನಕ್ಕು "ಹೊಟ್ಟೆಕಿಚ್ಚಿನ ಹೆಂಗಸೇ, ಇಷ್ಟು ಕೂಡ ಹೇಗೆ ನಿನಗೆ ತಿಳಿಯುವುದಿಲ್ಲ? ನಮ್ಮ ಮಕ್ಕಳಿಗೆ ಮಮತೆಯ ತಂದೆ-ತಾಯಿಗಳು ಕೊಡಬಹುದಾದ ಪ್ರೀತಿ-ಆರೈಕೆಯೆಲ್ಲ ಸಿಗುತ್ತದೆ. ಆದರೆ ಟಾರ್ ಟಿಗೆ ಹಾಗಲ್ಲ. ಅದಕ್ಕೆ ಯಾರಿದ್ದಾರೆ ಹೇಳು? ನಾವು ಕೊಡಬಹುದಾದಷ್ಟು ಪ್ರೀತಿ- ಅದಕ್ಕೆ ಅಗತ್ಯವಿದೆ. ಟಾರ್ ಟಿಯಂಥವುಗಳನ್ನು ನಾವು ಹೆಚ್ಚು ಪ್ರೀತಿಸಬೇಕು" ಎನ್ನುತ್ತಿದ್ದರು.

ತಂದೆಗೆ ಒಂದೇ ಒಂದು ವಿಪರೀತ ಹುಚ್ಚಿತ್ತು —ಬೇಟೆಯಾಡುವುದು. ಬಿಡುವಿನ ಸಮಯವನ್ನೆಲ್ಲ ಅವರು ಅಡವಿಯಲ್ಲಿ ಕಳೆಯುತ್ತಿದ್ದರು. ಬೇಸಿಗೆಯ ದಿನಗಳಲ್ಲಿಯಂತೂ ಅವರು ಮನೆಯಲ್ಲಿರುತ್ತಿರಲೇ ಇಲ್ಲ. ತಮ್ಮ ಬೇಟೆಗಾರ ಮಿತ್ರರೊಡನೆ ಅಡವಿಗೆ ಹೋಗಿ, ತಿರುಗಿ ಬರುವುದು ಅಗತ್ಯವಾದಾಗಲೇ ಮರಳುತ್ತಿದ್ದರು.

ಮನೆಗೆ ಬರುವಾಗ ಅವರು ವಿಜಯಿ ವೀರರಂತೆ ಬರುತ್ತಿದ್ದರು. ತಾವು ಕೊಂದ ಪ್ರಾಣಿಗಳ ಚರ್ಮ, ಕೋಡು, ದಂತಗಳನ್ನು ತರುತ್ತಿದ್ದರು. ಅವುಗಳಲ್ಲಿ ಪ್ರತಿಯೊಂದರ ಬೇಟೆಯ ಕಥೆಯೂ ಅದ್ಭುತವಾಗಿರುತ್ತಿತ್ತು, ರಮ್ಯವಾಗಿರುತ್ತಿತ್ತು. ಕೆಲವು ಸಲ ನಾವು ಸಾಕಿ ಸಂತೋಷಪಡಲೆಂದು ಅವರು ಚಿಕ್ಕ ಪ್ರಾಣಿಗಳನ್ನಾಗಲಿ, ಹಕ್ಕಿಗಳನ್ನಾಗಲಿ ಹಿಡಿದು ತರುತ್ತಿದ್ದರು. ನಮ್ಮ ಈ ಜೀವಂತ ಆಟಿಗೆ ಮೊಲ, ಗಿಳಿ, ಗೂಗೆಗಳೊಡನೆ ನಾವು ಚಿನ್ನಾಟವಾಡಿ ಸಂತೋಷಭರಿತರಾಗುತ್ತಿದ್ದೆವು.

ಒಮ್ಮೆ ಅವರು ಒಂದು ಮಂಗನ ಮರಿಯನ್ನು ತಂದಿದ್ದರು. ಅದನ್ನು ತಾವು ಹಿಡಿದ ರೀತಿಯನ್ನು ಅವರು ಬಣ್ಣಿಸಿ ಹೇಳಿದಾಗ ನಮಗೆ ಮಂಗ

ಮತ್ತು ಮನುಷ್ಯರ ಸ್ವಭಾವ ಸಾಮ್ಯವನ್ನು ಕಂಡು ಅಚ್ಚರಿಯಾಯಿತು.

ತಂದೆ ಹುಲಿ ಹೊಡೆಯಲು ಹೋಗಿದ್ದರು. ದಟ್ಟವಾದ ಕತ್ತಲಿನ ಅರಣ್ಯದಲ್ಲವರು ಒಂದು ಮರದ ಕೆಳಗೆ ಕುಳಿತಿದ್ದರು. ಮೇಲೆ ಮಂಗ ಕುಟುಂಬವೊಂದಿತ್ತು. ತಂದೆ ಮಂಗ, ತಾಯಿ ಮಂಗ ಮತ್ತು ಮರಿಮಂಗ ಒಂದು ಮರದಿಂದ ಇನ್ನೊಂದಕ್ಕೆ ಹಾರಲು ಅಣಿಯಾಗಿದ್ದವು. ತಂದೆ ಮಂಗ ಆಚೆ ಮರಕ್ಕೆ ಜಿಗಿದು ತಾಯಿ ಮಂಗ ನನ್ನು ಕರೆಯಿತು. ತಾಯಿ ತನ್ನನ್ನವಚಿಕೊಂಡು ಕುಳಿತಿದ್ದ ಮರಿಯನ್ನು ಕೈಯಾಡಿಸಿ ಗಟ್ಟಿಯಾಗಿ ಹಿಡಿದುಕೊಂಡಿದೆಯೆ ಎಂದು ನೋಡಿಕೊಂಡು ಹಾರಿತು. ಅವುಗಳ ಜಿಗಿತವನ್ನು ನೋಡುತ್ತ ಕುತೂಹಲ ಪಡುತ್ತಿದ್ದವರ ಬಾಯಿಂದ ಹಾ ಎಂಬ ದನಿ ಹೊರಟಿತು ಹಿಡಿತ ತಪ್ಪಿ ಮರಿಮಂಗ ನೆಲಕ್ಕೆ ಬಿದ್ದಿತ್ತು. ಗಂಡು ಮಂಗನಿಗೆ ರೌದ್ರಾ ವೇಶವೇ ಬಂತು ಅದು ಒಂದು ಟೊಂಗೆ ಮುರಿದು ಹೆಂಡತಿಯನ್ನು ಚೆನ್ನಾಗಿ ಥಳಿಸಿತು. ಆದರೆ ಬೇಟೆ ಯಿಂದ ಮರಳುವಾಗಲೂ ಮರಿ ಬಿದ್ದಲ್ಲೇ ಇತ್ತು. ಹಾರುವಾಗ ಬಿದ್ದ ಮಂಗಗಳನ್ನು ಕಲಂಕ ಪ್ರಾಯವೆಂದು ಜಾತಿಯಿಂದ ಬಹಿಷ್ಕರಿಸ ಲಾಗುತ್ತದೆ.

ಆ ಮರಿಗೆ ಮಿಟು (ಕಾಳಿ) ಎಂದು ಹೆಸರಿಟ್ಟೆವು. ಮಿಟು ಬಲು ಜಾಣ ಮರಿಯಾಗಿತ್ತು. ತಂದೆ ಶಾಲೆಗೆ ಹೊರಡುವಾಗ ಅವರ ಸಾಮಾನು ಗಳನ್ನೆಲ್ಲ ತಂದುಕೊಡುತ್ತಿತ್ತು. ನಮ್ಮ ತಲೆಯೊಳಗಿನ ಹೇನನ್ನು ಹೆಕ್ಕುವುದು ಅದಕ್ಕೆಷ್ಟು ಪ್ರಿಯ ವಾಗಿತ್ತೆಂದರೆ ನಾವು ಬೇಡವೆಂದರೆ ಅದಕ್ಕೆಸಿಟ್ಟು ಬಂದು ನಮ್ಮ ತಲೆಗೆ ಏಟು ಹಾಕುತ್ತಿತ್ತು. ತಂದೆ ಬಯ್ದಾಗ ಬಾಗಿಲ ಮರೆಯಲ್ಲಿ ಅವಿತುಕೊಳ್ಳುತ್ತಿತ್ತು. ಮಿಟು ಮುಂದೆ ಮುದುಕಿಯಾಗಿ ಉಬ್ಬಸದ ವಿಕಾರದಿಂದ ಸತ್ತಿತು.

ಮತ್ತೊಮ್ಮೆ ಅವರು ಒಂದು ಗಾಯಗೊಂಡ ಕಾಡುಕೋಣವನ್ನು ಬೆಂಬತ್ತಿ ಹೋಗುತ್ತಿದ್ದಾಗ ಅವರಿಗೆ ಭೀಕರವಾದೊಂದು ಗರ್ಜನೆ ಕೇಳಿಸಿತು. ಅವರೂ ಅವರ ಮಿತ್ರರೂ ಆಗ ತಮ್ಮ ಕೊನೆಗಾಲ ಬಂತೆಂದೇ ಭಾವಿಸಿದರು. ಸಾಮಾನ್ಯವಾಗಿ ಗರ್ಜನೆಯೊಂದಿಗೇ ಹುಲಿ ತನ್ನ ಬೇಟೆಯ ಮೇಲೆ ಎರಗುತ್ತದೆ. ಆದರೆ ಹತ್ತಾರು ನಿಮಿಷಗಳು ಕಳೆದರೂ ಹುಲಿ ಬರಲಿಲ್ಲ. ಯಾವ ಗಿಡಗಂಟೆಯಿಂದ ಗರ್ಜನೆ ಬಂದಿತ್ತೊ ಅಲ್ಲಿ ಚಲನವಲನವೂ ಕಾಣಿಸಲಿಲ್ಲ. ಬೇಟೆಗಾರರು ಮುಂದೆ ಹೋಗಲು ಯತ್ನಿಸಿದಾಗ ಹುಲಿ ಗರ್ಜಿಸಲು ಅವರೆಲ್ಲ ಸುಮಾರು ಇಪ್ಪತ್ತು ನಿಮಿಷಗಳ ವರೆಗೆ ನಿಂತಲ್ಲಿಯೆ ನಿಶ್ಚಲರಾಗಿ ನಿಂತರು. ಬಹುಶಃ ಹುಲಿಗೆ ನಡೆದಾಡಲು ಬಾರದಷ್ಟು ಪೆಟ್ಟು ಬಿದ್ದಿರಬೇಕೆಂದೆಣಿಸಿ ಅವರು ಪರಸ್ಪರ ಸನ್ನೆ ಮಾಡಿಕೊಂಡು ಮೆಲ್ಲಗೆ ಆ ಗಿಡಗಂಟೆಯನ್ನು ಸುತ್ತುವರಿದು ನಿಂತುಕೊಂಡರು.

ಕರೇನ್ ಬೇಟೆಗಾರ ಸೀಟಿಯನ್ನೂದಿದೊಡನೆ ಗುಂಡು ಹಾರಿತು. ಭೀಕರ ಗರ್ಜನೆ, ಜೊತೆಗೆ ಭಾರವಾದ ವಸ್ತುವೊಂದು ನೆಲಕ್ಕಪ್ಪಳಿಸಿದ ಸದ್ದು ಕೇಳಿಸಿತು. ಆ ಕರೇನ್ ಬೇಟೆಗಾರನತ್ತ ಎಲ್ಲರೂ ಧಾವಿಸಿದಾಗ ಅವನಿಂದ ತುಸು ದೂರದಲ್ಲಿ ಹೆಣ್ಣು ಹುಲಿಯೊಂದು ಸತ್ತು ಬಿದ್ದಿರುವುದು ಕಾಣಿಸಿತು. ಗುಂಡು ಸರಿಯಾಗಿ ಹಣೆಗೆ ಬಡಿದಿತ್ತು. ಹುಲಿಯ ಮಗ್ಗುಲಲ್ಲಿ ಅದೇ ತಾನೇ ಜನ್ಮಿಸಿದ್ದ ಮರಿಯೊಂದು ಅಸಹಾಯವಾಗಿ ಬಿದ್ದುಕೊಂಡಿತ್ತು.

ಆಗ ಬೇಟೆಗಾರರಿಗೆ ಹುಲಿಯ ಸಂದಿಗ್ಧ ಅರಿವಾಯಿತು. ಅವರು ಬಂದಾಗ ಹುಲಿ ಹೆರಿಗೆಯ ಬೇನೆಯನ್ನನುಭವಿಸುತ್ತಿತ್ತು. ಸತ್ತು ಬಿದ್ದ ಹುಲಿ, ಆ ಮೇಲೆ ಆ ಮರಿಯ ಮೇಲೆ ತಂದೆ ಕಣ್ಣು ಹಾಯಿಸಿದರು. ಆ ನಿಮಿಷದಲ್ಲಿ ಅವರು ತಮ್ಮ ಜೀವಮಾನದ ಮಹಾನಿರ್ಧಾರವನ್ನು ಮಾಡಿದರು. ಅವರಿಗೆ ಅತ್ಯಂತ ಪ್ರಿಯವಾಗಿದ್ದ ಬೇಟೆಯ ದಿನಗಳು ಆ ನಿಮಿಷಕ್ಕೇ ಮುಗಿದು ಹೋದವು. ಅಷ್ಟು ಪಶ್ಚಾತ್ತಾಪವಾಗಿತ್ತವರಿಗೆ.

ತಾವು ನಿರ್ಗತಿಕನನ್ನಾಗಿ ಮಾಡಿದ್ದ ಆ ಮರಿಯ ಬಗ್ಗೆ ತಂದೆಯವರ ಅಂತಃಕರಣದಲ್ಲಿ ಅಪಾರ ಮಮತೆ, ಕರುಣೆ ಮೂಡಿದವು. ಅವರ ದನ್ನು ಮನೆಗೆ ತಂದು ಟಾರ್ ಟಿ ಎಂದು ಹೆಸರಿಟ್ಟು ಸಾಕಿದರು—ತಮ್ಮ ಹೊಟ್ಟೆಯ ಮಗುವಿಗಿಂತಲೂ ಹೆಚ್ಚು ಜೋಕೆಯಿಂದ. ಹುಲಿಯ ಮರಿ ಗ್ಲಾಕ್ಸೊ ಡಬ್ಬಿಗಳ ಮೇಲೆ ಬೆಳೆಯಿತು.

ಅಂದಿನಿಂದ ಅವರ ಜೀವನ ಬದಲಾಯಿಸಿತು. ಬೇಟೆಗಾಗಿ ಅವರು ಮನೆ ಬಿಟ್ಟು ಹೊರಡಲಿಲ್ಲ. ಕುಡಿಯುವುದನ್ನು ಬಿಟ್ಟರು. ಇದಕ್ಕಾಗಿ ಅಮ್ಮ ಟಾರ್ ಟಿಗೆ ಕೃತಜ್ಞಳಾಗಿದ್ದರೂ ಒಮ್ಮೊಮ್ಮೆ ಅಸೂಯೆ ಅವಳಲ್ಲಿ ಉಂಟಾಗುತ್ತಿತ್ತು. ಏಕೆಂದರೆ ತಂದೆ ತನ್ನ ಮಕ್ಕಳಿಗಿಂತಲೂ ಟಾರ್ ಟಿಯನ್ನೆ ಅಧಿಕವಾಗಿ ಪ್ರೀತಿಸುವಂತಿದ್ದರು.

ಟಾರ್ ಟಿ ಬೆಳೆಯಿತು. ತನ್ನ ನಡತೆಯಿಂದ ತಂದೆಯ ಒಲವನ್ನು ಹೆಚ್ಚೆಚ್ಚಾಗಿ ಗಳಿಸಿಕೊಂಡಿತು. ನಾಯಿಮರಿಯಂತೆ ಅದು ಅವರ ಹಿಂದೆ ಸುಳಿದಾಡುತ್ತಿತ್ತು. ತಂದೆ ಪಾಯಖಾನೆಗೆ ಹೋದಾಗಲೂ ಕೂಡ ಅವರ ಹಿಂದೆಯೆ ಹೋಗಿ ಬಾಗಿಲಲ್ಲಿ ಕಾಯ್ದು ಕೂಡ್ರುತ್ತಿತ್ತು. ತಂದೆ ಒಳಗೆ ಹೋಗಿ ಬಹಳ ಹೊತ್ತಾಯಿತು ಎಂದೆನಿಸಿದರೆ ಮುಂಗಾಲುಗಳಿಂದ ಬಾಗಿಲು ಕೆರೆದು ಕೂಗುತ್ತಿತ್ತು.

ತಂದೆ ಶಾಲೆಗೆ ಹೋದಾಗ ಅದನ್ನು ಸರಪಳಿಯಿಂದ ಕಟ್ಟಿ ಹಾಕುತ್ತಿದ್ದರು. ಮುಂಗಾಲ ಮೇಲೆ ತಲೆಯಿಟ್ಟು ಮಲಗಿಕೊಂಡು ಅದು ಯಾರಾದರೂ ಸಮೀಪಕ್ಕೆ ಬಂದಾಗ ತನ್ನ ಗತಿ ನೋಡಿರಿ ಎಂದು ಹೇಳುವಂತೆ ಕಣ್ಣು ಪಿಳುಕಿಸಿ ಕುಂಯಿಗುಡುತ್ತಿತ್ತು. ತನ್ನ ಪ್ರತಿಬಿಂಬವನ್ನು ಕಂಡು ಅದು ಅಂಜುವುದನ್ನು ನೋಡಲೆಂದು ನಾವು ಆಗಾಗ ಅದರ ಎದುರಿನಲ್ಲಿ ಕನ್ನಡಿಯಿಡುತ್ತಿದ್ದೆವು. ಪ್ರತಿಬಿಂಬ ಕಂಡೊಡನೆ ಅದು ನಾಲ್ಕು ಹೆಜ್ಜೆ ಹಿಂದೆ ಸರಿದು ಆಮೇಲೆ ಸಾವಕಾಶವಾಗಿ ಮುಂದೆ ಬರುತ್ತಿತ್ತು. ಕನ್ನಡಿಗೆ ತನ್ನ ಮೂಗು ತಾಗಿದಾಗ ಸಿಟ್ಟಿನಿಂದ ಗುರುಗುಡುತ್ತಿತ್ತು.

ತಂದೆಗೆ ಒಂದು ಆಟ ಅತಿ ಪ್ರಿಯವಾಗಿತ್ತು. ಅವರು ಚುಟುಕಿ ಬಾರಿಸಿ "ಟಾರ್ ಟಿ ಮಗೂ, ಎದ್ದು ನಿಲ್ಲು, ಮುಂದೆ ಬಾ" ಎಂದಾಗ ಟಾರ್ ಟಿ ಹಿಂಗಾಲುಗಳ ಮೇಲೆ ನಿಂತು ತೊನೆಯುತ್ತ ತಂದೆ ಇರುವಲ್ಲಿಗೆ ನಡೆದೇ ಬರುತ್ತಿತ್ತು. ಎಷ್ಟೋ ಸಲ ಅದು ಮುಗ್ಗುರಿಸಿ ಬೀಳುತ್ತಿತ್ತು. ಆಗ ತಂದೆ ಗಹಗಹಿಸಿ ನಗುತ್ತಿದ್ದರು.

ಎಷ್ಟೋ ಸಲ ತಂದೆ ತಮ್ಮ ಮೂಗನ್ನು ಟಾರ ಟಿಯ ಹೊಟ್ಟೆಗೆ ತಿಕ್ಕಿ ಕಚಕುಳಿಯಿಡುತ್ತಿದ್ದರು. ಟಾರ್ ಟಿ ತನ್ನ ಮೃದು ಅಂಗಾಲಿನಿಂದ ಅವರ ಮುಖವನ್ನು ಬದಿಗೆ ತಳ್ಳುತ್ತಿತ್ತು. ಈ ಆಟ ಕಂಡು ಅಮ್ಮ ಅಕ್ಕಸದಿಂದ ಏನಾದರೂ ಹೇಳಿದರೆ ತಂದೆ "ನಿನಗೇನು? ನಮ್ಮದು ನಿಃಸ್ವಾರ್ಥ ಪ್ರೇಮ ನಿನಗೇಕೆ ವೃಥಾ ಹೊಟ್ಟೆಕಿಚ್ಚು"? ಎನ್ನುತ್ತಿದ್ದರು. ಆಗ ಅಮ್ಮ ಮುನಿಸಿನಿಂದ "ಪ್ರಾಣಿಯ ಪ್ರೇಮದ ಬಗ್ಗೆ ಈ ದೊಡ್ಡ ದೊಡ್ಡ ಮಾತುಗಳು. . . ." ಎನ್ನುವರು.

ತಂದೆ ನಡುವೆಯೆ ಬಾಯಿ ಹಾಕಿ "ನಿನಗೆ ತಿಳಿಯದು. ಮನುಷ್ಯನ ಮಾನದಂಡದಿಂದ ಇದನ್ನು ಅಳೆಯಲಾಗದು. ನೀವೆಲ್ಲ ಪ್ರತಿಫಲಾಪೇಕ್ಷೆಯಿಂದ ಪ್ರೀತಿಸುತ್ತೀರಿ. ಟಾರ್ ಟಿ ಮತ್ತು ನಾನು ಹಾಗಲ್ಲ" ಎಂದುಬಿಡುತ್ತಿದ್ದರು.

ಹೀಗೆ ತಂದೆ ಮತ್ತು ಟಾರ ಟಿ ಸುಖದಿಂದಿದ್ದಾಗ—

ನಡೆಯಿತು ಆ ಘಟನೆ.

ತಂದೆ ಮತ್ತು ಟಾರ್ ಟಿ ಅಂದು ತೋಟದಲ್ಲಿ ಆಡುತ್ತಿದ್ದರು. ಆಗ ತಂದೆಯನ್ನು ಕಾಣಲು ಅವರ ಇಬ್ಬರು ಸ್ನೇಹಿತರೂ ಡಿಸ್ಟ್ರಿಕ್ಟ್ ಪೋಲೀಸ ಸುಪರಿಂಟೆಂಡೆಂಟರಾಗಿದ್ದ ಒಬ್ಬ ಇಂಗ್ಲಿಷ್ ಗೃಹಸ್ಥರೂ ಬಂದರು. ಈಗ ಒಂದೂವರೆ ಅಡಿ ಉದ್ದವಾಗಿ ಬೆಳೆದು ಕಾಡು ಬೆಕ್ಕಿನಂತೆ ಕಾಣುತ್ತಿದ್ದ ಟಾರ್ ಟಿ ತಂದೆಯ ಕಾಲುಬುಡದಲ್ಲಿ ಮಲಗಿ

ಕೊಂಡಿತು.

ಆ ಇಂಗ್ಲಿಷ್ ಗೃಹಸ್ಥರು ಆಶ್ಚರ್ಯದಿಂದ ಹುಬ್ಬೇರಿಸಿ ನುಡಿದರು: "ಎಲಾ, ನೀವು ಹುಲಿಯ ಮರಿ ಸಾಕಿದ್ದೀರಿ. ಅದು ಕಾಡು ಬೆಕ್ಕೆಂದೇ ಮೊದಲು ಭಾವಿಸಿದ್ದೆ." ತಂದೆ ನಕ್ಕರು. ಅವರ ಮಿತ್ರರು ಹುಲಿಯ ಮರಿ ಸಿಕ್ಕ ಕಥೆಯನ್ನು ಹೇಳಿದರು. ತಂದೆ ಅದನ್ನು ಎಷ್ಟು ಪ್ರೀತಿಸುತ್ತಾರೆಂದು ವಿವರಿಸಿದರು.

ಆದರೆ ಆ ಇಂಗ್ಲಿಷ್ ಗೃಹಸ್ಥರು ವ್ಯಂಗ್ಯವಾಗಿ ನಕ್ಕು ಹೇಳಿದರು: "ಈಗೇನೊ ಇದು ಸರಿ. ಆದರೆ ದೊಡ್ಡವಾದ ಬಳಿಕ ಇದು ಜನರನ್ನು ಪೀಡಿಸೀತು. ಸರಕಾರ ಇದನ್ನು ಇಟ್ಟುಕೊಳ್ಳಲು ಅಪ್ಪಣೆ ಕೊಡಲಿಕ್ಕಿಲ್ಲ. ಇದನ್ನು ಮೃಗಾಲಯಕ್ಕೆ ಕಳಿಸಬೇಕಾಗುವುದು."

ತಂದೆಯ ಹುಬ್ಬು ಗಂಟಿಕ್ಕಿತು: "ಈ ಮರಿ ಹುಟ್ಟಿವಾಗಿನಿಂದ ನಮ್ಮಲ್ಲಿ ಬೆಳೆದಿದೆ. ಜನರನ್ನು ಪೀಡಿಸುವಷ್ಟು ದುಷ್ಟತನ ಅದರಲ್ಲಿ ಉಂಟಾಗಲಿಕ್ಕಿಲ್ಲ. ನನ್ನಿಂದ.... ನನ್ನಿಂದ ಅದನ್ನು ಅಗಲುವುದಾಗದು" ಇಷ್ಟೆಂದು ಅವರು ತಮ್ಮ ಉದ್ವಿಗ್ನತೆಯನ್ನು ಮುಚ್ಚಿಟ್ಟುಕೊಳ್ಳಲು ನಗಚಾಟಿಕೆ ಮಾಡಿದರು: "ಅಧಿಕಾರಿಗಳು ಟಾರ್ ಟಿಯನ್ನು ಮೃಗಾಲಯಕ್ಕೆ ಕಳಿಸಿದರೆ ನಾನೂ ಅದರ ಜೊತೆ ಹೋಗುವೆ. ನನಗೆ ಅಲ್ಲಿರಲು ಅಪ್ಪಣೆ ಸಿಕ್ಕೀತೇ?"

ಎಲ್ಲರೂ ಈ ಮಾತಿಗೆ ನಕ್ಕರು. ಆ ಇಂಗ್ಲಿಷ್ ಗೃಹಸ್ಥರೂ ನಕ್ಕರು. ಆದರೆ ನಡುವೆಯೆ ಅದಕ್ಕೆ ತಡ ಹಾಕಿ, "ನೀವು ತುಂಬ ಜಾಗ್ರತರಾಗಿರಬೇಕು. ನಿಮ್ಮ ಮರಿ ನಿಮ್ಮನ್ನಾಗಲಿ, ನಿಮ್ಮ ಮನೆಯವರನ್ನಾಗಲಿ ಅಕಸ್ಮಾತ್ತಾಗಿ ಗಾಯಗೊಳಿಸಿದರೆ ಕೂಡಲೆ ನನಗೆ ವರದಿ ಮಾಡಬೇಕು" ಎಂದು ತಂದೆಗೆ ಹೇಳಿದರು.

ಮತ್ತೆ ನಕ್ಕಂತೆ ಮಾಡಿ ಅವರು, "ನೋಡಿ, ನಾವೆಲ್ಲ ಕಾನೂನನ್ನು ಗೌರವಿಸಬೇಕು. ನಮ್ಮ ನಿಮ್ಮಂಥವರು ಕಾಯದೆಯ ಮೇರೆಯೊಳಗೆ ಇರಬೇಕಾಗುವುದು. ಕಾಯದೆಭಂಗ ಮಾಡಿದರೆ ನಡೆಯದು. ಅಲ್ಲವೇ?" ಎಂದರು.

ಹೂಂ ಎನ್ನದೆ ತಂದೆಗೆ ವಿಧಿಯಿರಲಿಲ್ಲ. "ನನ್ನ ಮರಿ ಯಾರಿಗೂ ನೋವನ್ನುಂಟು ಮಾಡದು. ನೀವೆಂದಂತೆ ಅದು ಯಾರನ್ನಾದರೂ ಗಾಯಗೊಳಿಸುವ ವರೆಗೆ ನಾನದನ್ನು ಇಟ್ಟು ಕೊಳ್ಳಬಹುದಲ್ಲವೆ?"

ಪೋಲೀಸ್ ಸುಪರಿಂಟೆಂಡರು ಹೌದೆಂದರು.

ತಂದೆ ಮತ್ತು ಅವರ ಅತಿಥಿಗಳು ಹರಟೆ ಹೊಡೆಯತೊಡಗಿದರು. ಟಾರ್ ಟಿಗೆ ಬೇಸರ ಬರತೊಡಗಿತ್ತು. ತಂದೆ ಅದರೊಂದಿಗೆ ಚಿನ್ನಾಟವಾಡುವುದು ಸಾಧ್ಯವಿರಲಿಲ್ಲವಾದ್ದರಿಂದ ಅದನ್ನು ರಮಿಸಲೆಂದು ಅವರು ಅದಕ್ಕೆ ತಮ್ಮ ಕೈಯನ್ನು ನೆಕ್ಕಲು ಕೊಟ್ಟರು. ಹರಟೆಯಲ್ಲಿ ತಂದೆ ಹೆಚ್ಚೆಚ್ಚು ಮಗ್ನರಾದಂತೆಲ್ಲ ಅವರ ಗಮನವನ್ನು ತನ್ನತ್ತ ಸೆಳೆಯಲು ಟಾರ್ ಟಿ ಅವರ ಕೈಯನ್ನು ಇನ್ನಷ್ಟು ಬಲವಾಗಿ ನೆಕ್ಕತೊಡಗಿತು.

ಹುಲಿಯ ನಾಲಗೆ ಬಲು ಒರಟಾಗಿರುವುದರಿಂದ ತಾಯಿ ಹುಲಿ ಮರಿಗಳಿಗೆ ತನ್ನ ಮೊಲೆಯನ್ನು ಚೀಪಲು ಕೊಡುವುದೇ ಇಲ್ಲ. ಅದು ಎಲೆಗಳ ಮೇಲೆ ಹಾಲನ್ನು ಸುರಿದು ಮರಿಗಳಿಗೆ ನೆಕ್ಕಲು ಕೊಡುತ್ತದೆ. ಟಾರ್ ಟಿ ನೆಕ್ಕುತ್ತಿದ್ದಾಗ ಚರ್ಮ ಕೆರೆದಂತಾದ ಅನುಭವ ತಂದೆಗೆ ಬಂತು. ರಕ್ತದ ಹನಿಗಳು ಮೂಡಿ ಬರತೊಡಗಿದಾಗ ಟಾರ್ ಟಿ ಮೂಸಿ ನೋಡಿ ಮತ್ತೆ ನೆಕ್ಕತೊಡಗಿತು. ಒಮ್ಮೆಲೆ ಕೈಗೆ ವಿಪರೀತ ನೋವಾದಂತಾಗಲು ತಂದೆ ಅದನ್ನು ನೋಡಿದರು. ರಕ್ತ ಧಾರಾಳವಾಗಿ ಹರಿಯತೊಡಗಿತ್ತು. ಎಲ್ಲರೂ 'ಹಾ' ಎಂದರು.

ತಂದೆ ಅಂಜಿ ಆ ಇಂಗ್ಲಿಷ್ ಗೃಹಸ್ಥರ ಮುಖ ನೋಡಿದರು. ಅವರ ಮುಖದ ಮೇಲೆ ಅಂಥ ಹೆದರಿಕೆಯ ಕಳೆಯನ್ನು ನಾವು ಈ ಮೊದಲೆಂದೂ ನೋಡಿರಲಿಲ್ಲ. ಆ ಇಂಗ್ಲಿಷ್ ಗೃಹಸ್ಥರೋ ಕರ್ತವ್ಯನಿಷ್ಠ ಕಠಿನ ಸ್ವರದಲ್ಲಿ "ಎಂದಾದ

ರೊಮ್ಮೆ ಹೀಗಾಗಲೇಬೇಕಿತ್ತು. ನಾನು ಕಾಯದೆಯ ಸೇವಕ. ಅದನ್ನು ಗೌರವಿಸಲೇಬೇಕು. ನಾನು ಮನೆಗೆ ಹೋದೊಡನೆ ಜನರನ್ನು ಕಳಿಸಿಕೊಡುತ್ತೇನೆ. ಅವರೊಡನೆ ಮರಿಯನ್ನು ಕಳಿಸಿಕೊಡಿ. ಮನುಷ್ಯ ರಕ್ತದ ರುಚಿ ಹತ್ತಿದ ಮೇಲೆ ಹುಲಿ ಅದನ್ನೆಂದೂ ಮರೆಯುವುದಿಲ್ಲ. ಕಾಯದೆಯಂತೆ ಮೃಗಾಲಯವು ಮನುಷ್ಯ ರಕ್ತದ ರುಚಿ ಕಂಡ ಹುಲಿಯನ್ನು ಇಟ್ಟುಕೊಳ್ಳುವುದಿಲ್ಲವಾದರೂ ನನ್ನಿಂದಾದ ಪ್ರಯತ್ನ ಮಾಡುತ್ತೇನೆ," ಎಂದರು.

ತಂದೆಯ ತಲೆ ದುಃಖದಿಂದ ಬಾಗಿತು. "ಛೆ! ಛೆ. ಮೃಗಾಲಯದಲ್ಲಿ ಅದನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ. ಚಿಂತಿಸಬೇಡಿ. ನೀವು ಆಗಾಗ ಹೋಗಿ ನೋಡಿಕೊಂಡು ಬರಬಹುದು," ಎಂದು ಅವರ ಮಿತ್ರರು ಹೇಳಿದರು. ಆ ಇಂಗ್ಲಿಷ್ ಗೃಹಸ್ಥರಿಗೆ ತಿಳಿಯದಿರಲಿ ಎಂದು ತಂದೆ ಬ್ರಹ್ಮೀ ಭಾಷೆಯಲ್ಲಿ, "ನಿಮಗೆ ತಿಳಿಯದು. ಈ ಬಿಳಿ ಮಂಗನಿಗೆ ಮೊದಲಿಂದಲೂ ಈ ಮರಿಯ ಮೇಲೆ ವಕ್ರದೃಷ್ಟಿಯಿತ್ತು. ತಮ್ಮ ಕ್ರೂರ ವರ್ತನೆಯಿಂದ ಇವರು ನನ್ನ ಟಾರ್ ಟಿಯನ್ನು ಅದು ಮೃಗಾಲಯವನ್ನು ತಲುಪುವುದರೊಳಗೇ ಕೊಂದು ಬಿಡುತ್ತಾರೆ," ಎಂದರು. ಬಳಿಕ ಉಕ್ಕಿ ಬರುತ್ತಿದ್ದ ಅಳು ತಡೆದುಕೊಂಡು "ನನ್ನ ಪುಟ್ಟ ಮರಿಗೆ ಇನ್ನೊಂದು ಅವಕಾಶ ಕೊಡುವಿರಾ?" ಎಂದು ಆ ಇಂಗ್ಲಿಷ್ ಗೃಹಸ್ಥರನ್ನು ಕೇಳಿದರು.

"ಛೆ! ಕ್ಷಮಿಸಬೇಕು."

ತಂದೆ ಅವಡುಗಚ್ಚಿ ಅಮ್ಮನನ್ನು ಕೂಗಿ "ಮಾಯಿ, ಬಂದೂಕು ತಾ" ಎಂದರು. ಅವರ ಮಿತ್ರರು "ಛೆ! ಛೆ! ತನ್ನಿಂದಾಗುವುದನ್ನೆಲ್ಲ ಮಾಡುತ್ತೇನೆಂದು ಸಾಹೇಬರು ಹೇಳಿದ್ದಾರಲ್ಲ," ಎಂದರು.

"ಒಳ್ಳೆಯದನ್ನು ಮಾಡುವನೇ? ಆತ ಹಾಗೇನೂ ಹೇಳಿಲ್ಲ. ಬಿಳಿಯರು ವಿನಯದಿಂದ ಮಾತಾಡುವರಾದರೂ ಎಂದೂ ವಚನಬದ್ಧರಾಗುವುದಿಲ್ಲ. ನನ್ನ ಕೈಯಾರೆ ಉಣಿಸಿ ಬೆಳೆಸಿದ ನನ್ನ ಮರಿಯನ್ನು ಕ್ರೂರಿಗಳ ಕೈಗೆ ಹೇಗೊಪ್ಪಿಸಲಿ? ನಾವೇ ಅಗಲಿಕೊಳ್ಳುವುದು ವಾಸಿ. ಮುಗಿಸಿ ಬಿಡುತ್ತೇನೆ ಈ ಪ್ರಕರಣವನ್ನೊಮ್ಮೆ."

ಸಂಗತಿಯೇನೆಂದರಿಯದ ಅಮ್ಮ ಬಂದೂಕನ್ನು ತೆಗೆದುಕೊಂಡು ತೋಟಕ್ಕೆ ಬಂದಳು. ಕಣ್ಣಲ್ಲಿ ನೀರು ತುಂಬಿಕೊಂಡು ನಿಂತಿದ್ದ ತಂದೆ ಅದನ್ನು ಇಸಿದುಕೊಂಡು ಹುಲ್ಲಿನ ಮೇಲೆ ಹಾಯಾಗಿ ಅಡ್ಡಾಗಿದ್ದ ಟಾರ್ ಟಿಯನ್ನು ಕೊನೆಯದಾಗಿ ನೋಡಿದರು. ಹತ್ತುಹೆಜ್ಜೆ ಹಿಂದೆ ಸರಿದು ಚುಟಿಕಿಬಾರಿಸಿ "ಟಾರ್ ಟಿ, ಮಗು, ಎದ್ದು ನಿಲ್ಲು, ನಡೆದು ಬಾ," ಎಂದರು. ಆಜ್ಞಾಧಾರಕ ಮಗುವಿನಂತೆ ಟಾರ್ ಟೀ ಎದ್ದು ನಿಂತು ತೊನೆಯುತ್ತ ನಡೆದು ಬರತೊಡಗಿತು

ಗುಂಡು ಹಾರಿತು. ಸುತ್ತಲಿನ ಗುಡ್ಡಗಳಿಂದ ಬರುತ್ತಿದ್ದ ಪ್ರತಿಧ್ವನಿಗಳ ನಡುವೆ ತಂದೆಯ ಹೃದಯ ಶೋಕ ಸಂತಪ್ತವಾಗಿ ಭಗ್ನವಾಗಿ ಹೋಯಿತು. *

## ಸಂಸ್ಕೃತ ಹಾಸ್ಯ ಬಿಂದು

ಚಿತಾಂ ಪ್ರಜ್ವಲಿತಾಂ ದೃಷ್ಟ್ವಾ ವೈದ್ಯೋ ವಿಸ್ಮಯಮಾಗತಃ।
ನಾಹಂ ಗತೋ ನ ಮೇ ಭ್ರಾತಾ ಕಸ್ಯೇದಂ ಹಸ್ತಲಾಘವಮ್॥

ಸ್ಮಶಾನದಲ್ಲಿ ಚಿತೆ ಉರಿಯುವುದನ್ನು ಕಂಡು ವೈದ್ಯನಿಗೆ ವಿಸ್ಮಯವಾಯಿತು. "ಇವನಲ್ಲಿ ನಾನು ಹೋಗಿಲ್ಲ, ನನ್ನ ತಮ್ಮನೂ ಹೋಗಿಲ್ಲ, ಅಂದಮೇಲೆ ಇದು ಯಾರ ಕೈವಾಡವಾಗಿದ್ದೀತು?" ಎಂದು.

# ಹವಳದ ಮಹಾ ಶಿಲ್ಪ

ಅದು ಮಾನವನ ಯಾವ
ಶಿಲ್ಪವನ್ನೂ ಮೀರಿದ
ರಚನೆಯಾಗಿದೆ

ಪಾವೆಂ

ಅರಬಿ ಸಮುದ್ರದಲ್ಲಿ ಮಂಗಳೂರಿನಿಂದ ಪಶ್ಚಿಮಕ್ಕೆ ಇರುವ ಲಕ್ಕದೀವ್ ಮತು ತಿರುವನಂತಪುರದ ಪಶ್ಚಿಮಕ್ಕೆ ಇರುವ ಮಿನಿಕಾಯ್ ದ್ವೀಪಗಳ ಹೆಸರು ಕೇಳಿದ್ದೀರಾ? ಅವು ಭಾರತದ ಬೆಲೆಬಾಳುವ ಪ್ರದೇಶಗಳು. ನೀವು ಯುದ್ಧಶಾಸ್ತ್ರದಲ್ಲಿ ಆಸಕ್ತಿಯುಳ್ಳವರಾದರೆ ಅವುಗಳ ಸಾಮರಿಕ ಮಹತ್ವವನ್ನು ಮನಗಾಣುವಿರಿ. ಆದರೆ ಯುದ್ಧದಲ್ಲಿ ನಿಮಗೆ ರುಚಿ ಇಲ್ಲದಿದ್ದರೂ ನೀವು ಸಾಗರ ಮಧ್ಯದಲ್ಲಿ ಒಮ್ಮೆಲೆ ತಲೆಯೆತ್ತಿದ ನಂದನವನದ ತುಣುಕುಗಳಂತಿರುವ, ತೆಂಗಿನ ತೋಪುಗಳಿಂದ ಹರಿತ ರಮಣೀಯವಾದ ಈ

ವೃತ್ತಾಕಾರದ ದ್ವೀಪ ರಾಜಿಗಳ ವಿಷಯವನ್ನು ಅರಿತು ಬೆರಗಾಗಲೇಬೇಕು. ಏಕೆಂದರೆ ಅವು ನಿಸರ್ಗದ ಒಂದು ಅದ್ಭುತವಾಗಿವೆ. ಅವುಗಳನ್ನು ಕಟ್ಟಿದವು ಹವಳಗಳು. ಅಸಂಖ್ಯ ಕೋಟಿ ಹವಳ ಜೀವಿಗಳ ಅಸಂಖ್ಯ ಸಹಸ್ರ ತಲೆಮಾರುಗಳು ಜೀವ ತೆತ್ತು ಈ ದ್ವೀಪಗಳನ್ನು ಕಟ್ಟಿವೆ.

ಲಕ್ಕದೀವ್ ಅಥವಾ ಮಿನಿಕಾಯ್ ದ್ವೀಪಗಳಷ್ಟೇ ಪ್ರಪಂಚದ ಹವಳ ದ್ವೀಪಗಳಲ್ಲ. ಭೂಮಧ್ಯ ರೇಖೆಯ ಅಕ್ಕಪಕ್ಕದ ಸಾಗರ ಸಮುದ್ರಗಳಲ್ಲಿ ಯಾವನೋ ರಾವಣ ಅಪಹರಿಸಿ ಕೊಂಡೊಯ್ಯುತ್ತಿದ್ದ ಸೀತೆಯರ ಕಂಠದಿಂದ ಜಾರಿ ಬಿದ್ದ ವನಮಾಲೆಗಳಂತೆ ಎತ್ತೆತ್ತಲೂ ಕೆದರಿ ಬಿದ್ದಿವೆ ಈ ದ್ವೀಪಗಳು. ದಕ್ಷಿಣ ಶಾಂತ ಸಾಗರದಲ್ಲಿ ಇವು ಸಾವಿರಗಟ್ಟಳೆಯಲ್ಲಿವೆ. ಹಿಂದೂ ಸಾಗರದ ಹವಳ ದ್ವೀಪಗಳು ಅನಂತರ ಬರುತ್ತವೆ. ಅಟ್ಲಾಂಟಿಕ ಸಾಗರದಲ್ಲೂ ಕೆಲವು ಇವೆ. ಪ್ರತಿಯೊಂದರ ವಿಷಯದಲ್ಲೂ ಒಂದು ಮಾತು ಸತ್ಯ. ನಿಸರ್ಗ ಸೌಂದರ್ಯದಲ್ಲಿ ಅವುಗಳನ್ನು ಮೀರಿಸುವ ಸ್ಥಾನಗಳು ಪೃಥ್ವಿಯ ಮೇಲೆ ದುರ್ಲಭ. ಜೀವಕೋಟಿಯಿಂದ ನಿರ್ಮಿತವಾದ ಶಿಲ್ಪವೈಭವದಲ್ಲೂ ಅವುಗಳನ್ನು ಮೀರಿಸುವ ಉದಾಹರಣೆಗಳು ಅಷ್ಟೇ ದುರ್ಲಭ.

ಹವಳ ದ್ವೀಪಗಳ ಕಥೆ ಯುಗಯುಗಗಳಾಚೆ ಪ್ರಾರಂಭವಾಗುತ್ತದೆ. ಆಗ ಭೂಮಿ ಈಗಿನಂತಿರಲಿಲ್ಲ. ಸಾಗರಗಳಲ್ಲಿ ಅನೇಕಾನೇಕ ದ್ವೀಪಗಳಿದ್ದವು. ಸಾಗರತಳದ ಜ್ವಾಲಾಮುಖಿಗಳ ಒತ್ತಡದಿಂದ ಹೊಸ ದ್ವೀಪಗಳು ತಲೆಯೆತ್ತುತ್ತಿದ್ದವು, ಹಳೆಯವು ತಳ ಸೇರುತ್ತಿದ್ದವು. ಮತ್ತೆ ಹೊಸದಾಗಿ ಹುಟ್ಟಿದ ದ್ವೀಪಗಳು ಮೆಲ್ಲಮೆಲ್ಲಗೆ ಕೆಳಗಿಳಿದು ಸಾಗರ ಗರ್ಭವನ್ನು ಕಾಣುತ್ತಿದ್ದವು. ಆಸ್ಟ್ರೇಲಿಯದಂಥ ಮಹಾದ್ವೀಪಗಳೂ ಇದಕ್ಕೆ ಅಪವಾದವಾಗಿರಲಿಲ್ಲ. ಅವುಗಳ ಕರಾವಳಿಯ ದೊಡ್ಡ ಭಾಗಗಳು ಸಾವಕಾಶವಾಗಿ ತಗ್ಗುತ್ತ ಹೋಗಿ ನೀರೊಳಗೆ ಅಡಗಿದವು.

ನೂರಾರು ಶತಮಾನಗಳ ಹಿಂದೆ ಹೀಗೆ ಸಾಗರದಿಂದ ಮೇಲೆ ಹಣಿಕಿದ್ದ ಈ ಭೂಭಾಗಗಳ ಸುತ್ತ ಅತ್ಯಂತ ವಿಲಕ್ಷಣವಾದ ಜಂತುಗಳು ಬಂದು ಸೇರಿಕೊಂಡವು. ಅವುಗಳ ಹೆಸರು "ಪೊಲಿಪ್" ಅಥವಾ ಹವಳ ಜೀವಿಗಳು. ದ್ವೀಪಗಳಸುತ್ತಣ ಆಳವಾದ ಬೆಚ್ಚನ್ನನೀರಿನಲ್ಲಿ ನೆಲಕ್ಕೆ ಅಂಟಿಕೊಂಡು ಅವು ನಿಸರ್ಗದಲ್ಲೇ ಅತ್ಯಂತ ವರ್ಣಮಯವಾದ ರಚನೆಗಳಿಗೆ ಬುನಾದಿಯನ್ನು ಹಾಕಿದವು.

ಹವಳ ಜೀವಿಗಳು ಎಷ್ಟು ವಿಲಕ್ಷಣವಾಗಿವೆಯೆಂದರೆ, ಮಾನವನು ಸಾವಿರಾರು ವರ್ಷಗಳಿಂದ ಹವಳವನ್ನು ಬಲ್ಲನಾದರೂ ಅವುಗಳ ನಿಜಸ್ವರೂಪ ಅವನಿಗೆ ಅರ್ಥವಾದದ್ದು ಕಳೆದ ಶತಮಾನದಲ್ಲಿಯೆ. ಕಡವೆಯ ಕೋಡುಗಳಂತೆ ಕವಲು ಕವಲಾಗಿ, ಹೂವಿನಂತೆ ಎಸಳೆಸಳಾಗಿ, ನಾನಾ ಆಕಾರಗಳಲ್ಲಿ, ನಾನಾ ವರ್ಣಗಳಲ್ಲಿ ಗೋಚರವಾಗುವ ಹವಳ ಜೀವಿಯನ್ನು ಮನುಷ್ಯ ಒಂದು ವಿಧದ ಸಸ್ಯವೆಂದೇ ಬಗೆದಿದ್ದ. ಅದು ನಿಜವಾಗಿ ಹೈಡ್ರಾವರ್ಗಕ್ಕೆ ಸೇರಿದ ಒಂದು ಪ್ರಾಣಿಯೆಂದು ಈಗೊಂದು ಶತಮಾನದ ಹಿಂದೆ ತಾನೆ ಗೊತ್ತಾದದ್ದು.

ಹವಳದ ಪೊಲಿಪ್ ಬಲು ಸೂಕ್ಷ್ಮವಾದ ಪ್ರಾಣಿ. ಅದರ ಶರೀರವೆಂದರೆ ಒಂದು ಚಿಕ್ಕ ಮಾಂಸದ ನಳಿಗೆ ಮಾತ್ರ. ಮೇಲ್ಗಡೆ ಒಂದು ಬಾಯಿ ಮತ್ತು "ಮೀಸೆ"ಗಳು. ಆ ಬಾಯಿಂದಲೆ ಆಹಾರ ಸೇವನೆ, ಅದರಿಂದಲೆ ಮಲ ವಿಸರ್ಜನೆ; ಅದರಿಂದಲೆ ವೀರ್ಯ ಮತ್ತು ಅಂಡಗಳ ವಿಸರ್ಜನೆ. ಕೆಳಗಡೆ ಒಂದು ಪಾದುಕೆ. ಅದು ಯಾವುದಾದರೂ ಪದಾರ್ಥಕ್ಕೆ, ಹೆಚ್ಚಾಗಿ ಪೂರ್ವಜರ ಅವಶೇಷಕ್ಕೆ, ತಗಲಿಕೊಂಡಿರಬೇಕು.

ಪ್ರಾರಂಭಿಕ ಕೃಮಿ ಅವಸ್ಥೆಯಲ್ಲಿ ಕೆಲ ದಿನ ನೀರಲ್ಲಿ ಹೀಗೇ ತೇಲುತ್ತಿರುವುದನ್ನು ಬಿಟ್ಟರೆ ಹವಳ ಜೀವಿಗಳು ಜೀವಮಾನವೆಲ್ಲ ಸ್ಥಾವರ ಸ್ಥಿತಿಯಲ್ಲೆ ಕಳೆಯುತ್ತವೆ. ಆದರೆ ಅವುಗಳ

ಹಸಿವು ಅಪಾರವಾದದ್ದು. ಅವುಗಳ ಆಹಾರ ಪ್ಲಾಂಕ್ಟನ್ ಸಮುದ್ರ ಜೀವಿಗಳು ಅಂದರೆ, ಎಳೆ ಮೀನುಗಳು, ಹುಳಗಳು ಇತ್ಯಾದಿ. ತಮ್ಮ ವಿಷಯುಕ್ತ ಮೀಸೆಗಳಿಂದ ಕೊಳ್ಳಿಗಳನ್ನು ಚುಚ್ಚಿ ಸ್ತಬ್ಧಗೊಳಿಸಿ ಅವು ತಿನ್ನುತ್ತವೆ. ಸಮುದ್ರದಲ್ಲಿಳಿದು ಯಾವುದಾದರೊಂದು ಪದಾರ್ಥಕ್ಕೆ ತಗಲಿಕೊಂಡ ಮೇಲೆ ಅವು ತಮ್ಮ ಸುತ್ತ ಸುಣ್ಣಮಯವಾದ ಕಟ್ಟಿನಂಥ ಕವಚಗಳನ್ನು ಬೆಳೆಸಿಕೊಳ್ಳುತ್ತವೆ. ಪೋಲಿಪ್‌ಗಳು ಪ್ರಚಂಡವಾಗಿ ತಿಂದು ಪ್ರಚಂಡವಾಗಿ ಸಂತಾನ ವೃದ್ಧಿ ಮಾಡಿಕೊಳ್ಳುತ್ತವೆ; ಅಪಾಯ ಬಂದಾಗ ತಮ್ಮ ಕವಚದೊಳಗೆ ನುಸುಳಿಕೊಳ್ಳುತ್ತವೆ.

ಹವಳ ಜೀವಿಗಳು ಕೋಟಿಗಟ್ಟಳೆಯ ತಂಡಗಳಲ್ಲಿ ಬಾಳುತ್ತವೆ. ಒಂದಕ್ಕೊಂದು ತಗಲಿಕೊಂಡು ವೈವಿಧ್ಯಪೂರ್ಣವಾಗಿ ತಮ್ಮ ಸುಣ್ಣದ ರಚನೆಯನ್ನವು ನಿರಂತರವಾಗಿ ಕಟ್ಟುತ್ತವೆ. ಒಂದು ತಲೆಮಾರು ಮಡಿದಾಗ ಹೊಸ ತಲೆಮಾರಿನ ಕೋಟಿಗಟ್ಟಳೆ ಜೀವಿಗಳು, ತಮ್ಮ ಪೂರ್ವಜರ ಕಟ್ಟಡವನ್ನು ಊರ್ಧ್ವಮುಖವಾಗಿ ಬಹಿರ್ಮುಖವಾಗಿ ಮುಂದುವರಿಸುತ್ತವೆ. ಸತ್ತ ಪ್ರಾಣಿಗಳು ಬಿಟ್ಟ ಸುಣ್ಣದ ಅಸ್ಥಿಪಂಜರ ಸುಣ್ಣದ ಕಲ್ಲಾಗುತ್ತದೆ.

ಹವಳದ್ವೀಪ, ಹವಳದಂಡೆಗಳನ್ನು ಕಟ್ಟುವ ಪೋಲಿಪ್‌ಗಳು ಭೂಮಧ್ಯರೇಖೆಯ ಅತ್ತಿತ್ತ ೧,೮೦೦ ಮೈಲಿನೊಳಗೆ ಮಾತ್ರ ಬದುಕುತ್ತವೆ. ಅವಕ್ಕೆ ಬೆಚ್ಚನ ನೀರು ಬೇಕು, ಸ್ವಚ್ಛ ನೀರು ಬೇಕು. ಆದ್ದರಿಂದ ೬೮° ಫೆರನ್‌ಹೈಟಿಗಿಂತ ಕಡಿಮೆ ಉಷ್ಣತೆಯುಳ್ಳ ಸಮುದ್ರಗಳಲ್ಲಿ ಅವು ಇರುವುದಿಲ್ಲ. ಕೆಸರು, ಮಳಲು ಅವುಗಳಿಗೆ ಉಸಿರುಗಟ್ಟಿಸುತ್ತದೆ. ಅವಕ್ಕೆ ಸೂರ್ಯಪ್ರಕಾಶವೂ ಬೇಕು; ಅದರಲ್ಲಿ ಸುಣ್ಣವನ್ನುತ್ಪಾದಿಸುವ ಅಂಗವನ್ನು ಪ್ರಚೋದಿಸುವ ಆಲ್ಗಾ ಎಂಬ ದ್ರವ್ಯವಿದ್ದು ಅದು ಉತ್ತೇಜನಗೊಳ್ಳಬೇಕಾದರೆ ಸೂರ್ಯಪ್ರಕಾಶದಿಂದ ಸಾಧ್ಯವಾಗುವ ಫೋಟೋಸಿಂಥೆಸಿಸ್ ಕ್ರಿಯೆ ಬೇಕು. ಹೀಗಾಗಿ ಹವಳಜೀವಿ ೧೨೦-೧೫೦ ಅಡಿಗಿಂತ ಹೆಚ್ಚು ಆಳದಲ್ಲಿರಲರಿಯದು. ಅಲ್ಲದೇ ನೀರು ಸದಾ ಚಲಿಸುತ್ತಿರಬೇಕು. ಆಗ ಮಾತ್ರ ಅವಕ್ಕೆ ಬೇಕಾದ ಆಹಾರ ಸಮೃದ್ಧಿಯಾಗಿ ಅದರತ್ತ ತೇಲಿ ಬಂದೀತು.

ಸಾವಿರಾರು ವರ್ಷಗಳ ಹಿಂದೆ ತೊಡಗಿದ ಕಟ್ಟಡ ಸಾವಕಾಶವಾಗಿಯೆ ಮೇಲೇರುತ್ತಿತ್ತು. ಕೆಲವೇಳೆ ಅದು ವರ್ಷಕ್ಕೆ ಬಹಳವಾದರೆ ಮೂರಂಗುಲ ಮೇಲೇರುತ್ತಿತ್ತು. ಈ ದರದಲ್ಲಿಯೂ ಅವು ಕಟ್ಟುತ್ತಿದ್ದ ದಂಡೆ ನೀರಿನಿಂದ ಮೇಲೆ ತಲೆಯೆತ್ತಲು ೬೦೦ ವರ್ಷಗಳು ಸಾಕೆಂದು ನೀವೆಣಿಸಬಹುದು. ಇಲ್ಲ, ಅವುಗಳ ಪರಿಶ್ರಮ ಅಷ್ಟು ಬೇಗ ಮುಕ್ತಾಯವಾಗುವಂತಿರಲಿಲ್ಲ. ಕೆಲವು ಹವಳ ದ್ವೀಪಗಳ ತಳಕಟ್ಟು ೪,೦೦೦ ಅಡಿಗಳಷ್ಟು ಆಳದಲ್ಲಿದ್ದುದ್ದು ಕಂಡು ಬಂದಿದೆ.

ಕಾರಣ ಇಷ್ಟೆ. ಹವಳ ಜೀವಿಗಳು ತಮ್ಮ ಸೂರ್ಯಾಭಿಮುಖಿ ಪ್ರಯತ್ನದಲ್ಲಿ ಮಗ್ನವಾಗಿದ್ದಾಗ ಸಾಗರ ತಳ ಸಾವಕಾಶವಾಗಿ ಕೆಳಕೆಳಗಿಳಿಯುತ್ತಿತ್ತು (ಇಲ್ಲವೆ ಸಾಗರದ ನೀರು ಮೆಲ್ಲಮೆಲ್ಲನೆ ಏರುತ್ತಿತ್ತು). ಕೆಲವೊಮ್ಮೆ ಹತ್ತು ಶತಮಾನಗಳಲ್ಲಿ ಅದು ಮೂರಡಿಗಳಷ್ಟು ಇಳಿದು ಹೋಗಿರಬಹುದು. ಇಳಿದು ಹೋದ ತಳದ ಅಂಶ ತುಂಬಿಕೊಳ್ಳಲು ಹವಳ ಜೀವಿಗಳು ಹೆಚ್ಚು ಕಟ್ಟಬೇಕಾಗುತ್ತಿತ್ತು. ಆದರೆ ಇನ್ನೂ ಹೆಚ್ಚಿನ ಅನಾಹುತ ಕಾದಿತ್ತು. ಹವಳ ಜೀವಿಗಳು ಯಾವುದರ ಸುತ್ತ ತಮ್ಮ ದಂಡೆ ಕಟ್ಟುತ್ತಲಿದ್ದವೊ ಆ ದ್ವೀಪ ಭೂಗರ್ಭದ ಉತ್ಪಾತದೊಡನೆ ಸ್ಫೋಟಗೊಂಡು ಕೆಲ ಕಾಲ ಬಾಣ ಬಿರುಸುಗಳನ್ನು ಬಿಟ್ಟು ಸಾಗರದಲ್ಲಿ ಮುಳುಗಿ ಹೋಗುತ್ತಿತ್ತು. ಅದರೊಡನೆ ಹವಳ ದಂಡೆ ಕೂಡ.

ಮಾಜದಂಜದೆ ಹವಳ ಜೀವಿಗಳು ಮತ್ತೆ ಮೇಲೆ ಮೇಲೆ ಕಟ್ಟುತ್ತಲೇ ಹೋದವು. ಶತಮಾನಗಳು, ಸಹಸ್ರಮಾನಗಳು ಉರುಳಿದವು.

ಕೊನೆಗೊಂದು ದಿನ ಅವುಗಳ ಗಚ್ಚಿನ ಕೋಟೆಯ ಒಂದು ಕಂಬ ಸಾಗರದ ತರಂಗಗಳನ್ನು ಭೇದಿಸಿ ಬಿಸಿಲನ್ನು ಕಂಡಿತು. ಮತ್ತೆ ಕೆಲ ಶತಮಾನಗಳು ಗತಿಸಿದಾಗ ತೆಳ್ಳನ್ನ ದಂಡೆಯೊಂದು ಸಾಗರದ ನಡುವೆ ಎದ್ದು ನಿಂತಿತ್ತು. ತೇಲಿಹೋಗುತ್ತಿದ್ದ ಕಟ್ಟಿಗೆ ತುಂಡುಗಳು ಅದಕ್ಕೆ ತಗಲಿ ಸಿಕ್ಕಿಕೊಂಡು ಅಲ್ಲೇ ಕೊಳೆತವು. ಮಳಲು ಅದರ ಬಳಿ ಶೇಖರವಾಯಿತು. ಕೊನೆಗೆ ಸಾವಿರಾರು ಮೈಲು ದೂರದಿಂದ ತೇಲಿಬಂದ ಬೀಜ ಆ ದಂಡೆಯ ಎಡೆಯಲ್ಲಿ ಸಿಲುಕಿ ಮೊಳೆತು ಗಿಡವಾಯಿತು. ಆದರೆ ತೆರೆಗಳ ಹೊಡೆತಕ್ಕೆ ಅದು ಕೊಚ್ಚಿಕೊಂಡು ಹೋಯಿತು.

ಆದರೆ ಆಗಲೇ ಪವಾಡ ಪ್ರಾರಂಭವಾಗಿಹೋಗಿತ್ತು. ದಂಡೆಯ ಒಳಭಾಗದಲ್ಲಿ ಮಳಲು ತುಂಬುತ್ತಹೋಯಿತು. ಎಲ್ಲೋ ಜ್ವಾಲಾಮುಖಿಯಿಂದ ಉಕ್ಕಿ ಹರಿದು ಕಡಲಲ್ಲಿ ಕಲೆತ ಶಿಲಾಭಸ್ಮ ತೆರೆಗಳೊಡನೆ ಚಲಿಸುತ್ತ ಬಂದು ಅಲ್ಲಿ ತುಂಬಿಕೊಳ್ಳತೊಡಗಿತು. ಕೊನೆಗೊಂದು ದಿನ ದೂರದ ಯಾವುದೋ ಕರಾವಳಿಯಿಂದ ತೆಂಗಿನ ಕಾಯಿ ತೇಲಿಬಂದು ಅಲ್ಲಿ ಸಿಕ್ಕಿಕೊಂಡಿತು.

ಅತ್ತ ಸಾಗರದಲ್ಲಿ ಮುಳುಗಿದ್ದ ದ್ವೀಪದ ಸುತ್ತಲೂ ಏರುತ್ತಿದ್ದ ಇಡೀ ಕೋಟೆ ಈಗ ಕಡಲ ಮೇಲೇರಿ ನಿಂತಿತ್ತು. ಈಗ ಅನೇಕ ಮೈಲು ವಿಶಾಲವಾದ ವರ್ತುಲವೊಂದು ಕಾಣಿಸತೊಡಗಿ ಒಳಗಿನ ನೀರನ್ನು ಬೇರ್ಪಡಿಸಿತ್ತು. ಸಾಗರ ಗರ್ಭದಲ್ಲಿ ಹುದುಗಿದ ದ್ವೀಪವನ್ನು ಹವಳ ಜೀವಿಗಳು ಉದ್ಧರಿಸಿದ್ದವು. ಹವಳ ದ್ವೀಪವೊಂದು ತಲೆಯೆತ್ತಿತ್ತು.

ಒಳಗೆ ಸಿಕ್ಕಿಕೊಂಡ ನೀರೀಗ ಹೊಲಸಾದುದರಿಂದ ಆ ಭಾಗದಲ್ಲಿದ್ದ ಹವಳ ಜೀವಿಗಳು ಸತ್ತವು. ಆದರೆ ಹೊರಗಿನವು ತಮ್ಮ ಕಾರ್ಯವನ್ನು ಮುಂದುವರಿಸಿದವು. ಹವಳ ದಂಡೆ ಬಹಿರ್ಮುಖವಾಗಿ ವಿಸ್ತರಿಸಿತು. ಇನ್ನೊಂದು ಉತ್ಪಾತ ಈ ಪವಾಡವನ್ನು ಪೂರ್ತಿಗೊಳಿಸಿತು. ಸಾಗರ ತಳ ಉಬ್ಬಿದ್ದರಿಂದ ಇಡೀ ಹವಳ ದಂಡೆ ಹತ್ತಿಪ್ಪತ್ತು ಅಡಿ ಮೇಲೇರಿ ನಿಂತಿತು.

ಸಾಗರದ ಅಲೆಗಳು ಅಪ್ಪಳಿಸಿ ಹವಳದ ಕೋಟೆಯ ಕೆಲ ಭಾಗಗಳು ಮುರಿದು ಬಿದ್ದು ಹೊರಗಿನ ನೀರಿಗೆ ಒಳ ಬರಲು ಅಲ್ಲಲ್ಲಿ ಕಾಲುವೆಗಳಂತಾದವು. ಎತ್ತರವಿದ್ದ ಹವಳ ದಂಡೆಗಳ ಬದಿಗೆ ದ್ವೀಪಗಳೇ ಎದ್ದವು. ಅವುಗಳೆದುರಿಗೆ ಆಳವಿಲ್ಲದ ಲಗೂನ್ (ಜಲಾಶಯ). ಅದರ ಬಳಿ ತೆಂಗಿನ ಕಾಯಿಗಳು ಮೊಳೆತವು. ಕೆಲವೇ ಶತಮಾನಗಳಲ್ಲಿ ಸಾಗರದ ನಡುವೆ ವರ್ತುಲಾಕಾರದ ನಂದನವನ ಉದಯಿಸಿತ್ತು.

ಹವಳ ಜೀವಿಗಳು ರಚಿಸಿದ ಮಹಾ ಕಟ್ಟಡಗಳಲ್ಲೆಲ್ಲ ಪ್ರಚಂಡವಾದುದು ಆಸ್ಟ್ರೇಲಿಯದ ಪೂರ್ವ ದಂಡೆಯ ಆಚೆಗಿದೆ. ಅದಕ್ಕೆ ಕೊಟ್ಟ "ಮಹಾ ಪ್ರತಿಬಂಧ ದಂಡೆ" (Great Barrier Reef) ಎಂಬ ಹೆಸರು ಅನ್ವರ್ಥಕವಾಗಿದೆ. ೧,೨೬೦ ಮೈಲುದ್ದಕ್ಕೆ, ೫೦೦ ಅಡಿ ಎತ್ತರಕ್ಕೆ ಚಾಚಿದ ಈ ಹವಳ ದಂಡೆ ೮೦,೦೦೦ ಚದರ ಮೈಲು ವಿಸ್ತಾರವಾದ ಸಮುದ್ರಕ್ಕೆ ಕಟ್ಟು ಹಾಕಿದೆ. ಅದರ ಮುಂದೆ ಮಾನವನ ಕೃತಿಗಳು ಅಲ್ಪವಾಗಿ ಕಾಣುತ್ತವೆ. ಅದರ ದಕ್ಷಿಣ ಭಾಗದಲ್ಲಿ ನೀರು ತಂಪಾಗಿರುವುದರಿಂದ ಹವಳ ಜೀವಿಗಳಿಗೆ ಬೆಳೆಯಲು ಅನುಕೂಲವಿಲ್ಲದೆ ದಂಡೆ ಅಲ್ಲಲ್ಲಿ ಛಿದ್ರವಾಗಿ ಕಾಣುತದೆ. ಆದರೆ ಈಶಾನ್ಯದ ೫೦೦ ಮೈಲು ವಿಸ್ತಾರದಲ್ಲಿ ಅವಿಚ್ಛಿನ್ನವಾದ ಹವಳ ದ್ವೀಪಮಾಲೆ ಸಾಗರದಿಂದುದ್ಭವಿಸಿದ ಪರ್ವತ ಶ್ರೇಣಿಯಂತೆ ಹಬ್ಬಿ ಅದರ ಒಳ ಪಾರ್ಶ್ವದ ಸುದೀರ್ಘ ಲಗೂನನ್ನು ತೆರೆಗಳ ಭೈರವ ನೃತ್ಯದಿಂದ ಸಂರಕ್ಷಿಸುತ್ತದೆ. ಆಸ್ಟ್ರೇಲಿಯದ ಪೂರ್ವ ದಂಡೆಯಲ್ಲಿ ಈ ಲಗೂನ್‌ಗುಂಟ ನೌಕೆಗಳು ನಿರ್ಭಯವಾಗಿ ಸಾಗುತ್ತವೆ.

ಯುಗಯುಗಗಳ ಹಿಂದೆ ಈ ಪ್ರದೇಶ ಆಸ್ಟ್ರೇಲಿಯ ಖಂಡದ ಭಾಗವೇ ಇರಬೇಕು. ಆದರೆ

ಭೂಗರ್ಭದ ಬದಲಾವಣೆಗಳ ಫಲವಾಗಿ ಕರಾವಳಿ ಭೂಮಿ ಕುಸಿಯುತ್ತ ನೀರೊಳಗೆ ಸೇರಿ ಹೋಗಿ ಅಲ್ಲಲ್ಲಿ ದಿನ್ನೆಗಳಷ್ಟೇ ಮೇಲೆ ಉಳಿದವು. ಈ ದಿನ್ನೆಗಳ ಸುತ್ತ ಹವಳ ಜೀವಿಗಳು ತಮ್ಮ ಅನೂಚಾನವಾದ ರಚನಾಕರ್ಮವನ್ನು ನಡೆಸಿದವು. ಕೆಲವೊಮ್ಮೆ ಒಂದು ಸಾವಿರ ವರ್ಷದಲ್ಲಿ ಕೇವಲ ಮೂರಡಿ ಎತ್ತರ ದಂಡೆಯನ್ನಷ್ಟೇ ಇವು ಕಟ್ಟಿರಬೇಕೆಂದೆಣಿಸಲಾಗಿದೆ.

ಹವಳ ದ್ವೀಪಗಳು ಜೀವ ಜಾತಗಳ ರಚನಾ ಕೌಶಲದ ಮಹೋನ್ನತ ಉದಾಹರಣೆಗಳಷ್ಟೇ ಅಲ್ಲ, ಜೀವ ವೈವಿಧ್ಯದ ವಿತರಣೆಯ ಉದಾಹರಣೆಯೂ ಆಗಿವೆ. ಅಲ್ಲಿ ಸಸ್ಯ ಸಂಪತ್ತಿಗೆ ಪ್ರಾಣಿ ಸಂಪತ್ತು ವಿತರಣ ವಾಹನವಾಗುತ್ತದೆ, ಪ್ರಾಣಿಗಳು ಸಸ್ಯ ಸಂಪತ್ತಿನ ಭೋಗಿಗಳೂ ಆಗುತ್ತವೆ. ಸಾಗರದ ತೆರೆಗಳಷ್ಟೇ ಅಲ್ಲಿಗೆ ಬೀಜಗಳನ್ನೊಯ್ಯುವುದಿಲ್ಲ. ಹಕ್ಕಿಗಳು ಅಲ್ಲಿಳಿದು ಹಿಕ್ಕೆಯಿಡುತ್ತವೆ. ಅದರಲ್ಲಿರುವ ಬೀಜಗಳು ಮೊಳೆತು ಸಸ್ಯ ವೃದ್ಧಿಯಾಗುತ್ತದೆ. ಹಿಕ್ಕೆ ಅದಕ್ಕೆ ಗೊಬ್ಬರವಾಗುತ್ತದೆ. ಕೆಲವು ಹವಳ ದ್ವೀಪಗಳಲ್ಲಿ ಪಕ್ಷಿಗಳು ಎಷ್ಟು ಮಟ್ಟಿಗೆ ಇಳಿಯುತ್ತವೆಂದರೆ ಅವುಗಳಿಂದ ಇಡೀ ದ್ವೀಪ ಕಪ್ಪಾಗಿ ಕಾಣುವುದುಂಟು.

ಹೀಗೆ ಹವಳ ದ್ವೀಪಗಳಲ್ಲಿ ವಿಚಿತ್ರವಾದ ಸಸ್ಯ ವೈವಿಧ್ಯವನ್ನು ಕಾಣುತ್ತೇವೆ. ಅಲ್ಲಿ ತೆಂಗಿನ ತೋಪುಗಳು ಸುಂದರವಾಗಿರುವಂತೆ, ಹೊಕ್ಕರೆ ದಾರಿ ತಪ್ಪಿಸಿ ಬಿಡುವ ತೊಡಕು ತೊಡಕಾದ ಅರಣ್ಯಗಳಿವೆ. ಆಲದ ಮರಗಳು, ನೀರಲ್ಲೆ ಬೆಳೆಯುವ ಮಾಂಗ್ರೋವ್ ವೃಕ್ಷಗಳು, ಪಂಡಾನಸ್ ವೃಕ್ಷಗಳು— ಮತ್ತಿನ್ನೇನೇನೋ ಮರಗಳು ಬೆಳೆದಿರುತ್ತವೆ. ಈ ಅರಣ್ಯಗಳ ವಿಸ್ತಾರ ಕೆಲವೇ ಮೈಲು ಇದ್ದರೂ ಅಲ್ಲಿ ದಾರಿ ತಪ್ಪಿಸಿಕೊಂಡವರು ದಿನಗಟ್ಟಲೆ ಅಲೆದು ಹಸಿವೆ ನೀರಡಿಕೆಗಳಿಂದ ಸತ್ತದ್ದುಂಟು.

ಹವಳ ದ್ವೀಪಗಳು ವಿಶ್ವದ ದರ್ಶನೀಯ ದೃಶ್ಯಗಳಲ್ಲಿ ಮೇಲ್ತರದವು. ಅಲ್ಲಿ ಭೀಕರ, ಶಾಂತ ದೃಶ್ಯಗಳೆರಡನ್ನೂ ನೋಡಬಹುದು. ಸಾಗರದ ಉತ್ತಾಲ ತರಂಗಗಳು ಹವಳದ ದಂಡೆಗೆ ಅಪ್ಪಳಿಸಿ ನೂರು-ನೂರು ಅಡಿ ಎತ್ತರಕ್ಕೆ ಚಿಮ್ಮುವ ದೃಶ್ಯ ಭಯಂಕರ. ದಂಡೆಯಲ್ಲಿ ಕೆಲವೆಡೆ ಮೈಲುಗಟ್ಟಳೆ ಹಬ್ಬಿದ ಶುಭ್ರ ಮಳಲಿನಿಂದ ಪ್ರತಿಫಲಿಸುವ ಸೂರ್ಯ ಪ್ರಕಾಶವನ್ನು ನೋಡುತ್ತ ನಿಂತರೆ ಕಣ್ಣುಗಳೇ ಹೋಗಿ ಬಿಡುತ್ತವೆ.

ಆದರೆ ತಾಂಡವವಾಡುವ ಸಾಗರ ನೀವೊಮ್ಮೆ ಈ ದ್ವೀಪವನ್ನು ಸೇರಿದರೆ ನಿಮಗೇನೂ ಮಾಡದು. ಹವಳ ದ್ವೀಪ ಅಸೀಮ ಸಾಗರದ ನಿರ್ದಯದ ನಡುವೆ ಸುರಕ್ಷಿತತೆಯ ಸಂಕೇತವಾಗಿದೆ.

ಹವಳ ದ್ವೀಪದಲ್ಲಿ ನಿಸರ್ಗದ ರೂಪವೇ ಬೇರೆಯಾಗಿ ಕಾಣುತ್ತದೆ. ಅದರ ಮೇಲೆ ಉಣ್ಣೆಯಂಥ ಮೋಡಗಳು ಸದಾ ತೂಗಾಡುತ್ತಿರುತ್ತವೆ. ಉದಯ ಕಾಲದಲ್ಲಿ ಅವು ಉಜ್ವಲ ಸ್ವರ್ಣ ವರ್ಣದ ಅಂಚು ತಳೆದು ಕಾಳಿದಾಸ ಹೇಳಿದ ಹಾಗೆ ರುದ್ರನಿಗೆ ತಾಂಡವವಾಡುವ ಮೊದಲು ತೊಡಲೆಂದು ಅದೇ ಸುಲಿದ ಇನ್ನೂ ರಕ್ತ ಜಿನುಗುವ ಗಜ ಚರ್ಮದ ಹಾಗೆ ಕಾಣುತ್ತವೆ. ಮಧ್ಯಾಹ್ನದಲ್ಲಿ ಅಸಹನೀಯ ಸೆಕೆ, ಮೋಡದ ಕಣ್ಣು ಕೋರೈಸುವ ಪ್ರಭೆ. ಸಂಜೆ ಪುನಃ ಪ್ರಕಾಶಮಾನವಾದ ವರ್ಣವಿಲಾಸ. ಆ ಮೇಲೆ ಸಹಸಾ ಕತ್ತಲಾಗುತ್ತದೆ. ಆಗ ಘನವಾದ ಆಕಾಶದಲ್ಲಿ ಮಿನುಗುವ ತಾರೆಗಳು ಕೈಗೇ ಸಿಕ್ಕಾವೊ ಎಂಬಷ್ಟು ಹತ್ತಿರವಾಗಿ ತೋರುತ್ತವೆ. "ಚಂದ್ರನಿದ್ದರೆ ಆತನ ಪ್ರತಿಬಿಂಬ ತೆರೆಗಳ ಮೇಲೆ ನರ್ತಿಸುವುದಿಲ್ಲ. ಲಗೂನ್‌ನ ಶಾಂತ ಜಲದಲ್ಲಿ ಈ ದಂಡೆಯಿಂದ ಆ ದಂಡೆಗೆ ಬೆಳ್ಳಿಯ ಸೇತುವೆ ಕಟ್ಟಿದಂತೆ ಭಾಸವಾಗುತ್ತದೆ."

ಮತ್ತೆ ಆ ಹವಳದಂಡೆ. ಅದೊಂದು ವರ್ಣ ವಿನ್ಯಾಸದ ಮಾಯಾಜಾಲ. ಜೀವ ಸಂಪತ್ತಿನ ಪ್ರದ-

ರ್ಶನ ಶಾಲೆ. ಸಮುದ್ರಕ್ಕೆದುರಾದ ಅದರ ಭಾಗದಲ್ಲಿ ನೀರ ಮೇಲೆ ಕೆಂಬಣ್ಣದ ಪಾಚಿ ಮಾತ್ರ ಕಾಣಿಸುತ್ತದೆ. ಅಲ್ಲಿ ನೀರವರೆಗೂ ಹೋದರೆ ಹವಳ ದಂಡೆಯು ಯಾವ ಪರ್ವತಕ್ಕಿಂತಲೂ ಕಡಿದಾಗಿ ಗಾಢ ನೀಲ ಅತಲ ಸಾಗರ ಜಲದೊಳಗೆ ಇಳಿದು ಹೋದುದನ್ನು ಕಂಡು ತಲೆ ತಿರುಗುತ್ತದೆ. ಈ ಕಡಿದಾದ ಗೋಡೆಯಲ್ಲಿ ಇರುವುದು ಹವಳದ ಪ್ರಪಂಚ. ಅದಕ್ಕೆ ಹವಳದ ಉದ್ಯಾನವೆಂದೇ ಹೆಸರು. ಅದು ಅನ್ವರ್ಥಕವಾದ ಹೆಸರೇ. ಯಾವ ಉದ್ಯಾನಕ್ಕೂ ಕಡಿಮೆಯಿಲ್ಲ ಅದು. ಎಲ್ಲವೂ ಹವಳಮಯವೇ ಅಲ್ಲಿ. ಹವಳದ ಗಿಡಗಳು, ಹವಳದ ಪೊದೆಗಳು, ಹವಳದ ಮಿನಾರುಗಳು, ಹವಳದ ಬೀಸಣಿಕೆಗಳು, ಹವಳದ ಹೂಗಳು. ಹವಳದ ಬಣ್ಣಗಳಿಗೂ ಲೆಕ್ಕವಿಲ್ಲ. ತಳತಳಿಸುವ ಕಪ್ಪು, ಗಾಢ ಹಸಿರು, ಕಣ್ಣು ಕುಕ್ಕುವ ನೀಲಿ, ಹಳದಿ, ಜಾಂಬಳಿ ಇವೆಲ್ಲ ಸೇರಿ ಸಮುದ್ರದ ತಿಳಿನೀರಲ್ಲಿ ಬಣ್ಣ ಕಲಸಿದಂತೆ ಮಾಡಿಬಿಡುತ್ತವೆ. ಕೆಲವೆಡೆಯಂತೂ ಒಂದೇ ಹವಳ ಕಾಮನಬಿಲ್ಲಿನಂತೆ ಹಲವು ವರ್ಣಗಳನ್ನು ಮೆರೆಸುತ್ತದೆ.

ಹವಳದ ರೂಪಗಳು ಸಸ್ಯಗಳನ್ನಷ್ಟೇ ಹೋಲುವವೆಂದಲ್ಲ. ಕೆಂಬಣ್ಣದ ಅರಸು ಹವಳ ಶಾಖೋಪಶಾಖೆಯಾಗಿ ವೃಕ್ಷದಂತೆಯೆ ಕಾಣುತ್ತದೆ. ಆದರೆ ಮನುಷ್ಯನ ಮಿದುಳಿನಂತೆ ಕಾಣುವ ಹವಳದ ಜಾತಿಯನ್ನೊಮ್ಮೆ ನೋಡಿದರೆ ಮರೆಯುವಂತಿಲ್ಲ. ಮಿದುಳಿನಂತೆಯೆ ರೂಪ, ಮಿದುಳಿನಂತೆಯೆ ಮಿಡುಕಾಟ. ಸಾಲದ್ದಕ್ಕೆ ಅಂತಸ್ತುಗಳಂತೆ, ಕಪಾಟುಗಳಂತೆ, ಹಗ್ಗದ ಮೇಲೆ ಒಣ ಹಾಕಿದ ಬಟ್ಟೆಯಂತೆ, ಗುಹೆಗಳಂತೆ, ಗೋಲಗಳಂತೆ, ಅಸ್ಥಿಪಂಜರಗಳಂತೆ ಬೆಳೆದ ಹವಳಗಳುಂಟು. ತಜ್ಞರಾದವರಷ್ಟೇ ಇದು ಈ ಜಾತಿಯ ಹವಳ ಎಂದು ಹೇಳಬಲ್ಲರು. ಅಷ್ಟು ಅಸಂಖ್ಯ ಅವುಗಳ ರೂಪ.

ಆದರೆ ಜೀವಂತ ಹವಳದ ಈ ಎಲ್ಲ ವರ್ಣವಿಲಾಸ ಹವಳ ದಂಡೆಗಳಲ್ಲಷ್ಟೇ. ಹವಳ ಸತ್ತು ಅದಕ್ಕೆ ಗಾಳಿ ತಾಕಿದರೆ ಬಣ್ಣವೆಲ್ಲ ಮಾಸಿ ಹೋಗುತ್ತದೆ.

ದಂಡೆಯ ತುದಿಗೆ ಬಂದು ದೋಣಿಗೆ ಬಿಗಿದ ಹಗ್ಗದ ಬಲದಿಂದ ನೀರೊಳಗೆ ಮುಳುಗಿ ಕಣ್ಣು ತೆರೆದರೆ ಅಲ್ಲೊಂದು ಜಲಚರ ವಿಶ್ವವೇ ನಿಮಗೆದುರಾಗುತ್ತದೆ. ಏಕೆಂದರೆ ಹವಳದ "ಕೋಟೆ"ಯ ಗೋಡೆ ಸಂದುಗಳು ಲೆಕ್ಕವಿಲ್ಲದಷ್ಟು ಜಲಚರಗಳಿಗೆ ಆಶ್ರಯವಾಗಿವೆ. ಒಂದೆಡೆ ಬಿರುಕುಬಿಟ್ಟ ಗೋಡೆಯಲ್ಲೊಂದು ಸಂದಿಯಾದಲ್ಲಿ ಕುತೂಹಲದಿಂದ ನೀವು ಕೈ ಹಾಕಿದರೆ ಅಲ್ಲಿ ಹುದುಗಿದ್ದ ಅಕ್ಟೋಪಸ್ ನಿಮ್ಮನ್ನು ಸೆಳೆದುಕೊಳ್ಳಲು ಕೈಚಾಚುತ್ತದೆ. ಆಳ ನೀರಿನ ಕತ್ತಲಿಗೆ ಕಣ್ಣು ಹದಗೊಂಡ ಮೇಲೆ ವಿಲಕ್ಷಣ ವರ್ಣಗಳ ವಿಲಕ್ಷಣ ರೂಪಗಳ ಮೀನುಗಳನ್ನು, ಜಲಚರಗಳನ್ನು ನೀವು ಕಂಡು ಇಂಥ ಪ್ರಾಣಿಗಳೂ ಲೋಕದಲ್ಲಿದ್ದಾವೇ ಎಂದು ಬೆರಗಾಗುತ್ತೀರಿ. ಅವುಗಳಲ್ಲಿ ಬೆನ್ನೆಲುಬುಳ್ಳ ಮತ್ತು ಇಲ್ಲದ ಎರಡೂ ಜಾತಿಯವಿರುತ್ತವೆ. ಐದೆಸಳಿನ ಮಹಾ (೮ ರಿಂದ ೧೨ ಅಂಗುಲ) ನೀಲಿ ಹೂವಿರಬೇಕೆಂದು ನೀವೆಣಿಸಿದ್ದು ನಕ್ಷತ್ರ ಮೀನಾಗಿರುತ್ತದೆ; ಹಳದಿ ಬಣ್ಣದ ಯಾವುದೋ ಅಲಂಕಾರ ವಸ್ತುವಿನಂತಿದ್ದದ್ದು ಅಲಂಕಾರ ಏಡಿಯಾಗಿರುತ್ತದೆ; ಯಾವುದೋ ಬಗೆಯ ಕೇದಗೆಯೆಂದೆಣಿಸಿದ್ದು "ಸೀ ಅರ್ಚಿನ್" ಆಗಿರುತ್ತದೆ; ಇದೆಂಥ ನವಿಲೆಂದು ನೀವು ಸೋಜಿಗಪಡುವುದು ನವಿಲು ಹುಳವಾಗಿರುತ್ತದೆ. ಅಲ್ಲಿ ನೀವು ಹಸಿರು ಗಿಳಿ ಮೀನನ್ನು, ವಿಚಿತ್ರ ಗರಿಗಳ ಸಿಂಹ ಮೀನನ್ನು, ಶಂಖ ಮೀನನ್ನು, ಕಪ್ಪೆ ಮೀನನ್ನು, ಸಮುದ್ರ ಸಸ್ಯದಂತೆಯೆ ಕಾಣುವ ಸರಗಾಸಂ ಮೀನನ್ನು, ರೆಕ್ಕೆಯುಳ್ಳ ಚೇಳು ಮೀನನ್ನು, ಒಂದೇ ತುತ್ತಿಗೆ ಹುಡುಗನೊಬ್ಬನನ್ನು ನುಂಗಬಲ್ಲ ಭೀಕರ ಗ್ರೂಪರ್ ಮೀನನ್ನು ಕಾಣುವಿರಿ. ವಾಸ್ತವಿಕವಾಗಿ ಸಮುದ್ರದ— ಏಕೆ ಪ್ರಪಂ

ಚದ— ಮತ್ತಾವ ಭಾಗದಲ್ಲೂ ಹವಳದ ದಂಡೆಯಲ್ಲಿ ಕಾಣುವಷ್ಟು ವೈವಿಧ್ಯಪೂರ್ಣ ಜೀವರಾಶಿಯನ್ನು ಕಾಣಲು ಸಾಧ್ಯವಿಲ್ಲ.

ಹವಳ ದ್ವೀಪಗಳಲ್ಲಿ ನೆಲಸಿರುವ ಮಾನವರ ಮೇಲೆ ಅವು ತಮ್ಮದೇ ವ್ಯಕ್ತಿತ್ವವೊಂದನ್ನು ಒತ್ತಿದಂತೆ ಕಾಣುತ್ತದೆ. ಸಾವಿರಾರು ವರ್ಷಗಳಿಂದ ಅವುಗಳ ಮೇಲೆ ಮಾನವ ವಸತಿಯಿದೆ. ದಕ್ಷಿಣ ಶಾಂತ ಸಾಗರದ ಹವಳ ದ್ವೀಪಗಳಲ್ಲೆಲ್ಲ ಬಹುಶಃ ಭಾರತದಿಂದ ಹೋದ ಸಮುದ್ರಚಾರಿ ವಲಸೆಗಾರರು ಮನೆ ಮಾಡಿದ್ದಾರೆ. ತಮಗಿಂತ ಹೆಚ್ಚು ಸಾಹಸಿಗಳಾದ ಜನಾಂಗಗಳಿಂದ ತಳ್ಳಲ್ಪಟ್ಟವರಾಗಿ ಅವರು ಶಾಂತಿ, ನಿರುಪದ್ರವಗಳನ್ನು ಬಯಸಿ ಸಾವಿರಾರು ಮೈಲು ಸಾಗರವನ್ನು ದೋಣಿಗಳಲ್ಲಿ ದಾಟಿ ಈ ಸಾಗರ ಮಧ್ಯದ ಓಯಸಿಸ್ಸುಗಳಿಗೆ ಹೋದರಂತೆ. ಮತ್ತು ಶಾಂತಿಯನ್ನವರು— ಯುರೋಪಿಯನ್ನರು ಬರುವವರೆಗೂ— ನಿಶ್ಚಿಂತೆಯಿಂದ ಅನುಭವಿಸಿದರು.

ಶಾಂತ ಸಾಗರದಲ್ಲಿರಲಿ, ಹಿಂದೂಸಾಗರದಲ್ಲಿರಲಿ, ಹವಳ ದ್ವೀಪಗಳಲ್ಲಿ ತೆಂಗು ಕಲ್ಪವೃಕ್ಷ. ಅದರ "ಎಳೆ ನೀರು" ಅದರ ನಿವಾಸಿಗಳ ತೃಷೆ ಹಿಂಗಿಸುತ್ತದೆ. (ಏಕೆಂದರೆ ಹವಳ ದ್ವೀಪಗಳಲ್ಲಿ ಸಿಹಿನೀರಿನ ಜಲಾಶಯಗಳಿಲ್ಲ. ಮಳೆ ನೀರನ್ನು ಹಿಡಿದಿಟ್ಟು ಇಡೀ ವರ್ಷ ತಳ್ಳಬೇಕು.) ಅದರ ಕಾಯಿಯ ತಿರುಳು ಹಸಿವು ನೀಗಿಸುತ್ತದೆ, ಅದರ ಮಡಲು ಅವರ ಮನೆಗಳಿಗೆ ಮಾಡು, ಗೋಡೆಗಳಾಗುತ್ತದೆ. ಅದರ ಕಾಂಡ ಕಂಬವಾಗುತ್ತದೆ. ಮಡಲಿನ ಗರಿಗಳು ಬುಟ್ಟಿಯಾಗುತ್ತವೆ, ಅದರ ಜುಬ್ಬರ ಹಗ್ಗವಾಗುತ್ತದೆ. ಅದು ಕೊಟ್ಟ ದಾನಗಳಿಂದಲೇ ಬಹುತರವಾಗಿ ತೃಪ್ತರಾದ ಇವರು ಮೀನು ಹಿಡಿಯುವುದರಲ್ಲಿ ಪ್ರವೀಣರಾಗಿದ್ದಾರೆ. ಬೇಕೆಂಬಷ್ಟು ಮೀನುಗಳೂ ಅಲ್ಲಿವೆ.

ನಾಗರಿಕರೆನಿಸಿದವರಿಗೆ ಎರಡು ದಿನಗಳಲ್ಲಿ ಬೇಸರಬರಬಹುದಾದ ಈ ದ್ವೀಪಗಳಲ್ಲಿ ಈ ಜನ ಸಾವಿರಾರು ವರ್ಷದಿಂದ ಸುಖ ಜೀವನ ಮಾಡಿದ್ದಾರೆ. ನೆಲದ ಮೇಲಣ ಮರುಭೂಮಿಗಳ ಓಯಸಿಸ್ಸುಗಳ ಜನ ಒಂದು ಬಗೆಯ ಕ್ರೂರ ಉದಾತ್ತತೆಯನ್ನು ಬೆಳಸಿಕೊಂಡಿದ್ದರೆ ಸಾಗರದ ಓಯಸಿಸ್ಸುಗಳ ಈ ಜನ ಸೌಮ್ಯ ಉದಾತ್ತತೆಯನ್ನು ಅಳವಡಿಸಿಕೊಂಡಿದ್ದಾರೆ. ಅತಿಥಿಗಳಲ್ಲಿ ಆದರ, ಮಕ್ಕಳಲ್ಲಿ ಪ್ರೀತಿ, ಹೆಂಗಸರ ಮೇಲೆ ಗೌರವ, ಅನಾಥರ ಮೇಲೆ ಅನುಕಂಪ ಇವು ಈ ಜನರ ಸಾರ್ವತ್ರಿಕ ಸಂಸ್ಕೃತಿಯಾಗಿದೆ. ಅರಬೀ ಸಮುದ್ರದ ಅನೇಕ ಹವಳ ದ್ವೀಪಗಳ ನಿವಾಸಿಗಳು ಮುಸ್ಲಿಮರು. ಆದರೆ ಈ ದ್ವೀಪಗಳು ಮುಸ್ಲಿಂ ಸಂಸ್ಕೃತಿಗೂ ತಮ್ಮ ಮಾರ್ದವವನ್ನು ತಂದುಕೊಟ್ಟಂತಿದೆ. ಅಲ್ಲಿ ಇಂದಿಗೂ ಸ್ತ್ರೀ-ಪ್ರಾಧಾನ್ಯವಿದೆ. ಜನ ಸೌಮ್ಯವಾಗಿದ್ದಾರೆ.

ಅನೇಕ ಯುರೋಪಿಯನ್ನರು ನಾಗರಿಕತೆಯ ಕೋಟಲೆಗಳಿಗೆ ಬೇಸತ್ತು ಹವಳ ದ್ವೀಪಗಳ ಮೃದು ಸೌಂದರ್ಯಕ್ಕೆ ಮುಗ್ಧರಾಗಿ ಇಲ್ಲಿ ಬಂದು ನೆಲಸಿದುದಿದೆ. ಆದರೆ ಈ ಏಕಾಂತವನ್ನು ತಾಳಿಕೊಳ್ಳಲು ಸಮರ್ಥರಾದವರು ವಿರಳ. ದ್ವೀಪದಲ್ಲಿ ಚೆಲ್ಲಾಡುವ ಸೌಂದರ್ಯವೇ ಅವರನ್ನು ಪೀಡಿಸಿ ಅವರು ಮತ್ತೆ ನಾಗರಿಕತೆಯ ಆಶ್ರಯಕ್ಕೆ ಧಾವಿಸುತ್ತಾರೆ, ಇಲ್ಲವೆ ತಲೆ ಕೆಟ್ಟಂ-ತಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇಲ್ಲಿ ಬಾಳಲು ಸೌಂದರ್ಯ ಪ್ರೀತಿಯೊಂದೇ ಸಾಲದು; ಶಾಂತಿ ಪ್ರೀತಿಯೂ ವಿಪುಲವಾಗಿ ಬೇಕು. ಅಶಾಂತ ಚೇತನಗಳಿಗಲ್ಲ ಈ ಶಾಂತಿಧಾಮ. *



ಚಂಬಲ್ ನದೀ ಕೊಳ್ಳದ ಒಂದು
ರೋಮಾಂಚಕ ದರೋಡೆ ವೃತ್ತಾಂತ

# ನರಬಲಿಗಾಗಿ ದರೋಡೆ!




ಠಾಕುರ ಘನಶ್ಯಾಮ
ನಾರಾಯಣ ಸಿಂಹ

ಇದೀಗ ಕೆಲವು ವರ್ಷಗಳ ಹಿಂದಿನ ಮಾತು. ಭಿಂಡ ಜಿಲ್ಲೆಯ ಮಹಗವಾ ಗ್ರಾಮದಲ್ಲಿ ಕುರುಬ ಕುಟುಂಬವೊಂದು ವಾಸಿಸುತ್ತಿತ್ತು.

ಈ ಕುರುಬ ಕುಟುಂಬ ಸುಖಸಮಾಧಾನಗಳಿಂದ ಕಾಲ ಕಳೆಯುತ್ತಿತ್ತು. ಯಜಮಾನ ತನಗೆ ಹುಟ್ಟಿದ ಮಗನಿಗೆ ಭೀಖಾ ಎಂದು ಹೆಸರಿಟ್ಟ. ಹುಡುಗ ದೊಡ್ಡವನಾದ ಬಳಿಕ ತಂದೆ ಅವನನ್ನೂ ತನ್ನ ಜೊತೆಗೆ ಅಡವಿಗೆ ಕುರಿ ಕಾಯಲು ಕರೆದೊಯ್ಯತೊಡಗಿದ.

ಹೀಗೆಯೆ ವರ್ಷಗಳು ಕಳೆದವು. ಆ ಮೇಲೆ ಕಾಲರಾ ಬೇನೆ ಆ ಊರಲ್ಲಿ ಬಂತು. ಭೀಖಾನ ತಂದೆ ತಾಯಿ ಇಬ್ಬರೂ ಕಾಲರಾದಿಂದ ಸತ್ತು ಹೋದರು. ಆಗ ಭೀಖಾ ಸ್ವತಂತ್ರನಾಗಿ ಅಡವಿಗಳಲ್ಲಿ ಅಲೆಯತೊಡಗಿದ. ಮುಂಜಾನೆಯೆ ಕುರಿಗಳನ್ನು ಅಡವಿಗೆ ಹೊಡೆದುಕೊಂಡು ಹೋದವನು ಸಂಜೆಯಾದ ಮೇಲೆಯೆ ಮನೆಗೆ ಮರಳುತ್ತಿದ್ದ. ಅವನ ಹತ್ತಿರ ಈಗ ಕುರಿಗಳೂ ಕಡಿಮೆ ಇದ್ದವು. ಅವನನ್ನು ತರಾಟಿಗೆ ತೆಗೆದುಕೊಳ್ಳುವವರು ಯಾರೂ ಇರಲಿಲ್ಲ.

ಒಂದು ದಿನ ಅಡವಿಯಲ್ಲಿ ಅಲೆಯುತ್ತ ಅಲೆಯುತ್ತ ಭೀಖಾ ಒಂದು ಹಳ್ಳದ ದಂಡೆಗೆ ಬಂದ. ಸಾಯಂಕಾಲವಾಗಲು ತುಸು ಹೊತ್ತು ಉಳಿದಿತ್ತು. ಹಳ್ಳದ ದಂಡೆಯಲ್ಲಿ ಪುರುಷ ಪ್ರಮಾಣದ ಕಾಲೀದೇವಿಯ ಮೂರ್ತಿಯೊಂದು ಅವನಿಗೆ ಕಾಣಿಸಿತು. ಮೂರ್ತಿಯ ಎದುರಿನಲ್ಲಿ ಯಾವನೊ ಒಬ್ಬನ ನಗ್ನ ಶವವನ್ನು ಮಲಗಿಸಿದ್ದರು. ಶವದ ಸಮೀಪದಲ್ಲಿ ಹೂವಿನ ಹಾರಗಳು ಬಿದ್ದಿದ್ದವು. ಅವುಗಳ ಮೇಲೆ ಕುಂಕುಮ ಹರಡಿತ್ತು. ಹೆಣಕ್ಕೆ ತುಸು ದೂರದಲ್ಲಿ ಕಣ್ಮುಚ್ಚಿಕೊಂಡು ಒಬ್ಬ ಸಾಧು ಕುಳಿತಿದ್ದ. ಅವನ ತುಟಿಗಳು ಮಾತ್ರ ಆಗಾಗ ಏನನ್ನೊ ಗೊಣಗುತ್ತಿದ್ದವು. ಆತ ಬಹುಶಃ ಏನೋ ಮಂತ್ರೋಚ್ಚಾರಣೆ ನಡೆಸಿದ್ದನೆಂದು ಅನಿಸುತ್ತಿತ್ತು. ಇದನ್ನೆಲ್ಲ ಕಂಡ, ಸ್ತಂಭಿತನಾದ ಭೀಖಾ ಆ ಸಾಧುವಿಗೆ ನಮಸ್ಕಾರ ಮಾಡಿ ಅಲ್ಲಿಯೆ ಕುಳಿತುಕೊಂಡ.

ಆದರೆ ಸಾಧುವಿಗೆ ಭೀಖಾ ಬಂದದ್ದರ ಕಲ್ಪನೆಯೆ ಇರಲಿಲ್ಲ. ಆತ ತನ್ನ ಧ್ಯಾನದಲ್ಲಿಯೆ ಮಗ್ನನಾಗಿದ್ದ. ಕೆಲ ಹೊತ್ತಿನ ಮೇಲೆ ತೆರೆದ ಅವನ ಕಣ್ಣುಗಳು ನಾಲ್ಕೂ ದಿಕ್ಕುಗಳನ್ನು ಸಂತಪ್ತ ದೃಷ್ಟಿಯಿಂದ ಈಕ್ಷಿಸಿದವು. ಆ ಕಣ್ಣುಗಳು ಕೆಂಡದಂತೆ ಉರಿಯುತ್ತಿದ್ದವು. ಭೀಖಾ

"ಧರ್ಮಯುಗ" ದಿಂದ

ನಡುಗಿಹೋದ. ಅಷ್ಟರಲ್ಲಿ ಸಾಧು ಅವನನ್ನು ನೋಡಿದ. ತನ್ನ ಏಕಾಂತ ಭಂಗವಾದದ್ದನ್ನು ಕಂಡು ಆತನ ಕೋಪ ಮಿತಿಮೀರಿತು. ಆತ ಕತ್ತಿಯನ್ನೆತ್ತಿ ಭೀಖಾನ ಮೇಲೇರಿ ಬಂದ. ಭೀಖಾನಲ್ಲಿ ಓಡಿಹೋಗುವ ಸಾಮರ್ಥ್ಯವೂ ಉಳಿದಿರಲಿಲ್ಲ. ಆತ ಸಾಧುವಿನ ಕಾಲಿಗೆರಗಿ ಕ್ಷಮಾಯಾಚನೆ ಮಾಡತೊಡಗಿದ. ಸಾಧು ಕೈತಡೆದು ಏನೋ ಯೋಚಿಸುತ್ತ ತೀವ್ರ ಸ್ವರ ದಲ್ಲಿ ಕೇಳಿದ : " ನೀನೇಕೆ ಇಲ್ಲಿ ಕುಳಿತಿದ್ದಿ ?" ಭೀಖಾ ಅಳುತ್ತಳುತ್ತಲೇ ಹೇಳಿದ : " ನಾನು ಯಾವ ಕೆಲಸಕ್ಕಾಗಿ ಹುಟ್ಟಿರುವೆನೊ ಆ ಕೆಲಸ ನನ್ನಿಂದ ಮಾಡುವುದಾಗಿಲ್ಲ ಎಂದು ನನಗೆ ಯಾವಾಗಲೂ ಅನಿಸುತ್ತದೆ. ಆದ್ದರಿಂದ ಅಡವಿ ಅಡವಿ ಅಲೆಯುತ್ತಿರುತ್ತೇನೆ. ಹೀಗೆಯೇ ಅಲೆಯುತ್ತ ಇಲ್ಲಿ ಬಂದೆ. ತಮ್ಮ ದರ್ಶನ ವಾಗಲು ಇಲ್ಲಿಯೆ ಕುಳಿತುಕೊಂಡೆ. ತಾವು ಧ್ಯಾನಮಗ್ನರಾಗಿದ್ದುದರಿಂದ ಮಾತನಾಡಿಸದೆ ಸುಮ್ಮನೆ ನೋಡುತ್ತ ಕುಳಿತುಕೊಂಡೆ."

ಸಾಧು ಕತ್ತಿಯನ್ನು ಕೆಳಗಿಳಿಸಿ, " ನಿನಗೆ ಇಲ್ಲಿ ಶಾಂತಿ ಸಿಗುತ್ತಿದ್ದರೆ ನೀನು ನನ್ನ ವಿದ್ಯೆ ಯನ್ನು ಕಲಿ. ಆದರೆ ನಾಳೆ ನಿನ್ನ ಪರೀಕ್ಷೆಯಾ-ಗುವುದು. ನಾಳೆ ನೀನು ಅಂಜಿ ಹಿಂತೆಗೆಯದೆ ಸರಿಯಾದ ಸಮಯಕ್ಕೆ ಇಲ್ಲಿ ಬಂದೆಯಾದರೆ ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುತ್ತೇನೆ" ಎಂದು ಹೇಳಿದ.

ಮಾರನೆಯ ದಿನ ನಸುಕಿನಲ್ಲಿ ಭೀಖಾ ತನ್ನ ಬಂದೂಕನ್ನು ಹೆಗಲಿಗೇರಿಸಿಕೊಂಡು ಅಡವಿಗೆ ನಡೆದ. ಬಂದೂಕನ್ನೆತ್ತಿಕೊಂಡಿದ್ದ ಅವನ ಕಪ್ಪು ದೇಹ ಬಹು ಭಯಾನಕವಾಗಿ ಕಾಣಿಸುತ್ತಿತ್ತು. ಆತ ಸಾಧುವಿದ್ದ ಸ್ಥಳಕ್ಕೆ ಬಂದಾಗ ಸಾಧು ಅದೇ ನಿದ್ದೆಯಿಂದೆದ್ದು ಕುಳಿತಿದ್ದ. ಭೀಖಾ ಅವ ನಿಗೆ ಸಾಷ್ಟಾಂಗ ಹಾಕಿ ಕುಳಿತುಕೊಂಡ. ಭೀಖಾನ ಬಂದೂಕಿನ ಮೇಲೆ ಮೊದಲು ದೃಷ್ಟಿ ಬಿದ್ದ ಸಾಧು ಮಾತುಕಥೆಯನ್ನಾರಂಭಿಸುವುದಕ್ಕೆ ಮುಂಚೆಯೆ ಬಂದೂಕನ್ನು ಕಾಲೀಮಾತೆಯ ಚರಣಗಳಿಗೆ ಅರ್ಪಿಸಲು ಆಜ್ಞೆಯಿತ್ತ. ಭೀಖಾ ತಟ್ಟನೆ ಆಜ್ಞೆಯನ್ನು ಪಾಲಿಸಿದ. ಸಾಧು ಎದ್ದು ಬಂದೂಕನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು " ಕತ್ತಿಯನ್ನೆತ್ತಿಕೊ. ನಿನ್ನ ರಕ್ತವನ್ನು ಮಾತೆಗೆ ಅರ್ಪಿಸು " ಎಂದ. ಭೀಖಾ ಮಂತ್ರಮುಗ್ಧ ನಾಗಿ ಸಾಧುವಿನ ಆಜ್ಞೆಗಳನ್ನು ಪಾಲಿಸುತ್ತ ನಡೆದ. ಸಾಧು ತುಸು ಸಂತುಷ್ಟನಾಗಿ, "ಮಗೂ, ನಾನೊಬ್ಬ ತಾಂತ್ರಿಕ. ಯಾವ ವಿದ್ಯೆಯನ್ನು ಸಂಪಾದಿಸಲು ಹೆಣಗುತ್ತಿರುವೆನೊ ಅದು ಅಘೋರ ವಿದ್ಯೆ. ಇದರ ಸಿದ್ಧಿಗಾಗಿ ನರಬಲಿ ಅಗತ್ಯವಿದೆ. ನರಬಲಿ ಸರಿಯಾಗಿ ದೊರೆಯುತ್ತ ಹೋದರೆ ನಾನು ಮತ್ತು ನೀನು ಈ ಪೃಥ್ವಿಯ ಭೌತಿಕ ಅಧಿಕಾರವನ್ನೆಲ್ಲ ಹೊಂದುವೆವು. ನಿನಗೆ ಒಪ್ಪಿಗೆಯಿದ್ದರೆ ಇರು, ಇಲ್ಲವಾದರೆ ಹೊರಟು ಹೋಗು" ಎಂದ.

ಆದರೆ ಭೀಖಾ ತಿರುಗಿ ಹೋಗಲು ಬಂದಿರ ಲಿಲ್ಲ. " ಸ್ವಾಮಿ, ಬೇಕಾದ ರೀತಿಯಲ್ಲಿ ನನ್ನನ್ನು ಪರೀಕ್ಷಿಸಿ ನೋಡಿ. ನಾನು ಎಲ್ಲದಕ್ಕೂ ಸಿದ್ಧನಿ ದ್ದೇನೆ," ಎಂದ.

" ನಿನ್ನ ನಿರ್ಭಯತೆ ನೀನು ನನ್ನ ಶಿಷ್ಯನಾ ಗಲು ಯೋಗ್ಯನಿರುವೆಯೆಂಬುದನ್ನು ಸಿದ್ಧಪಡಿಸು ತ್ತದೆ. ಆದರೆ ಕಾರ್ಯಸಿದ್ಧಿಗಾಗಿ ನರಬಲಿ ಬೇಕೆಂ-ಬುದನ್ನು ಮರೆಯದಿರು. ನರಬಲಿ ಒದಗಿಸುವ ಹೊಣೆ ನಿನ್ನದು. ಒಪ್ಪಿಗೆಯೆ ? ಪ್ರತಿ ತಿಂಗಳೂ ಒಂದರಂತೆ ನರಬಲಿಯನ್ನೊದಗಿಸಬೇಕಾಗು ವುದು ತಿಳಿಯಿತೆ ? ಹೇಳು. ಸಿದ್ಧನಿರುವಿಯಾ ?"

ಭೀಖಾ ಮೊದಲೇ ಹುಂಬ. ಆತ ತಟ್ಟನೆ ಹೇಳಿದ: " ಎಲ್ಲ ರೀತಿಯಲ್ಲಿಯೂ ತಮ್ಮ ಸೇವೆ ಮಾಡಲು ಸಿದ್ಧನಿದ್ದೇನೆ. ತಾವು ನನ್ನನ್ನು ತಮ್ಮ ಚರಣಸಾನ್ನಿಧ್ಯದಿಂದ ದೂರ ಮಾಡಬೇಡಿ. "

" ಸರಿ, ನಡೆ ಈಗ. ಹೋಗಿ ಯಾವನನ್ನಾ ದರೂ ಹುಡುಕಿ ಹಿಡಿದುಕೊಂಡು ಬಾ," ಸಾಧು ಸಮೀಪದಲ್ಲಿಯೆ ಹರಡಿ ಬಿದ್ದಿದ್ದ ಮಾನವ

ಎಲುವುಗಳಲ್ಲಿ ಒಂದನ್ನು ಹೆಕ್ಕುತ್ತ ಹೇಳಿದ.

ಭೀಖಾ ದೃಢ ಸಂಕಲ್ಪದಿಂದ ಹೊರಟ. ತನ್ನ ಊರಿಗೆ ಮರಳಿದ. ಊರಿಗೆ ಬಂದ ಬಳಿಕ ಊರ ಪಟೇಲನ ಮನೆಯ ಎದುರು ನಿಂತ. ಪಟೇಲ ಹೊರ ಜಗುಲಿಯ ಮೇಲೆ ಕುಳಿತು ಹುಕ್ಕಾ ಸೇದುತ್ತಿದ್ದ. ಆತ "ಏನೋ ಭೀಖಾ, ಏನು ಕೆಲಸ?" ಎಂದು ಕೇಳಿದ. ಭೀಖಾ ಏನೂ ಉತ್ತರ ಕೊಡಲಿಲ್ಲ. ನೆಟ್ಟಗೆ ಮುಂದಾಗಿ ಪಟೇಲನ ಕುತ್ತಿಗೆಗೆ ಕೈ ಹಾಕಿ ಎತ್ತಿಕೊಂಡು ಸರಸರನೆ ಅಡವಿಯಲ್ಲಿ ಸಾಧು ಇದ್ದಲ್ಲಿಗೆ ನಡೆದು ಬಂದ. ಬಲಿಯನ್ನು ತಂದ ಭೀಖಾನನ್ನು ಕಂಡು ಸಾಧು ಗದ್ಗದಿತನಾದ. "ಜಯ ಕಾಲೀಮಾತೆ! ಮಗೂ, ನೀನೀಗ ಸಿದ್ಧಿಯ ನಿಜವಾದ ಅಧಿಕಾರಿಯಾದೆ. ಈಗ ಈತನನ್ನು ಕಟ್ಟಿ ಹಾಕಿ ಸ್ನಾನ ಮಾಡಿಕೊಂಡು ದೇವಿಯ ಬಳಿಗೆ ಬಾ. ನಾವು ಈತನನ್ನು ಈ ಯೋನಿಯಿಂದ ಮುಕ್ತ ಮಾಡೋಣ."

ಪಟೇಲನನ್ನು ಕೊಂದು ದೇವಿಗೆ ಅರ್ಪಿಸಿ ಅವರಿಬ್ಬರೂ ಶವದ ಹೃದಯ ಭಾಗವನ್ನು ತಿಂದರು.

ಬಳಿಕ ಸಾಧು ಭೀಖಾನನ್ನು ಆಲಿಂಗಿಸಿಕೊಂಡು ಅಪ್ಪಣೆ ಕೊಟ್ಟ. ಇನ್ನು ಪ್ರತಿ ತಿಂಗಳೂ ಭೀಖಾ ಒಬ್ಬಾತನನ್ನು ಬಲಿಗಾಗಿ ಹಿಡಿದು ತರಬೇಕಾಗಿತ್ತು. ಆತ ಯೋಚಿಸಿ ಕೊನೆಗೆ ದರೋಡೆ ಮಾಡುವ ನೆಪದಲ್ಲಿ ಒಂದು ತಂಡವನ್ನು ಕಟ್ಟಿಕೊಳ್ಳಬೇಕು, ತಂಡದಲ್ಲಿಯೆ ಒಬ್ಬನನ್ನು ಪ್ರತಿ ತಿಂಗಳೂ ಬಲಿ ಕೊಡಬೇಕು ಎಂದು ನಿರ್ಧರಿಸಿದ.

ಆಗಿನ ದಿನಗಳಲ್ಲಿ ದರೋಡೆ ಮಾಡುವುದು ವೀರೋಚಿತ ಕಾರ್ಯವೆಂಬ ಭಾವನೆ ಜನರಲ್ಲಿದ್ದುದರಿಂದ ಭೀಖಾನಿಗೆ ದರೋಡೆಗಾರರ ತಂಡವನ್ನು ಕಟ್ಟುವುದು ಕಷ್ಟವಾಗಲಿಲ್ಲ. ಅವನು ತನ್ನ ತಂಡದವರಿಗೆ ಶಸ್ತ್ರಾಸ್ತ್ರಗಳನ್ನೂ ಒದಗಿಸಿ ಕೊಟ್ಟ. ಭಿಂಡ ಮತ್ತು ಮುರೈನಾ ಗ್ರಾಮಗಳಲ್ಲಿ ಆತ ಅನೇಕ ದರೋಡೆಗಳನ್ನು ಮಾಡಿ ಶ್ರೀಮಂತರನ್ನು ಸುಲಿದ. ಆದರೆ ಆತ ಪ್ರಾಪ್ತ ಧನದಲ್ಲಿ ತನಗಾಗಿ ಏನೂ ಇಟ್ಟುಕೊಳ್ಳದೆ ಎಲ್ಲವನ್ನೂ ಸಂಗಡಿಗರಿಗೆ ಹಂಚಿ ಕೊಡುತ್ತಿದ್ದನಾದ್ದರಿಂದ ಎಲ್ಲರೂ ಬಹು ಪ್ರಸನ್ನರಾಗಿದ್ದರು. ಪ್ರತಿ ರಾತ್ರಿಯೂ ಭೀಖಾ ಎಲ್ಲಿಗೆ ಹೋಗುತ್ತಾನೆ, ಎಲ್ಲಿ ಮಲಗುತ್ತಾನೆ ಎಂಬುದು ತಂಡದಲ್ಲಿ ಒಬ್ಬರಿಗೂ ಗೊತ್ತಿರಲಿಲ್ಲ. ತಿಳಿದುಕೊಳ್ಳಲು ಒಬ್ಬರೂ ಪ್ರಯತ್ನಿಸಲೂ ಇಲ್ಲ. ಭೀಖಾನ ತಂಡದಲ್ಲಿ ಹನ್ನೆರಡು ಜನ ಇದ್ದರು. ಪ್ರತಿ ತಿಂಗಳ ಕೊನೆಗೆ ಆತ ಒಬ್ಬನನ್ನು ರಾತ್ರಿ ತನ್ನೊಂದಿಗೆ ಕರೆದೊಯ್ಯುತ್ತಿದ್ದ. ಆದರೆ ಮುಂಜಾನೆ ತಿರುಗಿ ಬಂದಾಗ ತಾನೊಬ್ಬನೇ ಬರುತ್ತಿದ್ದ. ಸಂಗಡ ಹೋದವನ ಪತ್ತೆಯೆ ಇರುತ್ತಿರಲಿಲ್ಲ. ತಂಡದ ಹನ್ನೆರಡು ಜನರಲ್ಲಿ ಹತ್ತು ಜನ ಕಣ್ಮರೆಯಾದರು. ಹನ್ನೊಂದನೆಯವನನ್ನು ಭೀಖಾ ಜೊತೆಗೆ ಕರೆದುಕೊಂಡು ಹೊರಟಾಗ ಹನ್ನೆರಡನೆಯವನಿಗೆ ಏನೊ ಸಂಶಯ ಬಂದು ಆತ ಭೀಖಾನ ಹಿಂದೆಯೆ ಅವನಿಗೆ ತಿಳಿಯದಂತೆ ಹೊರಟ.

ಭೀಖಾ ಸಂಗಡಿಗನ ಜೊತೆಗೆ ದಟ್ಟ ಅಡವಿಯ ಮಧ್ಯೆ ನಡೆದುಕೊಂಡು ಹೋಗಿ ಕಾಲಿಯ ಮೂರ್ತಿ ಇದ್ದಲ್ಲಿಗೆ ಬಂದ. ಅವನ ಬೆನ್ನಹಿಂದೆಯೆ ಬಂದಿದ್ದ ತಂಡದ ಹನ್ನೆರಡನೆಯವ ಗಿಡಗಳ ಮರೆಯಲ್ಲಿ ನಿಂತು ನೋಡುತ್ತಿದ್ದ. ಕೆಲ ಹೊತ್ತಿನ ಮೇಲೆ ಸಾಧು ಸಮೀಪದಲ್ಲಿದ್ದ ಒಂದು ಗವಿಯಿಂದ ಹೊರಗೆ ಬಂದ. ಭೀಖಾ ಮತ್ತು ಅವನ ಸಂಗಡಿಗನಿಗೆ ಸ್ನಾನ ಮಾಡಿಕೊಂಡು ಬರಲು ಆದೇಶವಿತ್ತ. ಭೀಖಾನಂತೆ ಅವನ ತಂಡದ ಆ ಹನ್ನೊಂದನೆಯವನೂ ಮಂತ್ರಮುಗ್ಧನಂತೆ ಸಾಧುವಿನ ಆಜ್ಞೆಯನ್ನು ಪಾಲಿಸುತ್ತಿದ್ದ. ಆ ಮೇಲೆ ನಡುವೆ ಆತ, ಆಚೆ ಈಚೆ ಸಾಧು ಮತ್ತು ಭೀಖಾ ಕುಳಿತುಕೊಂಡರು. ಸಾಧು ಮಂತ್ರ ಪಠನಗೈಯುತ್ತ "ಎಲ್ಲರೂ ಈಗ ಕಣ್ಮುಚ್ಚಿರಿ" ಎಂದ.

ಭೀಖಾನ ಜೊತೆ ಬಂದಿದ್ದಾತ ಕಣ್ಮುಚ್ಚಿದೊ

ಡನೆಯೆ ಸಾಧು ಮತ್ತು ಭೀಖಾ ಅವನ ಮೇಲೆ-ರಗಿ ಬಂಧಿಸಿ ಅವನನ್ನು ಒಂದು ಗಿಡಕ್ಕೆ ತಲೆ ಕೆಳಗಾಗಿ ನೇತು ಹಾಕಿದರು. ಬಹುಶಃ ಇದು ತಾಂತ್ರಿಕ ಸಿದ್ಧಿಯ ಇನ್ನೊಂದು ಘಟ್ಟವಾಗಿತ್ತೇನೊ? ತೂಗು ಹಾಕಿದ ಆ ಮನುಷ್ಯನ ತಲೆಯ ಕೆಳಗೆ ಒಂದು ಕಡಾಯಿಯನ್ನಿಟ್ಟು ಇಬ್ಬರೂ ಅವನ ತಲೆಗೆ ಒಂದು ತೀಕ್ಷ್ಣ ಅಸ್ತ್ರದಿಂದ ತೂತು ಮಾಡಿದರು. ಆ ಮನುಷ್ಯನ ಜೀವಂತ ದೇಹದಿಂದ ರಕ್ತ ಕಡಾಯಿಯಲ್ಲಿ ತಟಃಕಿಕ್ಕ ತೊಡಗಿತು.

ಭಯಭೀತ ನೇತ್ರಗಳಿಂದ ಇದನ್ನು ನೋ-ಡುತ್ತಲಿದ್ದ ಭೀಖಾನ ತಂಡದ ಹನ್ನೆರಡನೆಯವ ಅಲ್ಲಿಂದ ಮೆಲ್ಲಗೆ ಜಾರಿ ಓಡುತ್ತಲೇ ಪೋಲೀಸ ಕಚೇರಿಗೆ ಹೋದ. ಆಗ ಮಹಗವಾ ಗ್ರಾಮದ ಫೌಜದಾರ ಮನೆಯಲ್ಲಿ ವಿಶ್ರಾಂತಿ ಪಡೆಯುತ್ತಲಿದ್ದ. ಹೊರಗೆ ಭಯಭೀತ ಕೂಗನ್ನು ಕೇಳಿ ಆತ ಬಂದು ಸಂಗತಿಯನ್ನು ಕೇಳಿಕೊಂಡು ಭಿಂಡ ಜಿಲ್ಲೆಯ ಪೋಲೀಸ್ ಕಚೇರಿಗೆ ಸುದ್ದಿ ಕಳಿಸಿದ.

ಅಲ್ಲಿಂದ ಪೋಲೀಸರು ಬಂದರು. ಪೋಲೀಸರ ತಂಡ ಭೀಖಾ ಇದ್ದ ಅಡವಿಯನ್ನು ಸುತ್ತುಗಟ್ಟಿದಾಗ ಭೀಖಾ ಒಬ್ಬನೇ ಒಂದು ಗಿಡದಡಿ ಬಂದೂಕನ್ನು ತಲೆಗಿಂಬಾಗಿ ಮಾಡಿಕೊಂಡು ನಿದ್ದೆ ಮಾಡುತ್ತಿದ್ದ. ಸಪ್ಪಳ ಕೇಳಿ ಎಚ್ಚತ್ತ ಆತ ಪೋಲೀಸರ ಮೇಲೆ ಗುಂಡು ಹಾರಿಸಿ ಓಡಿ ಹೋಗಲೆತ್ನಿಸಿದ. ಆದರೆ ಪೋಲೀಸರ ಗುಂಡುಗಳು ಅವನನ್ನು ಧರೆಗುರುಳಿಸಿದವು. *



## ಸವಿ-ಜೇನು

ಸಮಾಜಸೇವೆಯಲ್ಲಿ ನಿರತವಾಗಿರುವ ಒಂದು ಹಸ್ತ ಭಗವಂತನ ಪ್ರಾರ್ಥನೆಯಲ್ಲಿ ನಿರತವಾಗಿರುವ ಎರಡು ಹಸ್ತಗಳಿಗಿಂತ ಮೇಲು. — ಅಜ್ಞಾತ

ಆಸ್ತಿಕನಿಗೆ ಎರಡು ಹಗಲುಗಳ ಮಧ್ಯೆ ಒಂದು ಇರುಳು ಕಂಡರೆ ನಾಸ್ತಿಕನಿಗೆ ಎರಡು ಇರುಳುಗಳ ಮಧ್ಯೆ ಒಂದು ಹಗಲು ಕಂಡುಬರುತ್ತದೆ. — ವಿನೋಬಾ

ನಿಮಗೆ ಬಲಿ ಕೊಡಬೇಕೆಂಬ ಇಷ್ಟವಿದ್ದರೆ ನಿಮ್ಮನ್ನೇ ಬಲಿಗೊಡಿರಿ. ನಿಮ್ಮ ಆಶೆಗಳನ್ನು, ಐಹಿಕವಾದ ಮಹದಾಕಾಂಕ್ಷೆಗಳನ್ನು ಬಲಿಗೊಡಿರಿ. ಸಕಲ ಸುಖ ಭೋಗಗಳನ್ನು ಬಲಿಗೊಡಿರಿ. ಇದುವೆ ಮಹಾ ಬಲಿದಾನ. — ಭಗವಾನ್ ಬುದ್ಧ

ಯಾವುದು ದಯಾಮೂಲವಾಗಿದ್ದು ಪ್ರಾಣಿ ವರ್ಗದ ಅಭ್ಯುದಯ ಮತ್ತು ಶ್ರೇಯಃ ಸಿದ್ಧಿಗೆ ಕಾರಣವಾಗುವುದೋ ಅದೇ ಧರ್ಮವು. ಅದು ಯಾವ ಹೆಸರಿನದೇ ಆದರೂ ಬಾಧಕವಿಲ್ಲ. — ಭಗವಾನ್ ಮಹಾವೀರ

ನಾನು ಆರು ಮಂದಿ ಪ್ರಾಮಾಣಿಕರನ್ನು ನನ್ನ ಸಹಾಯಕ್ಕಾಗಿ ಇಟ್ಟುಕೊಂಡಿದ್ದೇನೆ. ನನಗೆ ಗೊತ್ತಿರುವುದನ್ನೆಲ್ಲ ಅವರು ಹೇಳಿಕೊಟ್ಟರು. ಅವರು ಯಾರೆಂದರೆ, ಏನು? ಎಲ್ಲಿ? ಯಾವಾಗ? ಏಕೆ? ಹೇಗೆ? ಯಾರು?

ಸಂಗ್ರಹ: ರವೀಂದ್ರನಾಥ ಎಸ್. ಬಿ. — ರಡ್‌ಯಾರ್ಡ್ ಕಿಪ್ಲಿಂಗ್

# ನಗೆಮಲ್ಲಿಗೆ

ಒಂದು ಸಂಸಾರ. ಮನೆಯ ತುಂಬ ಮಕ್ಕಳು, ಹೆಂಡತಿ ಅಂಬೋ ಪ್ರಾಣಿ ಸ್ವಲ್ಪ ಗಂಡುಬೀರಿ. ಆಕೆ ಒಂದು ದಿನ ತನ್ನ ಮಕ್ಕಳಿಗೆ "ಯಾರು ನನ್ನ ಮಾತನ್ನು ಕೇಳಿ ನಾನು ಹೇಳಿದ ಹಾಗೆ ಮಾಡುತ್ತಾರೋ ಅವರಿಗೆ ವಾರದ ಕೊನೆಯಲ್ಲಿ ಒಂದು ಇನಾಮು ಕೊಡುತ್ತೇನೆ" ಎಂದಳು. ಮಕ್ಕಳ ಮುಖ ಊರಗಲವಾಯಿತು. ಆದರೆ ಸ್ವಲ್ಪ ಹೊತ್ತು ಮಾತ್ರ. ತಾಯಿಗೆ ಆಶ್ಚರ್ಯವಾಯಿತು. ಕಾರಣವೇನೆಂದು ಕೇಳಿದಾಗ ಒಬ್ಬ ಹುಡುಗ ಪೆಚ್ಚು ಮೋರೆ ಹಾಕಿಕೊಂಡು ಹೇಳಿದ: "ಹೇಗಿದ್ದರೂ ಇನಾಮು ಅಪ್ಪನಿಗೇ ಹೋಗೋದು. ನಮಗೆಲ್ಲಿ ಸಿಕ್ಕುತ್ತೆ!"

—ಚಂದ್ರಶೇಖರ ಐತಾಳ

ಒಬ್ಬ ಪ್ರೊಫೆಸರ್ ಮಹಾಶಯರು ಬೆಳಗ್ಗೆ ಆಫೀಸಿಗೆ ಹೊರಡಲು ಅಣಿಯಾಗಿ ತಲೆ ಬಾಚಿಕೊಳ್ಳಲು ಕನ್ನಡಿಯ ಮುಂದೆ ನಿಂತರು. ತುಂಬ ಹೊತ್ತಾದರೂ ಇವರು ಕನ್ನಡಿಯ ಎದುರಿನಲ್ಲೇ ನಿಂತದ್ದನ್ನು ಕಂಡು ಅವರ ಹೆಂಡತಿ "ಏನು ಕಾಲೇಜಿಗೆ ಹೋಗೋಲ್ವೆ? ಎಷ್ಟು ಹೊತ್ತು ತಲೆ ಬಾಚಿಕೊಳ್ಳೋದು" ಎಂದಾಗ ಅವರು ಸಂಶಯ ಬೆರೆತ ಧ್ವನಿಯಲ್ಲಿ, "ಈ ಕನ್ನಡಿಯಲ್ಲಿರುವಾತನನ್ನು ಎಲ್ಲೋ ನೋಡಿದ ಹಾಗಿದೆ.... ಅದು ಯಾರೆಂಬುದನ್ನು ಜ್ಞಾಪಿಸಿಕೊಳ್ತಾ ಇದ್ದೀನಿ" ಎಂದರಂತೆ.

— ಚಂದ್ರಶೇಖರ ಐತಾಳ

ನಾಲ್ಕು ಜನ ಕನ್ನಡಿಗರೊಡನೆ ಒಬ್ಬ ತಮಿಳ ಊಟಕ್ಕೆ ಕೂತಿದ್ದನಂತೆ. ಅರ್ಧ ಊಟವಾಗಿತ್ತು. ಮನೆಯೊಡತಿ ಏನೋ ಬಡಿಸುತ್ತ "ಸಾಕೋ, ಬೇಕೋ" ಎಂದು ಕೇಳಿದಳಂತೆ. ಆಗ ತಮಿಳ ಕೇಳಿದ್ದೇನೆಂದು ಅರ್ಥವಾಗದೆ, "ಸಾಕೆಲ ಕೊಂಚ ಬೇಕೆಲ ಕೊಂಚ" ಎಂದನಂತೆ. ಸಾಕೋ, ಬೇಕೋ, ಎಂಬವು ಅನ್ನ, ಹುಳಿ ಇದ್ದಹಾಗೆ ಎರಡು ಪದಾರ್ಥಗಳ ಹೆಸರಿರಬಹುದು. ಎರಡನ್ನೂ ಸ್ವಲ್ಪ ಸ್ವಲ್ಪ ಹಾಕಲಿ ರುಚಿ ನೋಡೋಣ ಅಂತ ಅವನು ಹಾಗೆ ಹೇಳಿದನಂತೆ.

--ಡಿ. ಎನ್ ಶಂಕರ ಭಟ್ಟ.




"ರಾಮ ರಾಮ! ಇಲ್ನೋಡೇ! ಅವತ್ತು ಎಮ್ಮೆ ಕರು ತಿಂದುಹಾಕಿದ ಪ್ರೈಜ್‌ಬಾಂಡಿಗೇ ಬಹುಮಾನ ಬಂದಿದೆಯಲ್ಲ?"

—ವಿಶಾಲು ರಾಮಕೃಷ್ಣ

ಪೋಲೀಸ್ ಇನ್ಸ್ಪೆಕ್ಟರ್ (ಕಾರಿನ ಮಾಲಿಕನನ್ನು ಕುರಿತು):

"ಏನಯ್ಯಾ! ಆ ಕಳ್ಳ ನಿನ್ನ ಕಾರನ್ನು ಕದ್ದು ಒಂದು ವಾರದ ಮೇಲೆ ದೂರು ಕೊಡುತ್ತಿದ್ದೀಯಲ್ಲಾ ?"

ಕಾರಿನ ಮಾಲಕ: "ಅವನು ಮೊನ್ನೆ ತಾನೆ ಕಾರಿಗೆ ಹೊಸ ಚಕ್ರಗಳನ್ನು ಹಾಕಿಸಿದ ಸಾರ್. ಆದ್ದರಿಂದ........ತಡವಾಯಿತು."

—ಜಾನ್ ಬ್ಯಾಪ್ಟಿಸ್ಟ್




"ಹಾದೀಲೆ ಹೋಗೋರೆಲ್ಲ ಟೈಂ ಕೇಳ್ತಾರಂತ್ಲೇನೇ ಈ ಟೈಂ ಬೋರ್ಡ್ ಹಾಕಿಕೊಂಡಿದೀನಿ" ಓದಿಕೊಳ್ಳಿ." —ಶ್ರೀಕಾಂತ ನಾಡಿಗ

ಪತ್ರಿಕಾ ಸಂಪಾದಕನೊಬ್ಬನು ಸಭೆಯೊಂದರಲ್ಲಿ ಮಾತನಾಡಲು ಶುರುಮಾಡಿದ. ಅವನಿಗೆ ಸ್ಫೂರ್ತಿ ಬಂದು ಮಾತಿನ ಪ್ರವಾಹವನ್ನೇ ಹರಿಸತೊಡಗಿದಾಗ ಮಗುವೊಂದು ಅಳಲು ಶುರು ಮಾಡಿತು. ಸಂಕೋಚಗೊಂಡ ತಾಯಿ ಮಗುವನ್ನುಎತ್ತಿಕೊಂಡು ಹೊರಗೆ ಹೋಗಲು ಎದ್ದಳು. ಸಂಪಾದಕ ಅವಳನ್ನು ತಡೆದು ಹೇಳಿದ: "ಪರವಾಯಿಲ್ಲ, ಕುಳಿತುಕೊಳ್ಳಿ. ಮಗುವಿನಿಂದ ನನಗೆ ಕೊಂಚವೂ ತೊಂದರೆಯಾಗುವುದಿಲ್ಲ."

"ಮಗುವಿನಿಂದ ನಿಮಗೆ ತೊಂದರೆಯಾಗದಿರಬಹುದು," ತಾಯಿ ಹೇಳಿದಳು. "ಆದರೆ ನಿಮ್ಮಿಂದ ಮಗುವಿಗೆ ತೊಂದರೆಯಾಗಿದೆ."

— ಸಿ. ವಿ. ಸತ್ಯರಾಜ್

ಪತ್ರಿಕೆಯಲ್ಲಿ ಮುದ್ರಣದೋಷಗಳ ಬಗ್ಗೆ ಬರೆದು ಬಂದ ದೂರುಗಳಿಗಾಗಿ ಬೇಸತ್ತ ಸಂಪಾದಕರೊಬ್ಬರು ತಮ್ಮ ಪತ್ರಿಕೆಯಲ್ಲಿಯ ಸಂಪಾದಕೀಯದ ಕೊನೆಗೆ ಈ ರೀತಿ ಪ್ರಕಟಿಸಿದರು:

"ಪ್ರಿಯ ವಾಚಕರು ನಮ್ಮ ಪತ್ರಿಕೆಯಲ್ಲಿಯ ಮುದ್ರಣ ದೋಷಗಳನ್ನು ನಮ್ಮ ದೃಷ್ಟಿಗೆ ತಂದುದಕ್ಕೆ ಧನ್ಯವಾದಗಳು. ಆದರೆ ನಮ್ಮ ವಾಚಕರಲ್ಲಿಯ ಕೆಲವರು ಪತ್ರಿಕೆಯಲ್ಲಿಯ ಕೆಲವು ದೋಷಗಳನ್ನು ಹುಡುಕುವುದರಲ್ಲಿ ಸಂತೋಷ ಪಡೆಯುತ್ತಾರೆಂಬುದನ್ನು ಗಮನಿಸಿ ಅವರಿಗಾಗಿ ಈ ರೀತಿ ಮಾಡಲೇಬೇಕಾಗುತ್ತದೆ. ಎಲ್ಲರನ್ನೂ ಸಂತೋಷಪಡಿಸುವಲ್ಲಿ ನಮ್ಮ ಪತ್ರಿಕೆಯು ಎಷ್ಟು ಕಷ್ಟಪಡುತ್ತದೆ ಎಂಬುದು ನಿಮಗೆ ತಿಳಿದ ವಿಷಯ."

—ಸಿ. ಡಿ. ಅಂಗಡಿ

---

"ಕಸ್ತೂರಿ" ಡಿಸೆಂಬರ ೧೯೬೦ ರ ಸಂಚಿಕೆಯಲ್ಲಿ 'ಬಿದ್ದು ಬಿಟ್ಟಿರಲ್ಲ ಸರ್' ಎಂಬ ವ್ಯಂಗ್ಯಚಿತ್ರ ತೆಗೆದವರು ಶ್ರೀ ಬಿ. ಸಿ. ನಾರಾಯಣರು. ಪ್ರಮಾದದಿಂದ ಶ್ರೀಕಾಂತ ನಾಡಿಗ ಎಂದು ಬಿದ್ದುದಕ್ಕಾಗಿ ವಿಷಾದಿಸುತ್ತೇವೆ.

—ಸಂ.

ಮನಃಸಾಕ್ಷಿಯನ್ನು ಹೇಗೋ ಸಮಾಧಾನಗೊಳಿಸಿ
ರಾಜಕಾರಣಿ ಅಧರ್ಮಮಾರ್ಗಕ್ಕಿಳಿಯುತ್ತಾನೆ

# ರಾಜಕಾರಣಿ ಸಂಭಾವಿತನಾಗಿರಬಲ್ಲನೆ ?

ದಿವಂಗತ ವಿ. ಎಸ್. ಶ್ರೀನಿವಾಸ ಶಾಸ್ತ್ರಿ

ಏಕ ಕಾಲದಲ್ಲಿ ರಾಜಕಾರಣಿಯೂ ಸಂಭಾವಿತನೂ ಆಗಿರಲು ಸಾಧ್ಯವಿಲ್ಲವೇ ?

ನಾವು ಕೃಷಿ ಅಥವಾ ಸಾಹಿತ್ಯದಲ್ಲಿ, ಇಲ್ಲವೆ ಸಾಂಸಾರಿಕ ಸುಖ ಸಂಪಾದನೆಯಲ್ಲಿ, ಇಲ್ಲವೆ ಆಸ್ತಿಯ ರಕ್ಷಣೆಯಲ್ಲಿ ಎಂಥ ಅನನ್ಯ ಆಸಕ್ತಿಯನ್ನು ತೋರಿಸುತ್ತೇವೋ ಅಂಥ ಮಗ್ನತೆ ಎಂದಾದರೂ ರಾಜಕಾರಣದಲ್ಲಿ ಇರಬಲ್ಲದೇ ಎಂದು ನಾನು ಎಷ್ಟೋ ವೇಳೆ ಯೋಚಿಸಿದ್ದುಂಟು. ಇದರ ಉತ್ತರ ಸ್ವಾರಸ್ಯವೇ ಆಗಿದೆ. ನನ್ನೆಣಿಕೆಯಲ್ಲಿ ಅದರ ಉತ್ತರ, ಹೌದು ಮತ್ತು ಇಲ್ಲ— ಎರಡೂ ಬಗೆಯಾಗಿರಬಲ್ಲದು. ರಾಜಕಾರಣವು ತನ್ನ ಸ್ವಭಾವದಿಂದಲೇ ಅಷ್ಟು ಅನನ್ಯ ಮಗ್ನತೆಯನ್ನು ಹುಟ್ಟಿಸತಕ್ಕ ವಿಷಯವಲ್ಲವೆಂದು ನನ್ನ ಭಾವನೆ ; ಆದರೆ ಪರಿಣಾಮದ ದೃಷ್ಟಿಯಿಂದ, ರಾಜಕಾರಣದಲ್ಲಿ ಮಗ್ನರಾದವರ ವರ್ತನೆಯನ್ನು ನೋಡಿದಾಗ, ಮತ್ತು ಅದರ ಹೊರ ತೋರಿಕೆಗಳ ಮೇಲಿಂದ ಹೇಳುವುದಾದರೆ ರಾಜಕಾರಣವು ಮೇಲೆ ಹೇಳಿದ ಯಾವುದನ್ನೂ ಮೀರಿಸುವಷ್ಟು ತೀವ್ರವಾದ ಆಸಕ್ತಿಯನ್ನು ಪ್ರೇರಿಸುವ ಉದ್ಯಮವೆಂದು ಅನಿಸುತ್ತದೆ.

ಇರಲಿ. ರಾಜಕಾರಣವು ಒಂದು ಆದರ್ಶವಾಗಿರಬಲ್ಲದು ; ಹಾಗೆಯೆ ರಾಜಕಾರಣವು ಆಚರಣೆಯಲ್ಲಿ ಪತಿತವೂ ಆಗಿರಬಲ್ಲದು. ಆದರ್ಶವೆನ್ನುವುದಾದರೆ ನನಗೆ ಅದರಲ್ಲಿ ಏನೂ ಅಪಾಯ ಕಾಣಿಸುವುದಿಲ್ಲ. ಆದರ್ಶ ರಾಜಕಾರಣವು ವಿಷಯಗಳನ್ನು ನೀವು ಲಕ್ಷ್ಯಪೂರ್ವಕವಾಗಿ ಅಧ್ಯಯನ ಮಾಡಿ ಅಣಿಯಾಗಬೇಕೆಂದು ಅಪೇಕ್ಷಿಸುತ್ತದೆ; ನೀವು ಜನಸೇವಕನ ಸ್ಥಾನದಲ್ಲಿರಬೇಕೆಂದೂ ಸದಾ ಜನತೆಯ ಹಿತೈಷಿಯಾಗಿರಬೇಕೆಂದೂ ಇಡೀ ಜನತೆಯ ಹಿತವನ್ನು ನಿಮ್ಮ ವೈಯಕ್ತಿಕ ಹಿತಕ್ಕಿಂತ ಅಥವಾ ಸಮಾಜದ ಒಂದು ಅಂಶದ ಹಿತಕ್ಕಿಂತ ಮೇಲೆಂದು ಬಗೆಯುವುದರಲ್ಲಿ ನೀವು ನಿರಂತರವಾಗಿ ತರಬೇತಿ ಹೊಂದಬೇಕೆಂದೂ ಅದು ಅಪೇಕ್ಷಿಸುತ್ತದೆ ; ನೀವು ಸದಾ ಸಾರ್ವಜನಿಕ ವ್ಯವಹಾರದತ್ತ ಏಕಾಗ್ರತೆಯಿಂದ ಲಕ್ಷಿಸುತ್ತಿರಬೇಕೆಂದು ಅದು ಅಪೇಕ್ಷಿಸುತ್ತದೆ ; ಅದು ನಿಮ್ಮಂತೆ ರಾಜಕಾರಣದಲ್ಲಿ ನಿರತರಾದವರ ಮೇಲೆ ನೀವು ತನ್ನಂತೆ ಪರರ ಬಗೆಯುವ ಆದರ ಔದಾರ್ಯಗಳನ್ನು ಪ್ರದರ್ಶಿಸಬೇಕೆಂದೂ ಅಪೇಕ್ಷಿಸುತ್ತದೆ ; ಇದಲ್ಲದೆ ನೀವು ಪ್ರತಿಯೊಂದು ಪ್ರಶ್ನೆಯ ಬಗ್ಗೆ ನಿರ್ಣಯ ಮಾಡುವ ಮೊದಲು ಅದರ ಎಲ್ಲ ಪೂರ್ವಾಪರಗಳನ್ನು ತೂಗಿ ನೋಡಬೇಕೆಂದೂ ಪ್ರತಿಯೊಂದು ಅಂಶಕ್ಕೂ ನೀವು ಶಾಂತ ಮತ್ತು ಏಕಾಂತ ಚಿಂತನೆಯಿಂದ ಯೋಗ್ಯವಾದ ಮಹತ್ವವನ್ನಿತ್ತು ನಿರ್ಣಯಕ್ಕೆ ಬರಬೇಕೆಂದೂ ಎಲ್ಲಕ್ಕೂ ಮಿಗಿಲಾಗಿ ನೀವು

ಚುನಾವಣೆಯಲ್ಲೇ ಇರಲಿ ಪಾರ್ಲಿಮೆಂಟಿನ ಮುಂದೆ ಬರುವ ಪ್ರಶ್ನೆಗಳಲ್ಲೇ ಇರಲಿ ಕೇವಲ ಸಾರ್ವಜನಿಕ ಹಿತಾಕಾಂಕ್ಷೆಯಿಂದಲೇ ಮತ ಹಾಕಬೇಕೆಂದೂ ಅದು ಅಪೇಕ್ಷಿಸುತ್ತದೆ. ಯಾವ ಪಕ್ಷಕ್ಕೇ ಮತ ಹಾಕಲಿ, ಅದು ಕೇವಲ ನಿಮ್ಮ ಮನಸ್ಸಾಕ್ಷಿಗನುಗುಣವಾಗಿ, ಸಾರ್ವಜನಿಕ ಹಿತಕ್ಕಾಗಿರಬೇಕಲ್ಲದೆ ನಿಮ್ಮ ಸ್ವಂತ ಹಿತಕ್ಕಾಗಿ ಇರತಕ್ಕದಲ್ಲ. ಎಷ್ಟೋ ವೇಳೆ ಅದು ನಿಮ್ಮ ವೈಯಕ್ತಿಕ ಹಿತಕ್ಕೆ ವಿರುದ್ಧವಾಗಿರಬಹುದು, ನಿಮ್ಮ ಕುಟುಂಬ ಅಥವಾ ಖಾಸಗಿ ಮಿತ್ರ ವರ್ಗದ ಹಿತಕ್ಕೆ ವಿರುದ್ಧವಾಗಿರಬಹುದು. ಆದರೂ ನೀವು ಜನಸಾಮಾನ್ಯರ ಸೇವೆಗೆ ಅಣಿಯಾಗಬೇಕಾದ್ದು ಈ ದೃಷ್ಟಿಯಿಂದ. ಇದು ಆದರ್ಶ ರಾಜಕಾರಣ.

ಆದರೆ ಈ ಆದರ್ಶಕ್ಕೂ ನಿಮ್ಮ ಸುತ್ತ ನೀವು ಕಾಣುವ ಆಚರಣೆಗೂ ಎಷ್ಟು ದೂರವಿದೆ! ರಾಜಕಾರಣದಲ್ಲಿ ಭ್ರಷ್ಟಾಚಾರ ಹೇಗೆ ಮೊದಲಾಗುತ್ತದೆ, ಅದರಿಂದ ಮಾನವರು ಹೇಗೆ ಅಧೋಗತಿಗಿಳಿಯುತ್ತಾರೆ, ಸಾರ್ವಜನಿಕ ಜೀವನದ ನೀತಿಯನ್ನು ಅವರು ಹೇಗೆ ಮರೆಯುತ್ತಾರೆ, ಅವರು ಸಮಾಜ ಹಿತವೆಂಬ ಮುಖ್ಯ ಹೇತುವನ್ನು ಹೇಗೆ ಬದಿಗೆ ತಳ್ಳುತ್ತಾರೆ ಎಂದು ವಿವರಿಸುತ್ತ ಹೋಗುವುದಾದರೆ ನಿಮ್ಮನ್ನು ರಾಜಕಾರಣದ ಹೊಲಸಿನ ಮೂಲಕ ಎಳೆದಂತಾದೀತು. ಹೀಗೆ ದಾರಿತಪ್ಪಿದ ಮನುಷ್ಯ ಸಾರ್ವಜನಿಕ ಹಿತಕ್ಕೆ ಅನುಕೂಲವಾಗುವಂತೆ ಮತ ಹಾಕದಿದ್ದುದಕ್ಕೆ ಎಂತೆಂತಹದೋ ಯುಕ್ತಿವಾದವನ್ನು ಸೃಷ್ಟಿಸುತ್ತಾನೆ. ಅದರ ಮೂಲಕ ತನ್ನ ಮನಃಸಾಕ್ಷಿಯನ್ನು ನಿದ್ರೆಗೆ ತೂಗಿರಿಯುತ್ತಾನೆ. "ಆಹಾ ತಪ್ಪೇನು? ನಾನು ಅತ್ಯುಚ್ಚ ಆದರ್ಶಕ್ಕೆ

ಮತ ಹಾಕಲಿಲ್ಲ ನಿಜ; ಆದರೂ ನಿಃಸ್ವಾರ್ಥದಿಂದ ತಾನೆ ಮತ ಹಾಕಿದ್ದೇನೆ ಏಕೆಂದರೆ ನಾನು ನನ್ನ ನಾಯಕನ ಇಚ್ಛೆಯಂತೆ, ಅಥವಾ ನನ್ನ ಪಕ್ಷದ ಆಜ್ಞೆಯಂತೆ, ಅಥವಾ ನನ್ನ ನೆರೆಹೊರೆಯವರ ಅಪೇಕ್ಷೆಯಂತಲ್ಲವೇ ಮತ ಹಾಕಿದ್ದು? "

ಹೌದು, ಸೈತಾನನು ತನ್ನ ನುಡಿಗಳಿಗೆ ಕಿವಿಗೊಡಲು ಸಿದ್ಧರಾಗಿರುವವರಿಗೆ ಹೀಗೆಯೇ ಮಾರ್ಗದರ್ಶನ ಮಾಡುತ್ತಾನೆ, ಅವರನ್ನು ಹೀಗೆಯೆ ತನ್ನ ಕೈಗೊಂಬೆಗಳಾಗಿ ಮಾಡಿಕೊಳ್ಳುತ್ತಾನೆ. " ಹೇಳಿ ಕೇಳಿ ನೀನು ಇದರಲ್ಲಿ ಸ್ವಂತ ಲಾಭಮಾಡಿಕೊಂಡಿಲ್ಲ; ಇಲ್ಲ, ನಾನು ಸೂಚಿಸಿದಂತೆ ಮತ ಕೊಟ್ಟು ನೀನು ವೈಯಕ್ತಿಕ ಹಿತವನ್ನು ಸಾಧಿಸಿಕೊಳ್ಳಬಯಸುವುದಿಲ್ಲ. ನೀನು ಮತವೀಯುತ್ತಿರುವುದು ಸ್ವಂತ ಹಿತಕ್ಕಿಂತ ವಿಸ್ತಾರವಾದ ಈ ಹಿತಕ್ಕೆ, ಅಥವಾ ಆ ಹಿತಕ್ಕೆ." ಅರ್ಥಾತ್ ನೀವು ರಾಜಕಾರಣದಲ್ಲಿ ಅತ್ಯುಚ್ಚ ಪದವಿಯಲ್ಲಿರದೆ ಮಧ್ಯದ ಯಾವುದೇ ಹಂತದಲ್ಲಿದ್ದವರಾದರೆ ಮನಃಸಾಕ್ಷಿಯ ಸಂಗಡ ಗುದುಮುರಿಗೆ ಹಾಕಿ ಅಂತೂ ನಿಮ್ಮನ್ನು ನಿರಪರಾಧಿಯೆಂದು ತೀರ್ಮಾನಿಸಿಕೊಳ್ಳುತ್ತೀರಿ.

ರಾಷ್ಟ್ರಹಿತಕ್ಕೆ ವಿರುದ್ಧವಿರುವ ತಮ್ಮ ಧ್ಯೇಯಕ್ಕಾಗಿ ಹೋರಾಡಿದವರೆಷ್ಟೋ ಸಂಭಾವಿತರು ಇದನ್ನೇ ಹೇಳುತ್ತಾರೆ: "ಆದರೂ ನಾನು ಮಾಡಿದ್ದು ಸರಿಯೇ, ನನ್ನ ಹೃದಯ ಶುದ್ಧವಾಗಿದೆ. ನಾನು ಹೋರಾಡಿದ್ದು ನನ್ನ ಧ್ಯೇಯಕ್ಕಾಗಿ" ನಮ್ಮ ವಿಶಾಲ ರಾಷ್ಟ್ರವಾದ ಭಾರತದ ಹಿತವನ್ನು ವಿರೋಧಿಸಿ ತನ್ನ ಹಳ್ಳಿಯ ಅಥವಾ ತನ್ನ ಜಿಲ್ಲೆಯ ಅಥವಾ ತನ್ನ ಪ್ರಾಂತದ ಹಿತಕ್ಕಾಗಿ ಹೋರಾಡಿದವನೂ ತನ್ನ ಮನಃಸಾಕ್ಷಿಯನ್ನು ಸಮಾಧಾನಪಡಿಸುವುದು ಹಾಗೆಯೆ. "ನನ್ನನ್ನು ಹೀಗೇಕೆ ಪೀಡಿಸುತ್ತಿ? ಹೀಗೆ ಮತಹಾಕಿದ್ದರಿಂದ ನನಗೆ ದುಡ್ಡು ಸಿಕ್ಕಿತೇ? ಬದಲಿಗೆ ಅನೇಕರನ್ನು ಸಿಟ್ಟಿಗೆಬ್ಬಿಸಿ ಸ್ವಂತಕ್ಕೆ ಕಷ್ಟವನ್ನೇ ತಂದುಕೊಳ್ಳುತ್ತಿದ್ದೇನೆ. ಆದರೆ ನಾನೇನು ಮಾಡಲಿ? ನನ್ನ ಪಕ್ಷ ನಾನು ಹೀಗೆಯೆ ಮತ ಹಾಕಬೇಕೆನ್ನುತ್ತದೆ. ನಿನ್ನೆ ರಾತ್ರಿ ೧೧ ಹೊಡೆದ ಮೇಲೆ, ಆಮೂಲಾಗ್ರವಾಗಿ ಪರಿಪಕ್ವ ವಿಚಾರದ ನಂತರ ಒಂದೇ ಮತದ ಬಹುಮತದಿಂದ ನಾವು ಹೀಗೆಯೆ ಮತ ಹಾಕಬೇಕೆಂದು ಅದು ನಿರ್ಣಯಿಸಿತು." ನಿಜ, ಯುಕ್ತಿ ತುಂಬ ಸೂಕ್ಷ್ಮವಾಗಿದೆ, ಬಲು ಮನಂಬುಗುವಂತೆ ವಾದಿಸಲ್ಪಟ್ಟಿದೆ; ಆದರೂ ಅದು ಸಾರ್ವಜನಿಕ ಜೀವನದ ಅಧೋಗತಿಯೇ ಸೈ. ಯುಕ್ತಿವಾದದ ಬಲದಿಂದ ಮನುಷ್ಯನ ಹೊಣೆಗಾರಿಕೆಯನ್ನು ಜಾರಿಸಲು ಬಂದೀತಲ್ಲದೆ ಅದು ನ್ಯಾಯ, ಸತ್ಯ ಮಾರ್ಗವಾಗದು.

ಆದರೆ ಈ ಯುಕ್ತಿವಾದದಿಂದ ಮುಕ್ತರಾದ ಸಾರ್ವಜನಿಕ ಮುಂದಾಳುಗಳು ಸಿಗುವುದು ದುಷ್ಕರ. ನಮ್ಮ ಸದ್ಭಾವನೆಯ ಒಂದಲ್ಲ ಒಂದು ಬಾಗಿಲಿಂದಲೆ ಇಂಥ ವಿಚಾರಗಳು ಪ್ರವೇಶಿಸುತ್ತವೆ. ಇಂಥ ಯುಕ್ತಿವಾದಕ್ಕೆ ನಾವೆಲ್ಲರೂ ಒಂದಲ್ಲ ಒಂದು ವಿಧದಿಂದ ಮರುಳಾಗುತ್ತೇವೆ. ಆದರೆ ಅವೆಲ್ಲವೂ ಸಾರ್ವಜನಿಕ ಕರ್ತವ್ಯದ ಮಟ್ಟದಿಂದ ಅಧಃಪತನವೇ ಸೈ. ಉನ್ನತತಮ ಧರ್ಮದ ಸಂಗದಲ್ಲೇ ಸದಾ ಯಾರು ಬಾಳುತ್ತಾರೋ ಅವರು ಮಾತ್ರವೇ ನಿಜವಾದ ಜನಸೇವಕರಾಗಬಲ್ಲರು. *



# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ವೈಹಾಳಿ
(ಅ) ಶೋಕಿ ಹುಡುಗಿ (ಆ) ಉಪಟಳ (ಇ) ಸಂನ್ಯಾಸಿ (ಈ) ಕುದುರೆಗಳ ಸಾಲು

೨. ಅನಿಮಿತ್ತ
(ಅ) ಅಪಶಕುನ (ಆ) ಕಣ್ಣು ಮುಚ್ಚದ (ಇ) ಕಾರಣವಿಲ್ಲದ (ಈ) ಅಂಕೆಗೆಟ್ಟ

೩. ವಿವಿಕ್ತ
(ಅ) ಪ್ರಸಿದ್ಧ (ಆ) ಏಕಾಂತ (ಇ) ತೂತು ಬಿದ್ದ (ಈ) ಅಯೋಗ್ಯ

೪. ಹಿಳಿ
(ಅ) ಒಡೆ (ಆ) ಕಣ್ಣುಮುಚ್ಚು (ಇ) ಬಿಗಿದಪ್ಪು (ಈ) ಚೆಂಡು

೫. ಉಪಾತ್ತ
(ಅ) ಕೊನೆಯ (ಆ) ಪಡೆದ (ಇ) ದೂರೀಕರಿಸಿದ (ಈ) ಹೆಸರಾಂತ

೬. ನಿವಿಷ್ಟ
(ಅ) ಮನಸಿಲ್ಲದ (ಆ) ಉಳಿದ (ಇ) ಹೊಕ್ಕ (ಈ) ದಟ್ಟವಾದ

೭. ಬಾವನ್ನ
(ಅ) ಶ್ರೀಗಂಧ (ಆ) ಚಿನ್ನ (ಇ) ಮೋಡ (ಈ) ಹುಣ್ಣು

೮. ಮೂರ್ಧನ್ಯ
(ಅ) ಸಾರ್ಥಕ (ಆ) ಬವಳಿ ಬಂದ (ಇ) ಒಂದು ಬಗೆಯ ಕಾಳು (ಈ) ಶ್ರೇಷ್ಠ

೯. ಸುಭಗ
(ಅ) ಸುಂದರ (ಆ) ಬಿರುಕು ಬಿಟ್ಟ (ಇ) ಸಂಪಾದನೆ (ಈ) ಶೂರ

೧೦. ನಿಷಣ್ಣ
(ಅ) ದುಃಖಿ (ಆ) ಕುಳಿತ (ಇ) ಸ್ನಾನ ಮಾಡಿದ (ಈ) ಸತ್ತ

೧೧. ಬಿಬ್ಬೋಕ
(ಅ) ಪ್ರೀತಿ (ಆ) ಮಂದ ಪ್ರಕಾಶ (ಇ) ಕನ್ನಡಿ (ಈ) ಹುಸಿ ಅಲಕ್ಷ್ಯ

೧೨. ಅವಲಿಪ್ತ
(ಅ) ವಿರಕ್ತ (ಆ) ಗಂಧ ಪೂಸಿದ (ಇ) ಅಹಂಕಾರಗೊಂಡ (ಈ) ಖಾಲಿ



# 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

೧. ವೈಹಾಳಿ (ಈ) ಕುದುರೆಗಳ ಸಾಲು, ಅವುಗಳ ಪ್ರದರ್ಶನ, ಕುದುರೆಯೋಟದ ಪ್ರದರ್ಶನ. [ಸಂ. ವಾಹ್ಯಾಳಿ]

೨. ಅನಿಮಿತ್ತ (ಇ) ಕಾರಣವಿಲ್ಲದ, ಆಧಾರವಿಲ್ಲದ, ಉಚಿತವಲ್ಲದ; ಸ್ವೇಚ್ಛೆಯಿಂದಿರುವ, ಸ್ವಚ್ಛಂದ. ಉದಾ:- ಆತನೊಬ್ಬ ನನಗೆ ಅನಿಮಿತ್ತ ಬಾಂಧವ ಎಂದರೆ ಯಾವ ಕಾರಣವೂ ಇಲ್ಲದೆ ದೊರೆತ ಸಹಾಯಕ. [ಸಂ. ಅ + ನಿಮಿತ್ತ]

೩. ವಿವಿಕ್ತ (ಆ) ಏಕಾಂತ, ಯಾರೂ ಇಲ್ಲದ, ಪ್ರತ್ಯೇಕವಾದ; ವಿವೇಕಯುಕ್ತ; ಗಾಢ; ಶುದ್ಧ, ನಿರ್ದುಷ್ಟ. ಉದಾ:- ವಿವಿಕ್ತವಾಗಿ ವಿಚಾರ ಮಾಡಿ ಎಂದರೆ ಏಕಾಂತದಲ್ಲಿ ಯೋಚಿಸಿ. [ಸಂ.]

೪. ಹಿಳಿ (ಅ) ಒಡೆ, ಬಿರುಕು ಬಿಡು, ಹಿಸಿ, ಸ್ಫೋಟವಾಗು. [ಕನ್ನಡ]

೫. ಉಪಾತ್ತ (ಆ) ಪಡೆದ, ಸಂಗ್ರಹಿಸಿದ; ಕಸಿದುಕೊಂಡ. ಉದಾ:- ಉಪಾತ್ತವಾದ ವಿದ್ಯೆಯನ್ನು ಸ್ವಪ್ರಯತ್ನದಿಂದ ಬೆಳಸಿಕೊ. [ಸಂ. ಉಪ = ಹತ್ತಿರ + ಆತ್ತ = ತೆಗೆದುಕೊಂಡ]

೬. ನಿವಿಷ್ಟ (ಇ) ಹೊಕ್ಕ, ಪ್ರವೇಶಿಸಿದ, ಕುಳಿತ; ದೃಢವಾಗಿ ಸೇರಿಕೊಂಡ. ಉದಾ:- ಅವನ ಹೃದಯದಲ್ಲಿ ನಿವಿಷ್ಟವಾದ ಧ್ಯೇಯವಿದು. [ಸಂ. ನಿ + ವಿಶ್ = ಪ್ರವೇಶಿಸು.]

೭. ಬಾವನ್ನ (ಅ) ಶ್ರೀಗಂಧ [ಕನ್ನಡ]

೮. ಮೂರ್ಧನ್ಯ (ಈ) ಶ್ರೇಷ್ಠ, ಮುಖ್ಯ; ತಲೆಗೆ ಸಂಬಂಧಿಸಿದ. ಉದಾ:- ಈತ ಭಕ್ತರಲ್ಲಿ ಮೂರ್ಧನ್ಯ ಎಂದರೆ ಶ್ರೇಷ್ಠ ಭಕ್ತ. [ಸಂ. ಮೂರ್ಧನ್ = ಹಣೆ, ತಲೆ ಆದ್ದರಿಂದ ಮುಖ್ಯ]

೯. ಸುಭಗ (ಅ) ಸುಂದರ, ರೂಪವಂತ, ಮನೋಹರ; ಸುದೈವಿ, ಭಾಗ್ಯಶಾಲಿ, ಸುಖಿ, ಕಲ್ಯಾಣಕರ; ಪ್ರೀತಿ ಪಾತ್ರ. ಉದಾ:- ಶ್ರೀಕೃಷ್ಣನ ಸುಭಗಮೂರ್ತಿ ಕಣ್ಮುಂದೆ ನಿಂತಿತ್ತು. [ಸಂ.]

೧೦. ನಿಷಣ್ಣ (ಆ) ಕುಳಿತ, ಮಂಡಿಸಿದ [ಸಂ. ನಿಷೀದ್ = ಕೂತುಕೊ]

೧೧. ಬಿಬ್ಬೋಕ (ಈ) ಅಲಕ್ಷ್ಯದ ನಟನೆ, ಪ್ರೀತಿಪಾತ್ರನ(ಳ) ಮೇಲೆ ಅಹಂಕಾರ ಅಥವಾ ಗರ್ವದಿಂದ ಅಲಕ್ಷ್ಯ ಮಾಡಿದಂತೆ ನಟಿಸುವುದು, ಹುಸಿ ಮುನಿಸು. [ಸಂ.]

೧೨. ಅವಲಿಪ್ತ (ಇ) ಅಹಂಕಾರಗೊಂಡ, ಗರ್ವಗೊಂಡ. ಉದಾ:- ಪಾಂಡಿತ್ಯದಿಂದ ಅವನ ಮನಸ್ಸು ಅವಲಿಪ್ತವಾಗಿತ್ತು. [ಸಂ.]

---

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | ... | ಸಾಧಾರಣ |
| ೯—೧೦ | " ... | ಉತ್ತಮ |
| ೧೧—೧೨ | " .... | ಅತ್ಯುತ್ತಮ |

---

ತೊಂದರೆಯೆಂದರೆ
ಸೂರ್ಯನನ್ನು ಭೂಮಿ ಸುತ್ತುವರಿಯಲು
ಅಪೂರ್ಣಾಂಕ ದಿನಗಳನ್ನು ತೆಗೆದುಕೊಳ್ಳುತ್ತದೆ!

# ಕ್ಯಾಲೆಂಡರಿನ ರಾಮಾಯಣ!

ಪ್ರ. ನ. ಶ್ರೀನಿವಾಸ

ನಮಗೆಲ್ಲಾ ಗೊತ್ತೇ ಇದೆ, ಸೂರ್ಯ ಭೂಮಿಯ ಸುತ್ತ ಸುತ್ತದಿದ್ದರೂ ಸಹ, ಅವನು ಭೂಮಿಯ ಸುತ್ತಲೂ ಸುತ್ತುತ್ತಿರುವಂತೆ ಕಾಣಿಸುತ್ತದೆ. ಈ ರೀತಿ ಭೂಮಿಯ ಸುತ್ತಲೂ ಸೂರ್ಯ ಒಂದು ಸುತ್ತು ಸುತ್ತಲು ತೆಗೆದುಕೊಳ್ಳುವ ಸಮಯವನ್ನು ಒಂದು ವರ್ಷವೆಂದು ನಾವು ಕರೆಯುತ್ತೇವೆ.

ಮೊದಲು ಅಂದರೆ ಕ್ರಿಸ್ತನಿಗೂ ಬಹಳ ಹಿಂದಿನಿಂದ ಮೂರು ರೀತಿಯ ವರ್ಷಗಳು ಇವೆ. ಸೌರಮಾನ ವರ್ಷ ಅಥವಾ ಸಂಕ್ರಾಂತಿ ವರ್ಷ (Tropical year) ಎಂದು ಕರೆಯಲ್ಪಡುವ ವರ್ಷದಲ್ಲಿ ಒಟ್ಟು ೩೬೫.೨೪೨೨ ದಿನಗಳೂ ನಾಕ್ಷತ್ರಿಕ ವರ್ಷ (Sidereal year) ಎಂದು ಕರೆಯಲ್ಪಡುವ ವರ್ಷದಲ್ಲಿ ೩೬೫.೨೫೬೪ ದಿನಗಳೂ ಗ್ರಹವರ್ಷ (Anomalistic year ಭೂಮಿ ಅಥವಾ ಇತರ ಗ್ರಹಗಳು ಸೂರ್ಯ ನೀಚದಿಂದ ಪುನಃ ಸೂರ್ಯ ನೀಚಕ್ಕೆ ಬರಲು ಹಿಡಿಯುವ ಕಾಲ) ಎಂಬ ವರ್ಷದಲ್ಲಿ ೩೬೫.೨೫೯೬ ದಿನಗಳೂ ಇವೆ.

ಆದರೆ ನಮ್ಮ ದಿನನಿತ್ಯದ ವ್ಯವಹಾರಗಳಿಗೆ ಈ ಮೇಲಿನ ವರ್ಷಗಳಲ್ಲಿಯಾವುವೂ ಹೊಂದದೇ ಹೋದ ಕಾರಣ, ನಾಲ್ಕನೇ ವಿಧವಾದ ವರ್ಷ ಪ್ರಾರಂಭವಾಯಿತು. ಅನುಕೂಲಕ್ಕೋಸ್ಕರ ಈ ವರ್ಷದಲ್ಲಿ ೩೬೫ ದಿನಗಳು ಮಾತ್ರ ಇವೆ. ಈ ರೀತಿಯ ವರ್ಷವನ್ನು ವ್ಯಾವಹಾರಿಕ ವರ್ಷ (Civil year) ಎಂದು ಕರೆದರು. ಈಗ ನಾವು ಕ್ಯಾಲೆಂಡರಿನಲ್ಲಿ ಉಪಯೋಗಿಸುವ ವ್ಯಾವಹಾರಿಕ ವರ್ಷ ಮೂಲದಲ್ಲಿ ರೋಮನ್ನರು ಉಪಯೋಗಿಸಿದ್ದು. ಆದರೆ ಈ ವರ್ಷದ ಪ್ರಾರಂಭದ ತಿಂಗಳು ಈಗಿನಂತೆ 'ಜನವರಿ' ಯಾಗಿರಲಿಲ್ಲ! ಮಾರ್ಚ್ ತಿಂಗಳಿನಿಂದ ಪ್ರಾರಂಭವಾಗುತ್ತಿತ್ತು ಈ ವ್ಯಾವಹಾರಿಕ ವರ್ಷ. ಅದು 'ಡಿಸೆಂಬರ್' ತಿಂಗಳಲ್ಲಿ ಕೊನೆಗೊಳ್ಳುತ್ತಿರಲಿಲ್ಲ. ಬದಲಾಗಿ 'ಫೆಬ್ರುವರಿ' ತಿಂಗಳಲ್ಲಿ ಮುಗಿಯುತ್ತಿತ್ತು.

ಈ ವ್ಯಾವಹಾರಿಕ ವರ್ಷದ ತಿಂಗಳುಗಳು ಕ್ರಮವಾಗಿ ಮಾರ್ಚ್, ಏಪ್ರಿಲ್, ಮೇ, ಜೂನ್ ಕ್ವಿಂಟಿಲಿಸ್, ಸೆಕ್ಸ್ಟಿಲಿಸ್, ಸೆಪ್ಟೆಂಬರ್, ಅಕ್ಟೋಬರ್, ನವಂಬರ್ ಹಾಗೂ ಡಿಸೆಂಬರ್ ಆಗಿದ್ದುವು. ಮಾರ್ಚ್, ಮೇ, ಜೂನ್, ಈ ಹೆಸರುಗಳು ರೋಮನ್‌ದೇವತೆಗಳನ್ನನುಸರಿಸಿದವು. ಏಪ್ರಿಲ್ ಎಂದರೆ ಪುಷ್ಪಗಳು ಅರಳುವ ತಿಂಗಳೆಂದರ್ಥ. ಕ್ವಿಂಟಿಲಿಸ್ (ಐದನೆಯ), ಸೆಕ್ಸ್ಟಿಲಿಸ್ (ಆರನೆಯ), ಸೆಪ್ಟೆಂಬರ್ (ಸಪ್ತ) ಏಳನೆಯ, ಅಕ್ಟೋಬರ್ (ಅಷ್ಟ) ಎಂಟನೆಯ, ನವಂಬರ್ (ನವ) ಒಂಬ-

ತ್ತನೆಯ ಹಾಗೂ ಡಿಸೆಂಬರ್ (ದಶ) ಹತ್ತನೆಯ ತಿಂಗಳುಗಳಾಗಿದ್ದುವೆಂಬುದನ್ನು ಅವುಗಳ ಹೆಸರುಗಳೇ ಸೂಚಿಸುತ್ತವೆ. ಜನವರಿಯೂ ದೇವತೆಯ ಹೆಸರಿಂದಲೇ ಬಂದದ್ದು. ಫೆಬ್ರುವರಿ ಪ್ರಾಯಶ್ಚಿತ್ತ ವಿಧಿಗಳ ತಿಂಗಳಾಗಿತ್ತು.

ಆದರೆ ಈ ತಿಂಗಳಲ್ಲಿ ಇಷ್ಟೇ ದಿನಗಳಿವೆ ಎಂದು ಹೇಳುವುದಕ್ಕೇ ಆಗುತ್ತಿರಲಿಲ್ಲ! ಏಕೆಂದರೆ ಒಂದೊಂದು ತಿಂಗಳಿನ ದಿನಗಳ ಸಂಖ್ಯೆಯನ್ನು ಅಧಿಕ ಮಾಡುವ ಅಥವಾ ಕಮ್ಮಿ ಮಾಡುವ ಅಧಿಕಾರ ಆ ರಾಜ್ಯದ ದೊಡ್ಡ ಅಧಿಕಾರಿಗಳಿಗೂ ರಾಜರಿಗೂ ಇತ್ತು. ಅವರು ತಮ್ಮ ಅನುಕೂಲಕ್ಕೆ ತಕ್ಕಂತೆ ತಿಂಗಳುಗಳಲ್ಲಿ ದಿನಗಳನ್ನು ಏರಿಳಿಸುತ್ತಿದ್ದರು. ಉದಾಹರಣೆಗೆ ಏಪ್ರಿಲ್ ಮೊದಲಲ್ಲಿ ಓರ್ವ ದೊಡ್ಡ ಅಧಿಕಾರಿ ಕೆಲಸದಿಂದ ನಿವೃತ್ತಿಯಾಗುತ್ತಾನೆ ಎಂದು ಇಟ್ಟುಕೊಳ್ಳಿ. ಆಗ ಆ ವ್ಯಕ್ತಿ 'ಕ್ಯಾಲೆಂಡರ್' ಮೇಲೆ ಅಧಿಕಾರ ಚಲಾಯಿಸಿ, 'ಈ ವರ್ಷ ಮಾರ್ಚಿ ತಿಂಗಳಲ್ಲಿ ೪೫ ದಿನಗಳು' ಎಂದು ಸಾರಿ ಬಿಡುತ್ತಿದ್ದ. ಆದರಿಂದ ಅವನು ಸುಮಾರು ೧೫ ದಿನಗಳು ನಿಧಾನವಾಗಿ ನಿವೃತ್ತಿಯಾಗುತ್ತಿದ್ದ! ಹೀಗಾಗಿ ಕ್ಯಾಲೆಂಡರ್ ಎಂಬುದೊಂದು ಕೋಲಾಹಲವಾಗಿಹೋಗಿತ್ತು.

ಸಾಲದ್ದಕ್ಕೆ ನಾಲ್ಕು 'ವ್ಯಾವಹಾರಿಕ ವರ್ಷ'ಗಳು ನಾಲ್ಕು ಸರಿಯಾದ 'ಸೌರಮಾನ ವರ್ಷ'ಗಳಿಗಿಂತ ಸುಮಾರು ಒಂದು ದಿನ (೦.೯೭೮೮ ದಿನ) ಕಮ್ಮಿಯಾಗುತ್ತವೆ. ಹೀಗೆಯೇ ಸೂರ್ಯ ಹೊರಟ ಸ್ಥಾನಕ್ಕೆ ಪುನಃ ಹಿಂತಿರುಗಬೇಕಾದರೆ ೩೬೫ ದಿನಗಳು, ಎಂದು ಲೆಕ್ಕ ಹಾಕುತ್ತ ಬಹಳ ಕಾಲ ತಳ್ಳಿದ ನಂತರ, ಸೌರಮಾನ ವರ್ಷದಲ್ಲಿ ಕಳೆದ ದಿನಗಳ ಸಂಖ್ಯೆಗೂ ವ್ಯಾವಹಾರಿಕ ವರ್ಷದಲ್ಲಿ ಕಳೆದ ದಿನಗಳ ಲೆಕ್ಕಕ್ಕೂ ವ್ಯತ್ಯಾಸ ಬಂದು, ಋತುಗಳು ವರ್ಷದಲ್ಲಿ ಎಣಿಕೆಗಿಂತಲೂ ನಿಧಾನವಾಗಿ ಪ್ರಾರಂಭವಾಗಲು ಸುರುವಾಯಿತು.

ಈ ಕಷ್ಟವನ್ನು ಸ್ವಲ್ಪ ಮಟ್ಟಿಗಾದರೂ ಸರಿ ಮಾಡಿದವನು ರೋಮಿನ ಚಕ್ರವರ್ತಿ ಜ್ಯೂಲಿಯಸ್ ಸೀಜರ್ (ಕ್ರಿ. ಪೂ. ೪೫ನೇ ಇಸವಿಯಲ್ಲಿ). ತನ್ನ ಆಸ್ಥಾನದಲ್ಲಿದ್ದ ಪ್ರಸಿದ್ಧ ಜ್ಯೋತಿಷಿಯಾದ ಸೋಸಿಜೆಸ್ ಎಂಬವನ ಸಹಾಯದಿಂದ, ಸೀಜರನು ಅಧಿಕ ವರ್ಷ (leap year) ಎಂದು ನಾಲ್ಕರಿಂದ ಭಾಗವಾಗುವ ಸಂಖ್ಯೆಯ ವರ್ಷಗಳಿಗೆ ಹೆಸರಿಟ್ಟು, ಅವುಗಳಲ್ಲಿ ಮಿಕ್ಕ ವರ್ಷಕ್ಕಿಂತ ಒಂದು ದಿನ ಅಧಿಕ ಎಂದು ಘೋಷಿಸಿದ. ಆ ಒಂದು ದಿನ 'ಫೆಬ್ರುವರಿ'ಗೆ ಕೊಡಲ್ಪಟ್ಟಿತು. (ಅದಕ್ಕೆ ಆ ಹಿಂದೆ ಒಂದು ದಿನ ಕಮ್ಮಿ ಇತ್ತು.) ನಾಲ್ಕು ವ್ಯಾವಹಾರಿಕ ವರ್ಷಗಳು, ೪ ಸೌರಮಾನ ವರ್ಷಗಳಿಗಿಂತ ೦.೯೭೮೮ ದಿನ ಕಮ್ಮಿ ಇದ್ದುದು ಈಗ ೦.೦೩೧೨ ದಿನ ಜಾಸ್ತಿಯಾಗಿ ಹೋದುವು–ಈ ಒಂದು ದಿನ ಸೇರಿಸಿದ್ದುದರಿಂದ! (ಅಲ್ಲದೆ ಅದಕ್ಕೆ ಮೊದಲೇ ಆಗಿದ್ದ ಅವಾಂತರವನ್ನು ಸರಿಪಡಿಸುವುದಕ್ಕೆ ಅವನು ಆ ವರ್ಷಕ್ಕೆ ನವಂಬರ್–ಡಿಸೆಂಬರ್ ನಡುವೆ ೬೭ ದಿನಗಳನ್ನು ಸೇರಿಸಬೇಕಾಯಿತು. ಹೀಗಾಗಿ ಕ್ರಿ. ಪೂ. ೪೬ ನೇ ವರ್ಷ ೪೪೫ ದಿನ ಉದ್ದವಾಗಿತ್ತು!)

ಸೀಜರನಿಗೆ ಕೀರ್ತಿಯ ಆಸೆ ಬಹಳವಾಗಿಯೆ ಇತ್ತೆಂದು ಕಾಣುತ್ತದೆ! 'ಕ್ವಿಂಟಿಲಿಸ್' (ಪಂಚಮ) ಎಂದು ಹೆಸರಿದ್ದ ತಿಂಗಳನ್ನು ತನ್ನ ಹೆಸರಿನಿಂದ ಕರೆಯಬೇಕೆಂದು ಆಜ್ಞಾಪಿಸಿದ. ಆ ತಿಂಗಳು ಜುಲೈ ಎಂದು ಕರೆಯಲ್ಪಟ್ಟಿತು. ಅದೊಂದಕ್ಕೇ ಅವನಿಗೆ ತೃಪ್ತಿಯಾಗಲಿಲ್ಲ! ತನ್ನ ಹೆಸರಿನ ತಿಂಗಳಲ್ಲಿನ ದಿನಗಳು ಮಿಕ್ಕಾವ ತಿಂಗಳಿನ ದಿನಗಳ ಸಂಖ್ಯೆಗೂ ಕಡಿಮೆ ಇರಬಾರದೆಂದೆನಿಸಿತು ಅವನಿಗೆ! ಪಾಪ, ಫೆಬ್ರುವರಿ ಈ ಸೀಜರನ ಆಸೆಗೆ ಬಲಿ ಬೀಳಬೇಕಾಯಿತು. ಏಕೆಂದರೆ ಆತ ಫೆಬ್ರವರಿಯ ಒಂದು ದಿನವನ್ನು ತೆಗೆದು ಜುಲೈಗೆ ಸೇರಿಸಿದ. ೩೦ ದಿನಗಳಿದ್ದ ಫೆಬ್ರುವರಿಯಲ್ಲಿ ೨೯ ದಿನಗಳೇ ಉಳಿದುವು.

ಸೀಜರನು ಕಾಲವಾದ ಮೇಲೆ 'ಅಗಸ್ಟಸ್'

ರಾಜನಾಗಿ ಬಂದ. ಆತನೂ ಕೀರ್ತಿಗೆ ಆಸೆ ಪಡುವುದರಲ್ಲಿ ಸೀಜರನಿಗಿಂತ ಏನೂ ಕಡಿಮೆ ಯಾಗಿರಲಿಲ್ಲ. ಜುಲೈ ತಿಂಗಳು ಮುಗಿದ ಮೇಲೆ ಬರುವ ತಿಂಗಳಿಗೆ ಮೊದಲು ಇದ್ದ ಸೆಕ್ಸ್ಟಿಲಿಸ್ ಎಂಬ ಹೆಸರನ್ನು ಆತ ತನ್ನ ಹೆಸರಿಗೆ ಮಾರ್ಪಡಿಸಿಕೊಂಡ ಮೇಲೆ ಅದು ಅಗಸ್ಟ್ ಎಂದು ಕರೆಯಲ್ಪಟ್ಟಿತು. ಮೊದಲು ಆ ತಿಂಗಳಲ್ಲೂ ೩೦ ದಿನಗಳೇ ಇದ್ದುವು. "ತಾನೇನು ಸೀಜರನಿಗಿಂತ ಕಡಿಮೆ" ಎಂದು ಪುನಃ ಫೆಬ್ರುವರಿಯಿಂದ ಒಂದು ದಿನವನ್ನು ಕಿತ್ತು ಅಗಸ್ಟಿಗೆ ಸೇರಿಸಿದ. ಅದಕ್ಕೇ ಫೆಬ್ರುವರಿಗೆ ೨೮ ದಿನಗಳು, ಅಗಸ್ಟಿಗೆ ೩೧ ದಿನಗಳು.

ಸೀಜರನಿಂದ ತಿದ್ದಲ್ಪಟ್ಟ ಕ್ಯಾಲೆಂಡರಿಗೆ "ಜೂಲಿಯನ್ ಕ್ಯಾಲೆಂಡರ್" ಎಂಬ ಹೆಸರಾಯಿತು. ಹಿಂದೆಯೇ ಹೇಳಿದಂತೆ ನಾಲ್ಕು ವ್ಯಾವಹಾರಿಕ ವರ್ಷಗಳು, ಈ ಜೂಲಿಯನ್ ಕ್ಯಾಲೆಂಡರಿನ ಪ್ರಕಾರ, ನಾಲ್ಕು ಸೌರಮಾನ ವರ್ಷಗಳಿಗಿಂತ ೦.೦೩೧೨ ದಿನಗಳು ಹೆಚ್ಚಾಗಿದ್ದುವು. ಅಂದರೆ ನಾನ್ನೂರು ವರ್ಷಗಳುರುಳಿದರೆ ಈ ವ್ಯತ್ಯಾಸ ಅಧಿಕವಾಗಿ ೩·೧೨ ದಿನಗಳ ವ್ಯತ್ಯಾಸ ಬರುತ್ತದೆ.

ಹದಿಮೂರನೇ ಪೋಪ್ ಗ್ರಿಗರಿ ಖಗೋಳ ವಿಜ್ಞಾನದಲ್ಲಿ ಬಹಳ ಆಸಕ್ತಿ ಉಳ್ಳವನಾಗಿದ್ದ. ಆತನು ಸೂರ್ಯನ ಚಲನವಲನಗಳನ್ನು ಬಹಳ ಹುಷಾರಿನಿಂದ ಪ್ರತಿ ದಿನವೂ ಯಂತ್ರಗಳ ಸಹಾಯದಿಂದ ವೀಕ್ಷಿಸುತ್ತಿದ್ದ. ಅವನು ೧೫೮೨ ನೇ ಇಸವಿಯ ಮಾರ್ಚ ತಿಂಗಳ ೧೧ನೇ ತಾರೀಖಿನ ದಿನ ಸೂರ್ಯನ ಚಲನವಲನಗಳನ್ನು ಈಕ್ಷಿಸಲು, ಸೂರ್ಯನು ಮಾರ್ಚಿ ೨೧ ನೇ ತಾರೀಖಿನ ದಿನ ಯಾವ ರಾಶಿಯಲ್ಲಿ ಯಾವ ಸ್ಥಾನದಲ್ಲಿರಬೇಕಾಗಿತ್ತೋ (ಲೆಕ್ಕ ಹಾಕಿದ ಪ್ರಕಾರ) ಆ ಜಾಗದಲ್ಲಿ ೧೦ ದಿನಗಳ ಮುಂಚೆಯೇ ಇದ್ದ. ಈ ರೀತಿಯ ವಿಸ್ಮಯಕ್ಕೆ ಕಾರಣವೇನೆಂದು ಕಂಡು ಹಿಡಿಯಲು ಆತನಿಗೆ ಬಹಳ ಕಷ್ಟವಾಗಲಿಲ್ಲ. ಅವನು ಇದಕ್ಕೆ 'ವ್ಯಾವಹಾರಿಕ' ವರ್ಷಕ್ಕೂ ಸರಿಯಾದ 'ಸೌರಮಾನ' ವರ್ಷಕ್ಕೂ ಇರುವ ವರ್ಷವರ್ಷಕ್ಕೂ ಹೆಚ್ಚಿ ಹೋಗುವ ವ್ಯತ್ಯಾಸವೆ ಕಾರಣವೆಂಬುದನ್ನು ಕಂಡುಕೊಂಡ. ಈ ಪೋಪನು ತನ್ನ ಸಹಾಯಕ ಜ್ಯೋತಿಷಿ 'ಕ್ಲಾವಿಯಸ್'ನ ಸಹಾಯದಿಂದ ಈ ತಪ್ಪನ್ನು ಬಹು ಪಾಲು ತಿದ್ದಿದ. ಹತ್ತು ದಿನಗಳನ್ನು ಸ್ವಲ್ಪವೂ ಹಿಂದು ಮುಂದು ನೋಡದೇ ಸೆಪ್ಟೆಂಬರ್ ತಿಂಗಳಿಂದ ಕಳೆದ. ಸೆಪ್ಟೆಂಬರ್ ನಾಲ್ಕನೇ ತಾರೀಖು ಮುಗಿದ ಮೇಲೆ ಬರುವ ಐದನೇ ತಾರೀಖು ೧೫ ನೇ ತಾರೀಖೆಂದು ಕರೆಯಲ್ಪಟ್ಟಿತು. ಇದು ಪೋಪನ ವಾಕ್ಯವಾದ್ದರಿಂದ ಎಲ್ಲರೂ ಇದಕ್ಕೆ ಸಮ್ಮತಿಸಿದರು.

ಇಷ್ಟಾದರೂ ಮುಂದೆ ಬರುವ ನಾನ್ನೂರು ವರ್ಷಗಳಲ್ಲಿನ ವ್ಯತ್ಯಾಸವಾದ ೩.೧೨ ದಿನಗಳನ್ನು ಸರಿಮಾಡಿರಲಿಲ್ಲ. ಅದನ್ನೂ ಈತನೇ ತಕ್ಕಮಟ್ಟಿಗೆ ತಿದ್ದಿದುದು. ಎಲ್ಲ ಶತಕಗಳ ವರ್ಷ ( 1900,2000 etc. ) ನಾಲ್ಕರಿಂದ ಭಾಗವಾಗುತ್ತವೆ. ಆದ್ದರಿಂದ ಜ್ಯೂಲಿಯನ್ ಕ್ಯಾಲೆಂಡರಿನ ಪ್ರಕಾರ ಆ ವರ್ಷಗಳ ಫೆಬ್ರುವರಿ ತಿಂಗಳಲ್ಲಿ ೨೯ ದಿನಗಳಿರುತ್ತವೆ. ಆದರೆ ಗ್ರಿಗರಿಯು ಅದನ್ನು ತಿದ್ದಿದ. ಯಾವ ಶತಕ ವರ್ಷ ನಾಲ್ಕರಿಂದ ಭಾಗವಾಗುವುದೋ ಅದು ಮಾತ್ರ ಅಧಿಕ ದಿನದ ವರ್ಷವಾಗಿರುತ್ತದೆ. ಮಿಕ್ಕ ಶತಕವರ್ಷಗಳು ಹಾಗೆಯೇ ಇರುವವು ಎಂದು ಘೋಷಿಸಿ ಅದರಂತೆಯೇ ನಡೆಸಿದ. ಅದರಿಂದ ೧೯೦೦, ೨೧೦೦, ೨೨೦೦ ವರ್ಷಗಳೆಲ್ಲ ಅಧಿಕ ದಿನದ ವರ್ಷಗಳಲ್ಲ. ಆದರೆ ೨೦೦೦ (೨೦ ನಾಲ್ಕರಿಂದ ಭಾಗವಾಗುತ್ತದೆ) ಮಾತ್ರ ಅಧಿಕ ದಿನದ ವರ್ಷ. ಈ ರೀತಿಯ ತಿದ್ದುಪಡಿಯಿಂದ ೪೦೦ ವ್ಯಾವಹಾರಿಕ ವರ್ಷಗಳು ೪೦೦ ನಿಜವಾದ ವರ್ಷಗಳಿಗಿಂತ ಕೇವಲ ೦·೧೨ ದಿನಗಳಷ್ಟು ಅಧಿಕವಾಗುತ್ತವೆ. ಆದರೆ ೪೦೦೦ ವರ್ಷಗಳು ಉರುಳಿದರೆ ಈ ವ್ಯತ್ಯಾಸ ೧·೨ ದಿನಗಳಾಗುತ್ತವೆ ಎಂಬುದನ್ನು

ಮರೆಯಬಾರದು. ಇದಕ್ಕೆ ಇನ್ನೂ ಯಾರೂ ತಿದ್ದುಪಡಿ ಮಾಡಿಲ್ಲ!

೧೩ ನೇ ಪೋಪ್ ಗ್ರಿಗರಿ ಮಾಡಿದ ತಿದ್ದುಪಡಿ ರೋಮಿನಲ್ಲಿ ತಕ್ಷಣ ಜಾರಿಗೆ ಬಂತು ಇಂಗ್ಲೆಂಡಿನಲ್ಲಿ ೧೭೫ ವರ್ಷಗಳ ನಂತರ ಜಾರಿಗೆ ಬಂತು. ರಶಿಯದಲ್ಲಿ ಈ ಶತಮಾನದವರೆಗೂ ಜಾರಿಗೆ ಬಂದಿರಲಿಲ್ಲ! (೧೯೧೭ ರ ಕ್ರಾಂತಿಯ ನಂತರವೇ ಅದು ಜಾರಿಗೆ ಬಂತು; ಆ ವರ್ಷ ನವೆಂಬರಿನಲ್ಲಾದ ಕ್ರಾಂತಿಗೆ ರಶಿಯದಲ್ಲಿ ಅಕ್ಟೋಬರ ಕ್ರಾಂತಿಯೆಂದು ಹೆಸರಿದೆ!)

ಇಷ್ಟೆಲ್ಲಾ ಅವಾಂತರವಾದ ಮೇಲೂ ಕೂಡ ಇನ್ನೂ ಏನೇನನ್ನೋ ತಿದ್ದಬೇಕೆಂದು ವಿಜ್ಞಾನಿಗಳನೇಕರು ಸೂಚಿಸಿದರು!

ವ್ಯಾವಹಾರಿಕ ವರ್ಷದಲ್ಲಿ ೩೬೫ ದಿನಗಳಿವೆಯಲ್ಲವೆ? ಅವುಗಳನ್ನು ಸಮದಿನಗಳುಳ್ಳ ೧೩ ತಿಂಗಳುಗಳನ್ನಾಗಿ ವಿಂಗಡಿಸಿದರೆ ಪ್ರತಿ ತಿಂಗಳಲ್ಲೂ ನಾಲ್ಕು ವಾರಗಳ ೨೮ ದಿನಗಳಿರುತ್ತವೆ. ಮತ್ತು ಒಂದು ದಿನ ಮಾತ್ರ ಯಾವ ತಿಂಗಳಿಗೂ ಸೇರದೆ ಉಳಿಯುತ್ತದೆ. ಈ ರೀತಿ ತಲಾ ೨೮ ದಿನಗಳುಳ್ಳ ೧೩ ತಿಂಗಳುಗಳನ್ನು ಮಾಡಿ ಮಿಕ್ಕ ಒಂದು ದಿನವನ್ನು ವರ್ಷದ ಮಧ್ಯಕ್ಕೆ ಹಾಕಿ, ಆ ದಿನವನ್ನು ಶೂನ್ಯದಿನವೆಂದು (null day) ಕರೆಯಬೇಕೆಂದು ಅನೇಕರು ಸೂಚಿಸಿದರು! ಆ ಸೂಚನೆ ಬಿದ್ದುಹೋಯಿತು. ಏಕೆಂದರೆ ಕ್ರಿಶ್ಚಿಯನ್ನರಿಗೆ '೧೩' ಅನಿಷ್ಟ ಸಂಖ್ಯೆ!

ಮತ್ತೂ ಏನೇನೊ ಸೂಚನೆಗಳು ಹಾಗೂ ತಿದ್ದುಪಡಿಗಳು ಬಂದರೂ ಯಾವುದಕ್ಕೂ ಬೆಂಬಲ ಸಿಗದೇ ಇಲ್ಲಿಯ ವರೆಗೂ ಉಳಿದಿದೆ. ನಾವು ಅನುಸರಿಸುತ್ತಿರುವುದು "ಕ್ರಿಶ್ಚಿಯನ್ ಕ್ಯಾಲೆಂಡರ್!" ಮುಂದೆ ಏನೇನು ತಿದ್ದುಪಡಿಯಾಗುತ್ತವೆಯೋ ಕಾದು ನೋಡಬೇಕು. ಈಚೆಗೊಬ್ಬರು ೧೦೦೦ ದಿನಗಳ ಮೆಟ್ರಿಕ್ ಕ್ಯಾಲೆಂಡರ್ ಬೇಕೆಂದೂ ವಾದಿಸಿದ್ದಾರೆ. ★



"ಒಂದು ಸುದ್ದಿ ಕೇಳಿದೆ. ನಿಜವೇನ್ರಿ?"

"ಏನದು?"

"ನಿಮ್ಮ ಹೆಂಡತಿ ನಿಮ್ಮ ಅಡಿಗೆಯವನೊಡನೆ ಓಡಿ ಹೋದಳಂತೆ."

"ಹೌದು. ಅವನಿಗೆ ಘೋರ ಶಿಕ್ಷೆ ಕೊಡಬೇಕೆಂಬ ವಿಚಾರ ನನಗೂ ಇತ್ತು."

— ಡಿ. ಎನ್. ಶಂಕರ ಭಟ್ಟ

★

ಒಬ್ಬ–ಏನಯ್ಯಾ, ಯಾವುದೊ ಎತ್ತು ಗದ್ದೆ ಮೇಯ್ತಾ ಇದೆ. ನೀನಿಲ್ಲಿ ಬೇಲಿ ಕಟ್ತಾ ಇದಿಯಾ! ದೊಡ್ಡಿಗೆ ಹೊಡಿಬಾರ್ದೇ?

ಒಕ್ಕಲಿಗ–ಮತ್ತೇನು ಮಾಡ್ತಿದೀನಿ ಎಂದುಕೊಂಡಿ. ಗದ್ದೆ ಸುತ್ತಲೂ ಬೇಲಿ ಕಟ್ಟಿ ಅದನ್ನು ಹಿಡ್ದು ದೊಡ್ಡಿಗೆ ಎಳೆದುಕೊಂಡು ಹೋಗಬೇಕು ಅಂತಿದೀನಿ, ಅದ್ಕೇ ಈ ಬೇಲಿ ಹಾಕ್ತಿರೋದು.

—ರಾಮದಾಸ ವಾಮನ ಕಾಮತ


ಳ ಜಯದ ಗುಟ್ಟು ...
ಾರು, ನಾಳೆಯ ಸತ್ಕಾರ ೂಟದ ವಿಷಯವಾಗಿ ುಂಬಾ ಯೋಚನೆಯಾಗಿದೆ. ನ್ನ ಅಡಿಗೆಯು ಯಾವಾಗಲು ಹೊಲಸು.
ವಿಚಾರಮಾಡ ಬೇಡ, ಸರಸು. ನಾನು ಬಂದು ನಿನಗೆ ಸಹಾಯ ಮಾಡುತ್ತೇನೆ. ಸ್ವಲ್ಪ ತುಷಾರನ್ನು ಅಡಿಗೆಗೆ ತರಿಸು.


ಪಾರುವಿನ ಸಹಾಯಕ್ಕಾಗಿ ಮರುದಿನ ವಂದನೆಗಳು.
ನಿಮ್ಮ ಸತ್ಕಾರ ಕೂಟಕ್ಕೆ ತುಂಬಾ ವಂದನೆಗಳು. ಆಹಾರವು ತುಂಬಾ ರುಚಿಕರವಾಗಿತ್ತು.


ಪಾರು ಅಡುಗೆಯ ಗುಟ್ಟನ್ನು ತಿಳಿಸಿದ್ದಕ್ಕೆ ಸಂತೋಷವಾಗಿದೆ ಅದೇ ತುಷಾರ್.
ತುಷಾರ್
ವಿಟಮಿನ್ ಗಳನ್ನೊಳಗೊಂಡ ವನಸ್ಪತಿ
(ವಿಟಮಿನ್ A ಮತ್ತು D ಒಳಗೊಂಡಿದೆ)
ಮತ್ತು
ಶುದ್ಧೀಕರಿಸಿದ ತುಷಾರ್ ಎಣ್ಣೆ


ತುಂಗಭದ್ರಾ ಇಂಡಸ್ಟ್ರೀಸ್ ಲಿಮಿಟೆಡ್, ಕರ್ನೂಲ್.



# ಅನಿರೀಕ್ಷಿತ

ರಶಿಯನ್ ಸಾಹಿತ್ಯ ಪಿತಾಮಹ
ಪುಶ್ಕಿನ್ನನ ಒಂದು ಕಥೆ

೧೮೧೧ ರ ಕೊನೆಯ ಸುಮಾರಿಗೆ ನೆನಾ-ಡೊರ್ವೊ ಎಂಬಲ್ಲಿ ಗವ್ರಿಲಾ ಗವ್ರಿಲೊವಿಚ್ ಆರ್. ಸುಖವಾಗಿ ಕಾಲ ಹಾಕುತ್ತಲಿದ್ದ. ಆದರಾತಿಥ್ಯ ಮತ್ತು ದಯಾಗುಣಕ್ಕಾಗಿ ಆತ ತುಂಬ ಪ್ರಸಿದ್ಧಿ ಹೊಂದಿದ್ದ. ಅವನನ್ನು ಕಾಣಲೆಂದು ಅನೇಕ ಜನ ಅವನಲ್ಲಿಗೆ ಬರುತ್ತಿದ್ದರು. ಹದಿನೇಳು ವರ್ಷ ಪ್ರಾಯದ ಅವನ ಮಗಳಾದ ಮಾರ್ಯಾ ಗವ್ರಿಲೋವ್ನಾಳನ್ನು ನೋಡಲೆಂದೂ ಅನೇಕ ಜನ ಬರುತ್ತಿದ್ದರು. ಅವಳನ್ನು ಮದುವೆಯಾಗುವುದು ಲಾಭದಾಯಕವೆಂದು ಬಗೆದ ಅನೇಕರಿದ್ದರು.

ಫ್ರೆಂಚ್ ಕಾದಂಬರಿಗಳನ್ನು ತುಂಬಾ ಓದಿದ್ದ ಮಾರ್ಯಾ ಒಬ್ಬ ತರುಣನ ಪ್ರೇಮಪಾಶದಲ್ಲಿ ಸಿಲುಕಿದ್ದಳು. ಆತ ರಜೆಯಲ್ಲಿ ಊರಿಗೆ ಬಂದಿದ್ದ. ಅವನೂ ಅವಳಲ್ಲಿ ಅನುರಕ್ತನಾಗಿದ್ದ. ಆದರೆ ಮಾರ್ಯಾಳ ತಂದೆ-ತಾಯಿಗಳು "ಈ ಲಗ್ನ ಸಾಧ್ಯವಿಲ್ಲ" ಎಂದಿದ್ದರಲ್ಲದೆ ಆ ತರುಣನನ್ನು ಬಹು ತಿರಸ್ಕಾರದಿಂದ ಕಾಣುತ್ತಿದ್ದರು.

ಈ ತರುಣ ಪ್ರೇಮಿಗಳು ಪತ್ರವ್ಯವಹಾರದ ಮೂಲಕ ಸಂಪರ್ಕವನ್ನಿರಿಸಿಕೊಂಡಿದ್ದರು. ಪ್ರತಿನಿತ್ಯ ಯಾವುದಾದರೂ ಪ್ರಾಚೀನ ಚರ್ಚಿನಲ್ಲಾಗಲಿ, ಅಡವಿಯಲ್ಲಾಗಲಿ ಭೆಟ್ಟಿಯಾಗುತ್ತಿದ್ದರು. ತಮ್ಮ ದುರ್ಭಾಗ್ಯಕ್ಕಾಗಿ ಪರಿತಪಿಸುತ್ತ ಅವರು ಶಾಶ್ವತ ಪ್ರೇಮದ ಆಣೆ ಮಾಡಿಕೊಂಡಿದ್ದರು ಪತ್ರವ್ಯವಹಾರ ಮತ್ತು ಸಂಭಾಷಣೆಗಳ ಪರಿಣಾಮವಾಗಿ ಅವರು ಈ ಮುಂದಿನ ತೀರ್ಮಾನಕ್ಕೆ ಬರುವಂತಾಯಿತು : ನಾವು ಒಬ್ಬರನ್ನೊಬ್ಬರು ಅಗಲಿ ಜೀವಿಸುವುದು ಶಕ್ಯವಿಲ್ಲ. ನಮ್ಮ ಕ್ರೂರ ತಂದೆ ತಾಯಿಗಳು ನಮ್ಮ ಸುಖಕ್ಕೆ ಆತಂಕ ಮಾಡುತ್ತಿರುವಾಗ ನಾವು ಅವರ ಒಪ್ಪಿಗೆಯನ್ನು ಪಡೆಯುವ ಅಗತ್ಯವಾದರೂ ಏನು? ಇಂಥ ತೀರ್ಮಾನ ಮತ್ತು ಮನೋಹರ ವಿಚಾರ ಮೊದಲು ಹೊಳೆದದ್ದು ಆ ತರುಣನಿಗೆ ಎಂದು ಬೇರೆ ಹೇಳಬೇಕೇ ? ಅದು ಮಾರ್ಯಾಳ ಭಾವನಾ ಪ್ರಧಾನ ಮನಸ್ಸನ್ನೂ ರಂಜಿಸಿತು.

ಚಳಿಗಾಲ ಬಂತು. ಅವರ ಭೆಟ್ಟಿಯ ದಿನಗಳು ಕೊನೆಗಂಡವು ಇದರಿಂದ ಅವರ ಪತ್ರವ್ಯವಹಾರಕ್ಕೆ ಇನ್ನಿಷ್ಟು ಕಳೆಯೇರಿತು. ತನ್ನ ಪ್ರತಿಯೊಂದು ಪತ್ರದಲ್ಲೂ ವಾಲ್ಡಿಮಿರ್ ನಿಕೊಲೊವಿಚ್ ಮಾರ್ಯಾಳನ್ನು ತನ್ನನ್ನು ಗುಪ್ತವಾಗಿ ಲಗ್ನವಾಗೆಂದು ಬೇಡಿಕೊಳ್ಳುತ್ತಿದ್ದ. "ಕೆಲ ಕಾಲ ಗುಪ್ತವಾಗಿದ್ದು ಆ ಮೇಲೆ ನಿನ್ನ ತಂದೆ ತಾಯಿಗಳ ಕಾಲಿಗೆ ಎರಗೋಣ. ಕ್ಷಮೆ ಕೇಳಿಕೊಳ್ಳೋಣ. ಪ್ರೇಮಿಗಳ ನಿಷ್ಠೆ ಮತ್ತು ಅವರು ಪಟ್ಟ ಕಷ್ಟಗಳನ್ನು ಕಂಡು ಅವರ ಹೃದಯ ಕರಗದಿರದು. ಅವರು ಖಂಡಿತವಾಗಿ ಮಕ್ಕಳೇ, ಸುಖಿಗಳಾಗಿ ಎಂದಾಶೀರ್ವದಿಸುವರು. ಆದ್ದರಿಂದ ಪ್ರಿಯೆ, ನನ್ನವಳಾಗು" ಎಂದಾತ ಬರೆಯುತ್ತಿದ್ದ.

ಆದರೆ ನಿರ್ಧಾರಕ್ಕೆ ಬರಲು ಮಾರ್ಯಾಳಿಗೆ ತುಂಬ ದಿನಗಳು ಹಿಡಿದವು. ಒಂದು ದಿನ ತಲೆನೋವಿನ ನೆಪದಿಂದ ಅವಳು ರಾತ್ರಿ ಊಟ ಮಾಡದೆ ಕೋಣೆಯಲ್ಲಿ ಮಲಗಿಕೊಳ್ಳಬೇಕು. ತನ್ನ ದಾಸಿಯನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವಳ ಜೊತೆಯಲ್ಲಿ ಮನೆಯ ಹಿಂಬಾಗಿಲಿನಿಂದ ಹೊರಬೀಳಬೇಕು. ಅಲ್ಲಿ ಕಾದಿರುವ ಬಂಡಿಯಲ್ಲಿ ಕುಳಿತು ಝಾಡ್ರಿನೊದ ಚರ್ಚಿನಲ್ಲಿ ತನಗಾಗಿ ಕಾದಿರುವ ವಾಲ್ಡಿಮೀರನನ್ನು ಕೂಡಿಕೊಳ್ಳಬೇಕು ಎಂದು ನಿಶ್ಚಯವಾಯಿತು.

ಪಲಾಯನದ ಮೊದಲನೆಯ ದಿನ ಮಾರ್ಯಾಗೆವ್ರಿಲೊವ್ನಾ ರಾತ್ರಿ ನಿದ್ರೆ ಮಾಡಲೇ ಇಲ್ಲ. ಅವಳು ತನ್ನ ಅರಿವೆಗಳನ್ನು ಗಂಟು ಕಟ್ಟಿದಳು. ತನ್ನ ಸ್ನೇಹಿತೆಗೂ ತಂದೆ-ತಾಯಿಗಳಿಗೂ ಪತ್ರಗಳನ್ನು ಬರೆದಿಟ್ಟಳು. ಆಮೇಲೆ ಬೆಳಗು ಮುಂಜಾನೆಯ ಸುಮಾರಿಗೆ ತುಸು ನಿದ್ರೆ ಹತ್ತಿದಾಗ ಅವಳಿಗೆ ಭೀಕರ ಕನಸುಗಳು ಬಿದ್ದವು. ತಾನು ಬಂಡಿಯನ್ನು ಹತ್ತುತ್ತಿರುವಾಗ ತಂದೆ ಬಂದು ತನ್ನನ್ನು ಬರ್ಫದ ಮೇಲಿಂದ ದರದರ ಎಳೆದೊಯ್ದು ಒಂದು ಆಳವಾದ ಗುಹೆಯಲ್ಲಿ ಚೆಲ್ಲಿದನೆಂದು ಒಂದು ಕನಸು. ಇನ್ನೊಂದು ಕನಸಿನಲ್ಲಿ ವಾಲ್ಡಿಮಿರ್ ಗಾಯಗೊಂಡು ಹುಲ್ಲಿನ ಮೇಲೆ ಮರಣೋನ್ಮುಖ ಸ್ಥಿತಿಯಲ್ಲಿ ಬಿದ್ದಿರುವುದನ್ನು ಕಂಡಳು. ಸಾಯುತ್ತಲಿದ್ದ ಆತ ಬೇಗನೇ ವಿವಾಹ ವಿಧಿಯನ್ನು ಮುಗಿಸೋಣ ಎಂದು ಅವಳನ್ನು ಬೇಡಿಕೊಳ್ಳುತ್ತಲಿದ್ದ. ಎಚ್ಚರವಾದಾಗ ಅವಳ ಮುಖ ವಿವರ್ಣವಾಗಿತ್ತು. ನಿಜವಾಗಿಯೂ ಅವಳಿಗೆ ತಲೆನೋವು ಬಂದಿತು. ಅವಳ ತಂದೆ-ತಾಯಿಗಳು ಅವಳನ್ನು ಕಂಡು ಮಮತೆಯಿಂದ "ಏನಾಯಿತು ಮಾಶಾ?" ಎಂದು ಕೇಳಿ ಸಂತಯಿಸಲು ಯತ್ನಿಸಿದರು. ಅವರ ಪ್ರೀತಿಯನ್ನು ಕಂಡು ಮಾರ್ಯಾಳಿಗೆ ಇನ್ನಷ್ಟು ದುಃಖವಾಯಿತು. ತನ್ನ ತಂದೆ-ತಾಯಿಗಳೊಡನೆ ತಾನು ಕಳೆಯುತ್ತಿರುವ ಕೊನೆಯ ದಿನ ಇದು ಎಂಬ ಕಲ್ಪನೆ ಬಂದು ಅವಳ ಉಸಿರೇ ಕಟ್ಟಿದಂತಾಯಿತು. ಊಟ ಮಾಡದೆಯೆ ಅವಳು ಮಲಗಲು ಹೋದಳು. ತಂದೆ-ತಾಯಿಗಳು ಎಂದಿನಂತೆ ಆಕೆಗೆ ಮುದ್ದಿಟ್ಟು ಆಶೀರ್ವದಿಸಿದರು.

ಕೋಣೆಗೆ ಬಂದೊಡನೆ ದುಃಖ ತಡೆಯಲಾರದೆ ಮಾರ್‍ಯಾ ಖುರ್ಚಿಯಲ್ಲಿ ಕುಸಿದು ಬಿದ್ದು ಅಳತೊಡಗಿದಳು. ಅವಳ ದಾಸಿ ಅವಳನ್ನು ಸಂತಯಿಸಿದಳು. ಹೊರಗೆ ಬಿರುಗಾಳಿ ಬೀಸತೊಡಗಿತ್ತು. ಕಿಟಿಕಿಗಳ ಬಾಗಿಲುಗಳು ನಡುಗಿ ಪಟಪಟ ಬಡಿದುಕೊಳ್ಳುತ್ತಿದ್ದವು. ಇದು ಅಪಶಕುನ ಎಂದು ಮಾರ್‍ಯಾಳಿಗನಿಸಿತು.

ಮನೆಯ ಜನರೆಲ್ಲ ಗಾಢನಿದ್ರೆಯಲ್ಲಿದ್ದರು. ಮಾರ್‍ಯಾ ಗವ್ರಿಲೊವ್ನಾ ಬೆಚ್ಚನ್ನ ಶಾಲು ಹೊತ್ತುಕೊಂಡು ತನ್ನ ಬಟ್ಟೆ-ಆಭರಣಗಳ ಪೆಟ್ಟಿಗೆಯನ್ನು ಕೈಗೆತ್ತಿಕೊಂಡು ದಾಸಿಯೊಡನೆ ಹಿಂಬಾಗಿಲಿನಿಂದ ಹೊರಬಿದ್ದಳು. ಬಿರುಗಾಳಿ ನಿಂತಿರಲಿಲ್ಲ. ಈ ತರುಣ ಅಪರಾಧಿಯನ್ನು ತಡೆಯಲೆಂಬಂತೆ ಗಾಳಿ ಮುಖಕ್ಕೇ ಬೀಸುತ್ತಿತ್ತು. ಅವರು ಮನೆಯಿಂದ ಬೀದಿಗೆ ಬರುವುದೇ ಕಷ್ಟವಾಗಿ ಹೋಯಿತು. ಅಲ್ಲಿ ಬಂಡಿ ಕಾದಿತ್ತು. ಚಳಿಯಿಂದ ಸಂತ್ರಸ್ತವಾಗಿದ್ದ ಕುದುರೆಗಳು ಓಡಲು ಹಾತೊರೆಯುತ್ತಿದ್ದವು. ಮಾರ್‍ಯಾ ಮತ್ತು ಅವಳ ದಾಸಿ ಕುಳಿತೊಡನೆ ಬಂಡಿ ಹೊರಟಿತು. ಇವಳನ್ನು ಅದೃಷ್ಟದ ವಶಕ್ಕೆ ಬಿಟ್ಟು ನಾವಿನ್ನು ಆ ತರುಣ ಪ್ರೇಮಿಯ ಕಡೆ ಹೊರಳೋಣ.

ಅವೊತ್ತೆಲ್ಲ ವಾಲ್ಡಿಮೀರ್ ಊರಿಂದೂರಿಗೆ ಅಲೆದಾಡಿದ. ಮುಂಜಾನೆ ಆತ ಝಾಡ್ರಿನೊಕ್ಕೆ ಹೋಗಿ ತಮ್ಮ ಮದುವೆ ನೆರವೇರಿಸಿಕೊಡಲು ಅಲ್ಲಿಯ ಪಾದ್ರಿಯನ್ನು ಹೇಗೋ ಒಪ್ಪಿಸಿದ. ಆಮೇಲೆ ನೆರೆಯ ಜಮೀನುದಾರರಲ್ಲಿ ಸಾಕ್ಷಿಗಳನ್ನು ಹುಡುಕತೊಡಗಿದ. ಸಾಕ್ಷಿಗಳನ್ನು ಹುಡುಕಲು ಅವನಿಗೆ ಕಷ್ಟವಾಗಲಿಲ್ಲ. ಡ್ರೆವಿನ್ ಎಂಬ ನಿವೃತ್ತ ಸೈನಿಕನೊಬ್ಬ ವಾಲ್ಡಿಮೀರನ ಸಾಹಸವನ್ನು ತುಂಬ ಮೆಚ್ಚಿಕೊಂಡ. ಆತ ಇನ್ನೂ ಇಬ್ಬರು ಸಾಕ್ಷಿಗಳನ್ನು ಒದಗಿಸಿಕೊಟ್ಟ.

ಸಂಜೆಯಾಯಿತು. ತನ್ನ ವಿಶ್ವಾಸಿ ಸೇವಕ ಟೆರೆಶ್ಕಾನನ್ನು ಬಂಡಿಯೊಡನೆ ನೆನಾರ್ದೊವೊಕ್ಕೆ ಕಳಿಸಿ ತಾನು ಝಾಡ್ರಿನೊಕ್ಕೆ ಹೊರಟ. ಇನ್ನೆರಡು ತಾಸುಗಳಲ್ಲಿ ಅವನ ಪ್ರಿಯತಮೆ ಮಾರ್‍ಯಾ ಗವ್ರಿಲೋವ್ನಾ ಅಲ್ಲಿಗೆ ಬರಲಿದ್ದಳು. ಹಾದಿ ಕೇವಲ ಇಪ್ಪತ್ತು ಮಿನಿಟುಗಳ ದೂರದ್ದಾಗಿತ್ತು. ವಾಲ್ಡಿಮೀರ ಆ ಹಾದಿಯನ್ನು ಚೆನ್ನಾಗಿ ಬಲ್ಲವನಾಗಿದ್ದ.

ಆದರೆ ಆತ ಹೊರಟೊಡನೆಯೇ ಬಿರುಗಾಳಿ ಬೀಸತೊಡಗಿತು. ಹಾದಿ ಕಾಣದಂತಾಯಿತು. ರಸ್ತೆಯೆಲ್ಲ ಬರ್ಫಾಚ್ಛಾದಿತವಾಯಿತು. ಸುತ್ತಲಿನ ದೃಶ್ಯವೆಲ್ಲ ಹಿಮರಾಶಿಯಾಗಿಹೋಯಿತು. ಆಕಾಶ-ನೆಲ ಒಂದಾದವು. ವಾಲ್ಡಿಮೀರನಿಗೆ ತಾನೊಂದು ಹೊಲದ ನಡುವೆ ಬಂದು ತಲುಪಿರುವುದು ತಿಳಿಯಿತು. ಆತ ಮತ್ತೆ ರಸ್ತೆಯನ್ನು ಕೂಡಿಕೊಳ್ಳಲು ವ್ಯರ್ಥ ಯತ್ನಿಸಿದ. ಕುದುರೆ ದಿಕ್ಕು ತಪ್ಪಿ ಹೆಜ್ಜೆಯಿಡುತ್ತಿತ್ತು. ಅರ್ಧ ತಾಸಾಯಿತು. ಮತ್ತೂ ಹತ್ತು ನಿಮಿಷಗಳು ಜಾರಿದವು. ಆದರೂ ಬರಬೇಕಾಗಿದ್ದ ಝಾಡ್ರಿನೊ ಬರಲಿಲ್ಲ. ಗಾಡಿ ಓಡುತ್ತಲೇ ಇತ್ತು. ಕುದುರೆ ದಣಿದಿತ್ತು. ವಾಲ್ಡಿಮೀರ್ ಬೆವೆತಿದ್ದ. ಬಿರುಗಾಳಿಯ, ಹಿಮವರ್ಷದ ರಭಸ ತಗ್ಗಿರಲಿಲ್ಲ.

ಕೊನೆಗೆ ಆತನಿಗೆ ತಾನು ತಪ್ಪು ಹಾದಿ ಕ್ರಮಿಸುತ್ತಿದ್ದೇನೆಂಬ ಅರಿವಾಯಿತು. ಆತ ಲಗಾಮು ಜಗ್ಗಿ ಕುದುರೆಯನ್ನು ನಿಲ್ಲಿಸಿದ. ವಿಚಾರ ಮಾಡಿದಾಗ ತಾನು ಬಲಕ್ಕೆ ತಿರುಗಬೇಕಿತ್ತು ಎಂದೆನಿಸಿತವನಿಗೆ. ಈಗಾತ ಬಲಕ್ಕೆ ತಿರುಗಿದ. ಕುದುರೆ ಒಂದು ಹೆಜ್ಜೆ ಎತ್ತಿಡುವ ಸ್ಥಿತಿಯಲ್ಲಿರಲಿಲ್ಲ. ಆತ ಹೊರಟು ಒಂದು ತಾಸಿನ ಮೇಲಾಗಿತ್ತು. ಝಾಡ್ರಿನೊ ಇನ್ನು ಹೆಚ್ಚು ದೂರವಿರದು. ಆದರೆ ಆತ ಮುಂದೆ ಹೋದಷ್ಟೂ ಗದ್ದೆಗಳೇ ಇರುತ್ತಿದ್ದವಲ್ಲದೆ ರಸ್ತೆಯ ಅಥವಾ ಊರಿನ ಚಿಹ್ನೆಗಳು ಕಾಣಿಸಲಿಲ್ಲ. ವೇಳೆ ಸರಿಯುತ್ತಿತ್ತು. ವಾಲ್ಡಿಮೀರ್ ಚಿಂತೆಗೊಳಗಾದ.

ಕೊನೆಗೂ ಅವನ ಎಡಕ್ಕೆ ಏನೊ ಒಂದು ಕಪ್ಪನ್ನ ಆಕೃತಿ ಕಾಣಿಸಿತು. ವಾಲ್ಡಿಮೀರ್

ಗಾಡಿಯನ್ನು ಅತ್ತ ಹೊಡೆದ. ಅದೊಂದು ಕುರುಚಲು ಕಾಡಾಗಿತ್ತು. ಹಾ! ಇದೇ ಝಾಡ್ರಿನೊದ ಬಳಿಯ ಕುರುಚಲು ಕಾಡು ಎಂದುಕೊಂಡ ವಾಲ್ಡಿಮೀರ್. ಆತನ ಎಣಿಕೆಯಂತೆ ಕಾಡಿನಿಂದಾಚೆ ರಸ್ತೆ ಸಿಕ್ಕಿತು. ಹುರುಪಿನಿಂದ ಆತ ಗಾಡಿ ಓಡಿಸಿದ.

ಆದರೆ ಝಾಡ್ರಿನೊ ಬಗಲಿಲ್ಲ. ರಸ್ತೆಯ ಮಗ್ಗಲಲ್ಲಿ ಕುರುಚಲು ಕಾಡೂ ಸಾಗಿ ಬಂದಿತ್ತು. ವಾಲ್ಡಿಮೀರನಿಗೆ ತಾನು ಅಪರಿಚಿತ ಕಾಡೊಂದರ ಮಗ್ಗಲಲ್ಲಿ ನಡೆದಿರುವುದು ಗಮನಕ್ಕೆ ಬಂತು. ನಿರಾಶೆಯಿಂದ ಆತ ಕುದುರೆಗೆರಡು ಬಿಗಿದ. ಆ ಬಡಪ್ರಾಣಿ ಓಡತೊಡಗಿತು. ಆದರೆ ತುಸು ದೂರ ಹೋದಬಳಿಕ ಮತ್ತೆ ಸುಸ್ತಾಗಿ ನಡೆಯತೊಡಗಿತು. ಅದನ್ನೋಡಿಸಲು ವಾಲ್ಡಿಮೀರ್ ಮಾಡಿದ ಯತ್ನಗಳು ಫಲಿಸಲಿಲ್ಲ.

ಅಂತೂ ಕಾಡು ಮುಗಿದಂತಾಯಿತು. ಆದರೂ ಝಾಡ್ರಿನೊ ಬರಲಿಲ್ಲ. ಈಗ ಮಧ್ಯರಾತ್ರಿಯಾಗಿರಬೇಕು ಎಂದೆನಿಸಿತು ಅವನಿಗೆ. ಕಣ್ಣೀರು ಅವನ ಗಲ್ಲಗಳ ಮೇಲಿಳಿಯಿತು. ಹೋದಲ್ಲಿಗೆ ಹೋಗಲಿ ಎಂದು ಗಾಡಿ ಹೊಡೆದ. ಬಿರುಗಾಳಿ ನಿಂತಿತ್ತು. ಮೋಡಗಳು ಚದರಿದ್ದವು. ಅವನ ಮುಂದೆ ಬರ್ಫದ ಬಿಳಿಯ ಚಾಪೆ ಹಾಸಿದಂತಿದ್ದ ದೊಡ್ಡ ಬಯಲೊಂದಿತ್ತು. ರಾತ್ರಿ ಈಗ ಹೆಚ್ಚು ಕಡಿಮೆ ನಿಚ್ಚಳವಾಗಿತ್ತು. ವಾಲ್ಡಿಮೀರ್‌ನಿಗೆ ತುಸು ದೂರದಲ್ಲಿ ಹಲವಾರು ಗುಡಿಸಲುಗಳು ಗುಂಪುಕಟ್ಟಿ ನಿಂತಿದ್ದ ಒಂದು ಹಳ್ಳಿ ಕಾಣಿಸಿತು. ಹಳ್ಳಿಯನ್ನು ತಲುಪಿದವನೇ ಆತ ಮೊಟ್ಟಮೊದಲನೆಯ ಗುಡಿಸಲಿನ ಬಾಗಿಲನ್ನು ಬಡಿದ. ಕಿಟಿಕಿಯ ಬಾಗಿಲು ತೆರೆದು ಒಬ್ಬಮುದುಕ ಕಾಣಿಸಿಕೊಂಡು "ಯಾರು ? ಏನು ಬೇಕು ?" ಎಂದು ಕೇಳಿದ. "ಝಾಡ್ರಿನೊ ಇಲ್ಲಿಂದ ಎಷ್ಟು ದೂರವಿದೆ?" "ಬಹಳ ದೂರವೇನಿಲ್ಲ. ಒಂದು ಹತ್ತು ಮೈಲಿದ್ದೀತು." ಮುದುಕನ ಉತ್ತರ ಕೇಳಿ ವಾಲ್ಡಿಮೀರ್ ತಲೆಗೂದಲು ಜಗ್ಗಿಕೊಂಡು ಗಲ್ಲಿನ ಶಿಕ್ಷೆಯಾದುದನ್ನು ಕೇಳಿದವನಂತೆ ನಿಂತುಕೊಂಡ.

"ನೀನೆಲ್ಲಿಂದ ಬಂದಿ ?" ಮುದುಕ ಕೇಳಿದ. ಅವನ ಪ್ರಶ್ನೆಗಳಿಗೆ ಉತ್ತರ ಕೊಡುವ ಸ್ಥಿತಿಯಲ್ಲಿಲ್ಲದ ವಾಲ್ಡಿಮೀರ್ "ಝಾಡ್ರಿನೊಕ್ಕೆ ಹೋಗಲು ಒಂದು ಕುದುರೆ ಕೊಡಿಸಬಲ್ಲೆಯಾ, ಅಜ್ಜಾ?" ಎಂದು ಕೇಳಿದ, "ಅಯ್ಯೊ ! ನಮ್ಮಂಥವರ ಹತ್ತರ ಕುದುರೆಗಳೇ ?" ಎಂದ ಆ ಮುದುಕ. "ಹಾಗಾದರೆ ಒಬ್ಬ ಮಾರ್ಗದರ್ಶಕನನ್ನು ಕೊಡು. ಅವನು ಕೇಳಿದಷ್ಟು ಕೊಡುವೆ." ವಾಲ್ಡಿಮೀರನ ಮಾತಿಗೆ ಒಪ್ಪಿ ಮುದುಕ ತನ್ನ ಮಗನನ್ನೆ ಕಳಿಸುವುದಾಗಿ ಹೇಳಿದ. ಮುದುಕ ಕಿಟಕಿ ಮುಚ್ಚಿದ.

ಒಂದು ನಿಮಿಷ ಕಳೆದಿರಬೇಕು, ವಾಲ್ಡಿಮೀರ್ ಮತ್ತೆ ಕಿಟಿಕಿಯ ಬಾಗಿಲು ಬಡಿದ. ಬಾಗಿಲು ತೆರೆದ ಮುದುಕನಿಗೆ "ಎಲ್ಲಿ ನಿನ್ನ ಮಗ?" ಎಂದು ಕೇಳಿದ "ಬರುತ್ತಾನೆ. ಬೂಟುಗಳನ್ನು ಹಾಕಿಕೊಳ್ಳುತ್ತಿದ್ದಾನೆ. ಚಳಿಯಾಗಿದ್ದರೆ ಒಳಗೆ ಬಾ. ಕಾಯಿಸಿಕೊ" ಎಂದ ಮುದುಕ.

"ಛೆ! ಬೇಡ. ನಿನ್ನ ಮಗನನ್ನು ಬೇಗ ಕಳಿಸು."

ಬಾಗಿಲು ಕಿರ್ರೆಂದಿತು. ಕೈಯಲ್ಲಿ ಬಡಿಗೆ ಹಿಡಿದುಕೊಂಡು ತರುಣನೊಬ್ಬ ಹೊರಗೆ ಬಂದ. ಆತ ಹಾದಿಯನ್ನು ತೋರಿಸುತ್ತ, ಆಗಾಗ ತಾನೇ ರಸ್ತೆ ಸರಿಯಾಗಿದೆಯೆ ಎಂದು ಅತ್ತಿತ್ತ ನೋಡಿ ಖಾತ್ರಿ ಮಾಡಿಕೊಳ್ಳುತ್ತ ಮುಂದೆ ನಡೆದ. "ಈಗೆಷ್ಟು ಗಂಟೆ?" ಎಂದು ವಾಲ್ಡಿಮೀರ್ ಕೇಳಿದ್ದಕ್ಕೆ ಆ ತರುಣ "ಇನ್ನೇನು, ಬೆಳಗಾಗುತ್ತದೆ" ಎಂದ. ವಾಲ್ಡಿಮೀರ್ ಮುಂದೆ ಒಂದಕ್ಷರ ಮಾತಾಡಲಿಲ್ಲ.

ಝಾಡ್ರಿನೊವನ್ನು ಅವರು ಮುಟ್ಟಿದಾಗ ಕೋಳಿಗಳು ಕೂಗತೊಡಗಿದ್ದವು. ಚರ್ಚಿನ ಬಾಗಿಲು ಹಾಕಿತ್ತು. ಮಾರ್ಗದರ್ಶಕನಿಗೆ ಹಣ ಕೊಟ್ಟು ವಾಲ್ಡಿಮೀರ್ ಪಾದ್ರಿಯ ಮನೆಗೆ

ಹೋದ. ಅಲ್ಲಿ ಮನೆಯ ಮುಂದೆ ಯಾವ ಗಾಡಿಯೂ ನಿಂತಿರಲಿಲ್ಲ. ಮತ್ತೆ ಅವನಿಗಾಗಿ ಕಾದಿದ್ದ ಸುದ್ದಿಯಾದರೂ ಎಂಥದಾಗಿತ್ತು!

ಆದರೆ ಅದಂತಿರಲಿ. ನೆನಾಡ್ರೋವೊದಲ್ಲಿ ಏನೇನು ನಡೆಯುತ್ತಿದೆ ನೋಡೋಣ ಬನ್ನಿ.

ಅಲ್ಲಿ ವಿಶೇಷವೇನೂ ಇರಲಿಲ್ಲ.

ಮಾರ್‍ಯಾಳ ಮುದಿತಂದೆ ತಾಯಿಗಳು ಎಂದಿನಂತೆ ಎದ್ದು ಚಹ ಕುಡಿಯಲು ಕುಳಿತಿದ್ದರು. ಗವ್ರಿಲಾ ಗವ್ರಿಲೊವಿಚ್ ಒಬ್ಬ ಆಳಿಗೆ, "ಹೋಗು. ಮಾಶಾ ಹೇಗಿದ್ದಾಳೆ ನೋಡಿಬಾ" ಎಂದ ಆಳು ಹೋಗಿ ಬಂದು "ರಾತ್ರಿ ಚೆನ್ನಾಗಿ ನಿದ್ದೆ ಬರಲಿಲ್ಲವಂತೆ. ಆದರೆ ಈಗ ತುಸು ಆರಾಮಿದೆಯಂತೆ. ಇಷ್ಟರಲ್ಲೆ ಬರುತ್ತಾರಂತೆ" ಎಂದನು. ಅಷ್ಟರಲ್ಲಿ ಮಾರ್‍ಯಾಳೇ ಬಂದು ತಂದೆ ತಾಯಿಗಳ ಮಗ್ಗುಲಲ್ಲಿ ಕುಳಿತಳು.

"ಹೇಗಿರುವಿ ಮಗು?" ಗವ್ರಿಲಾ ಗವ್ರಿಲೊವಿಚ್ ಕೇಳಿದ "ನಿನ್ನೆಗಿಂತ ವಾಸಿ" ಎಂದಳು ಮಗಳು.

ಆ ದಿನ ವಿಶೇಷವೇನೂ ಇಲ್ಲದೆ ಕಳೆಯಿತು. ಆದರೆ ಅಂದು ರಾತ್ರಿ ಮಾಶಾ ಬೇನೆಯಿಂದ ಮಲಗಿದಳು. ನೆರೆಯೂರಿನ ಡಾಕ್ಟರರಿಗೆ ಹೇಳಿ ಕಳುಹಿದರು. ಅವರು ಬಂದಾಗ ಮಾಶಾ ಜ್ವರದ ಅಮಲಿನಲ್ಲಿ ಬಡಬಡಿಸುತ್ತಿದ್ದಳು. ಎರಡು ವಾರ ಈ ದುರ್ದೈವಿ ಹುಡುಗಿ ಸಾವಿನ ಅಂಚಿನಲ್ಲಿದ್ದಳು

ಮನೆಯಲ್ಲಿ ಒಬ್ಬರಿಗೂ ಅವಳ ಪಲಾಯನದ ಕತೆ ಗೊತ್ತಿರಲಿಲ್ಲ. ಮಾರ್‍ಯಾ ತಾನು ಬರೆದಿಟ್ಟಿದ್ದ ಪತ್ರಗಳನ್ನು ಸುಟ್ಟುಬಿಟ್ಟಿದ್ದಳು. ಒಡೆಯನ ಅಂಜಿಕೆಯಿಂದ ಅವಳ ದಾಸಿ ಬಾಯಿಬಿಟ್ಟಿರಲಿಲ್ಲ. ಪಾದ್ರಿ, ಸಾಕ್ಷಿದಾರರು ಕೂಡ ತಂತಮ್ಮ ಕಾರಣಗಳಿಗಾಗಿ ಮೌನವಾಗಿದ್ದರು. ಮಾರ್‍ಯಾಳನ್ನು ಕರೆದೊಯ್ಯಲು ಬಂದಿದ್ದ ಗಾಡಿಯಾಳು ಟೆರೆಶ್ಕಾ ಕೂಡ ತುಟಿ ಬಿಚ್ಚಿರಲಿಲ್ಲ. ಆದರೆ ಇವರೆಲ್ಲ ಸುಮ್ಮನಿದ್ದರೂ ಮಾರ್‍ಯಾ ಗವ್ರಿಲೋವ್ನಾಳೇ ತನ್ನ ಗುಟ್ಟು ರಟ್ಟು ಮಾಡಿದ್ದಳು. ಸನ್ನಿಯಲ್ಲಿ ಅವಳ ಬಡಬಡಿಕೆ ಅಸ್ಪಷ್ಟವಾಗಿದ್ದುದರಿಂದಲೇ ಪೂರ್ಣಸತ್ಯ ಅವಳ ತಂದೆ ತಾಯಿಗಳಿಗೆ ತಿಳಿಯಲಿಲ್ಲ. ಆದರೆ ವಾಲ್ಡಿಮೀರನಲ್ಲಿ ಮಗಳಿಗೆ ಅತಿಶಯ ಪ್ರೇಮವಿದೆಯೆಂದೂ ಪ್ರೇಮಭಂಗವೇ ಜಡ್ಡಿಗೆ ಕಾರಣವಾಗಿರಬೇಕೆಂದೂ ಅವಳತಂದೆ-ತಾಯಿಗಳಿಗೆ ಅನಿಸುವಂತಾಯಿತು. ಮಗಳ ಕಲ್ಯಾಣವಾದರೆ ಸಾಕು ಎಂದು ಅವರು ಅವಳ ಇಚ್ಛೆಯನ್ನು ನಡೆಸಿಕೊಡಲು ನಿರ್ಧರಿಸಿದರು. ವಾಲ್ಡಿಮೀರ್ ಬಡವನಾದರೇನಾಯಿತು? ಬಡತನವೇನೂ ಅಪರಾಧವಲ್ಲ ಎಂದಿತ್ಯಾದಿಯಾಗಿ ಅವರು ಯೋಚಿಸಿದರು.

ಸಾವಕಾಶವಾಗಿ ಮಾರ್‍ಯಾ ಗುಣಹೊಂದಿದಳು. ಈಗ ಅನೇಕ ದಿನಗಳಿಂದ ವಾಲ್ಡಿಮೀರ್ ಗವ್ರಿಲಾ ಗವ್ರಿಲೊವಿಚ್‌ನ ಮನೆಯಲ್ಲಿ ಕಾಲಿಟ್ಟಿರಲಿಲ್ಲ. ತನ್ನನ್ನು ಅಲ್ಲಿ ತಿರಸ್ಕಾರದಿಂದ ಕಾಣುತ್ತಾರೆಂದು ಆತನಿಗೆ ತಿಳಿದಿತ್ತು. ಆದರೆ ಈಗ ಅವನಿಗೆ ಆಮಂತ್ರಣ ಹೋಯಿತು. ಮದುವೆಗೆ ಒಪ್ಪಿಗೆಯನ್ನು ತಿಳಿಸಲಾಯಿತು.

ಆದರೆ ನೆನಾಡ್ರೋವೊದ ಮಾಲಿಕರಿಗೆ ಆಶ್ಚರ್ಯಘಾತ ಕಾದಿತ್ತು. ವಾಲ್ಡಿಮೀರನಿಂದ ಬಂದ ಉತ್ತರ ಅರೆಹುಚ್ಚ ಬರೆದಂತಿತ್ತು. "ನಾನಿನ್ನು ನಿಮ್ಮ ಮನೆಯಲ್ಲಿ ಕಾಲಿಡುವುದಿಲ್ಲ ಎಂಬ ಮಾತನ್ನು ನಂಬಿ. ಈ ಪರಮ ದುಃಖಿಯನ್ನು ಮರೆತುಬಿಡಿ. ಮರಣವೊಂದೇ ಈಗ ನನಗಿರುವ ಬಯಕೆ" ಎಂದಾತ ಬರೆದಿದ್ದ. ಮುಂದೆ ಕೆಲ ದಿನಗಳಲ್ಲೆ ಆತ ಮತ್ತೆ ಸೈನ್ಯ ಸೇರಿಕೊಂಡ ಎಂಬ ವರ್ತಮಾನ ಬಂತು.

ಮಾಶಾಳಿಗೆ ಈ ವರ್ತಮಾನ ಬಹಳ ದಿನಗಳವರೆಗೆ ತಿಳಿಯಲಿಲ್ಲ. ಯಾರೂ ಅವಳಿಗೆ ಹೇಳುವ ಸಾಹಸ ಮಾಡಿರಲಿಲ್ಲ. ಅವಳು ಸ್ವತಃ ವಾಲ್ಡಿಮೀರನ ಹೆಸರು ಎತ್ತುತ್ತಿರಲಿಲ್ಲ. ಕೆಲ ತಿಂಗಳ ನಂತರ ಯುದ್ಧದಲ್ಲಿ ಶೌರ್‍ಯದಿಂದ ಕಾದಿದ್ದಕ್ಕಾಗಿ ಆತನಿಗೆ ಬಿರುದು ಸಿಕ್ಕಿದೆಯೆಂದೂ ಆತ ಬೊರೆ

ಡಿನೋದ ಯುದ್ಧದಲ್ಲಿ ತುಂಬ ಗಾಯಗೊಂಡಿದ್ದಾನೆಂದೂ ವರ್ತಮಾನ ಬಂದಾಗ ಮಾರ್ಯಾ ಮೂರ್ಛೆಹೋದಳು. ಮತ್ತೆ ಅವಳ ಬೇನೆ ಮರುಕಳಿಸೀತೆಂದು ಎಲ್ಲರೂ ಅಂಜಿದರು. ಆದರೆ ಸುದೈವದಿಂದ ಹಾಗಾಗಲಿಲ್ಲ.

ಕೆಲ ದಿನಗಳಲ್ಲೆ ಅವಳ ಮೇಲೆ ಇನ್ನೊಂದು ಆಪತ್ತು ಎರಗಿತು. ಅವಳ ತಂದೆ ಸತ್ತುಹೋದ. ಮಾರ್ಯಾಳೇ ಈಗ ಆಸ್ತಿಗೆ ಒಡೆಯಳಾದಳು. ಆದರೆ ಅದರಿಂದ ಅವಳಿಗೆ ಸುಖವೆನಿಸಲಿಲ್ಲ. ದುಃಖಪೀಡಿತಳಾದ ತಾಯಿಯನ್ನು ಬಿಟ್ಟು ಅಗಲುವುದೇ ಇಲ್ಲ ಎಂದು ಮಾರ್ಯಾ ಪ್ರತಿಜ್ಞೆ ಮಾಡಿದಳು. ತಾಯಿಮಗಳಿಬ್ಬರಿಗೂ ನೆನಾಡೊರ್ಫವೊದ ವಾಸ್ತವ್ಯ ದುಃಖಕರವೆಂದೆನಿಸಿ ಮತ್ತೊಂದು ಹಳ್ಳಿಗೆ ಹೋಗಿ ನೆಲೆಸಿದರು. ಅಲ್ಲಿಯೂ ಅವರಿಗೆ ಆಸ್ತಿಯಿತ್ತು

ಇಲ್ಲಿ ಕೂಡ ಈ ಸುಂದರಿಯಾದ ಆಸ್ತಿವಂತ ಹುಡುಗಿಯನ್ನುಮದುವೆಯಾಗಲು ಹಾತೊರೆಯುವವರಿಗೆ ಕಡಿಮೆಯಿರಲಿಲ್ಲ. ಆದರೆ ಮಾರ್ಯಾ ಒಬ್ಬರನ್ನೂ ಪ್ರೋತ್ಸಾಹಿಸಲಿಲ್ಲ. ಲಗ್ನವಾಗು ಎಂದು ಅವಳ ತಾಯಿ ಆಗೊಮ್ಮೆ ಈಗೊಮ್ಮೆ ಮಗಳಿಗೆ ಬುದ್ಧಿ ಹೇಳುತ್ತಿದ್ದಳು. ಮದುವೆಯ ಪ್ರಸ್ತಾಪ ಬಂದೊಡನೆ ಮಾರ್ಯಾ ತಲೆಯಲ್ಲಾಡಿಸಿ ವಿಷಣ್ಣವದನಳಾಗಿ ಕುಳಿತುಬಿಡುತ್ತಿದ್ದಳು. ಫ್ರೆಂಚರು ಮಾಸ್ಕೊವನ್ನು ಪ್ರವೇಶಿಸುವ ಮುನ್ನ ವ್ಲಾಡಿಮೀರ್ ಸತ್ತು ಹೋಗಿದ್ದ. ಮಾರ್ಯಾ ಅವನನ್ನು ಮರೆಯಲಿಲ್ಲ. ಅವನ ನೆನಪನ್ನು ಕೊಡುವ ಪುಸ್ತಕಗಳು, ಚಿತ್ರಗಳು ಎಲ್ಲವನ್ನೂ ಅವಳು ಕಾಯ್ದಿರಿಸಿದ್ದಳು. ಜನ ಇವಳ ನಿಷ್ಠೆಯನ್ನು ಕಂಡು ಚಕಿತರಾದರು. ಕೊನೆಗೂ ಇವಳ ಹೃದಯವನ್ನು ಯಾರು ಗೆಲ್ಲುತ್ತಾರೋ ಎಂದು ಕುತೂಹಲಿಗಳಾಗಿದ್ದರು.

ಯುದ್ಧ ಮುಗಿಯಿತು. ರಶಿಯನ್ ಸೈನ್ಯ ವಿಜಯಿಯಾಗಿ ವಿದೇಶದಿಂದ ಹಿಂತಿರುಗಿತು ಜನ ಸಂಭ್ರಮದಿಂದ ಅದನ್ನು ಸ್ವಾಗತಿಸಿದರು. ಸಾಮಾನ್ಯವಾಗಿ ಗಂಭೀರರಾದ ರಶಿಯನ್ ಸ್ತ್ರೀಯರೂ ಉತ್ಸಾಹ ಭರದಲ್ಲಿ ವಿಜಯಿ ಸೈನಿಕರನ್ನು ಹಾಡುತ್ತ ನರ್ತಿಸುತ್ತ ಸ್ವಾಗತಿಸಿದರು.

ಈ ದಿನಗಳಲ್ಲಿ ತಾಯಿಯೊಡನೆ ಹಳ್ಳಿಯಲ್ಲಿದ್ದ ಮಾರ್ಯಾ ಗೆವ್ರಿಲೋವ್ನಾ ರಾಜಧಾನಿ ನಗರಗಳಲ್ಲಿ ನಡೆದ ವಿಜಯೋತ್ಸವಗಳನ್ನು ನೋಡಲಿಲ್ಲ

ಮಾರ್ಯಾ ಗೆವ್ರಿಲೋವ್ನಾ ತರುಣರನ್ನು ಪ್ರೋತ್ಸಾಹಿಸುತ್ತಿರಲಿಲ್ಲವಾದರೂ ಅವಳ ಸುತ್ತಲೂ ಅವಳ ಕೈ ಹಿಡಿಯಬಯಸುವವರಿಗೆ ಕೊರತೆಯಿರಲಿಲ್ಲ ಎಂದು ಹಿಂದೆಯೆ ಹೇಳಿದ್ದೇವೆ. ಆದರೆ ಹುಸ್ಸಾರ್ ಪಡೆಯ ಕರ್ನಲ್ ಬರ್ಮಿನ್ ಬಂದಾಗ ಉಳಿದೆಲ್ಲರೂ ಹಿಂದಕ್ಕೆ ಸರಿದುಕೊಂಡರು. ಆತನಿಗೆ ಸೆಂಟ್ ಜಾರ್ಜ್ಸ್ ಕ್ರಾಸ್ (ಪದಕ) ಸಿಕ್ಕಿತ್ತು. ಸುಮಾರು ಇಪ್ಪತ್ತಾರು ವಯಸ್ಸಿನ ಈ ತರುಣ ರಜೆಯ ಮೇಲೆ ತನ್ನ ಜಮೀನಿದ್ದ ಹಳ್ಳಿಗೆ ಬಂದಿದ್ದ. ಆ ಹಳ್ಳಿ ಮಾರ್ಯಾ ಗೆವ್ರಿಲೋವ್ನಾಳ ಹಳ್ಳಿಯ ಪಕ್ಕದಲ್ಲೆ ಇತ್ತು. ಮಾರ್ಯಾ ಅವನಲ್ಲಿ ಉಳಿದವರಿಗಿಂತ ಹೆಚ್ಚು ಆಸಕ್ತಿ ತೋರಿಸಿದಳು. ಅವನೆದುರಿನಲ್ಲಿ ಅವಳ ದುಃಖವಡಗಿ ಮುಖ ಒಂದಿಷ್ಟು ಪ್ರಫುಲ್ಲವಾಗುತ್ತಿತ್ತು.

ಬರ್ಮಿನ್ ಆಕರ್ಷಕ ತರುಣನಾಗಿದ್ದ. ಸ್ತ್ರೀಯರು ಮೆಚ್ಚಿಕೊಳ್ಳಬಹುದಾದಂಥ ವ್ಯಕ್ತಿಯಾಗಿದ್ದ. ಆತ ಮಾರ್ಯಾಳೆದುರಿನಲ್ಲಿ ಬಹು ಸರಳ ರೀತಿಯಲ್ಲಿ, ಸಂಕೋಚವಿಲ್ಲದೆ ನಡೆದುಕೊಳ್ಳುತ್ತಿದ್ದ. ಅವಳ ಮಾತುಗಳನ್ನು ತುಂಬ ಆಸ್ಥೆಯಿಂದ ಕೇಳುತ್ತಿದ್ದ ಆತ ಈಗ ತುಂಬ ಶಾಂತಚಿತ್ತನೂ ಮುಂಜಾಗ್ರತೆಯವನೂ ಇರುವಂತೆ ಕಾಣಿಸುತ್ತಿದ್ದನಾದರೂ ಹಿಂದೆ ಬಲು ಉಡಾಳ ಜೀವನ ಸಾಗಿಸಿದ್ದ ಎಂಬ ವದಂತಿ ಇತ್ತು. ಆದರೆ ಈ ವದಂತಿಯಿಂದ ಮಾರ್ಯಾಳ ಮನಸ್ಸಿನ ಮೇಲೇನೂ ಪರಿಣಾಮವಾಗಲಿಲ್ಲ. ಸಾಮಾನ್ಯವಾಗಿ ಎಲ್ಲ ತರುಣಿಯರು ಮಾಡುವಂತೆ ಅವಳು ಅವನ ಗತಾಪರಾಧಗಳನ್ನು

ಕ್ಷಮಿಸಿಬಿಟ್ಟಳು.

ಬರ್ಮಿನ್ನನ ನಯವಿನಯದ ನಡೆನುಡಿಗಳಿಗಿಂತ, ಅವನ ಧೈರ್ಯ ಸಾಹಸದ ಕಥೆಗಳಿಗಿಂತ, ಅವನ ಸಂಯಮನವೇ ಹೆಚ್ಚಾಗಿ ಅವಳನ್ನು ಆಕರ್ಷಿಸಿತ್ತು. ತಾನು ಅವನ ಮೇಲೆ ಪ್ರಭಾವ ಬೀರಿದ್ದೇನೆ ಎಂದು ಅವಳಿಗೆ ತಿಳಿದಿತ್ತು. ಬುದ್ಧಿವಂತನೂ ಅನುಭವಿಯೂ ಆದ ಅವನಿಗೂ ಅವಳ ಮನದಿಂಗಿತ ತಿಳಿದಿರಲೇಬೇಕು. ಹಾಗಿದ್ದರೂ ಇದುವರೆಗೂ ಆತ ತನ್ನ ಪ್ರೇಮವನ್ನು ಬಹಿರಂಗ ಮಾಡಿರಲಿಲ್ಲವೇಕೆ? ಅಥವಾ ಸ್ತ್ರೀಯರನ್ನು ಬಲೆಗೆ ಹಾಕಿಕೊಳ್ಳುವ ಧೂರ್ತನೇ ಅವನು? ಬಹುಶಃ ಸಂಕೋಚವೇ ಅವನ ಮೌನಕ್ಕೆ ಕಾರಣವಾಗಿರಬೇಕು ಎಂದು ಬಗೆದು ಮಾರ್ರ್ಯಾ ಅವನಿಗೆ ಇನ್ನಿಷ್ಟು ಪ್ರೋತ್ಸಾಹವೀಯಲು ನಿರ್ಧರಿಸಿದಳು. ಆತ ತನ್ನೆದುರು ಮೊಣಕಾಲೂರಿ ತನ್ನ ಪ್ರೇಮಪ್ರದರ್ಶನ ಮಾಡುವ ನಿಮಿಷವನ್ನು ಅವಳು ನಿರೀಕ್ಷಿಸತೊಡಗಿದಳು. ನೆರೆಮನೆಯವರೆಲ್ಲ ಈಗಾಗಲೇ ಇವರಿಬ್ಬರ ಮದುವೆಯ ಮಾತನ್ನು ಆಡತೊಡಗಿದ್ದರು. ಮಾರ್ರ್ಯಾಳ ಹಂಚಿಕೆ ಕೆಲ ಮಟ್ಟಿಗೆ ಫಲಿಸಿದಂತಾಗಿತು, ಅವಳೆದುರಿನಲ್ಲಿ ಅವಳನ್ನೆ ನೋಡುತ್ತ ಬರ್ಮಿನ್ ವಿಚಾರಮಗ್ನನಾಗಿ ಕುಳಿತಿರುತ್ತಿದ್ದ. ತಾನು ಕಾಯುವ ನಿಮಿಷ ಬಂತು ಎಂದು ಮಾರ್ರ್ಯಾ ಆಗ ಯೋಚಿಸುತ್ತಿದ್ದಳು.

ಒಂದು ದಿನ ಮಾರ್ರ್ಯಾ ಗೆವ್ರಿಲೋವ್ನಾಳನ್ನು ಹುಡುಕಿಕೊಂಡು ಬಂದ ಬರ್ಮಿನ್ನನಿಗೆ ಅವಳು ತೋಟದಲ್ಲಿ ಕೆರೆಯ ದಂಡೆಯಲ್ಲಿ ಭೆಟ್ಟಿಯಾದಳು. ಅವಳು ಒಂದು ಗಿಡದ ಅಡಿಯಲ್ಲಿ ಒಂದು ಕಾದಂಬರಿಯ ನಾಯಿಕೆಯಂತೆ ಬಿಳಿ ವಸ್ತ್ರವನ್ನುಟ್ಟು ಕೈಲಿ ಪುಸ್ತಕವನ್ನು ಹಿಡಿದು ಕುಳಿತಿದ್ದಳು. ನಿತ್ಯದ ಕುಶಲ ಪ್ರಶ್ನೆಗಳಾದ ಬಳಿಕ ಮಾರ್ರ್ಯಾ ಬೇಕೆಂದೇ ಸಂಭಾಷಣೆಯನ್ನು ಮುಂದುವರಿಸಲಿಲ್ಲ. ಇಂಥ ಸಮಯದಲ್ಲಿ ತಲೆದೋರುವ ಸಂಕೋಚವೇ ಬಾಯಿಯನ್ನು ಬಿಡಿಸುತ್ತದೆ.

ಹಾಗೆಯೆ ಆಯಿತು. ಬರ್ಮಿನ್ ತನ್ನ ಹೃದಯವನ್ನು ತೆರೆದು ತೋರಿಸಿದ. ಆತ ಹೇಳಿದ, "ಮಾಶಾ, ಬಹುದಿನಗಳಿಂದಲೂ ನನ್ನ ಅಂತರಂಗದ ಮಾತನ್ನು ಹೇಳಬೇಕೆಂದಿದ್ದೇನೆ. ನಾನು ನಿನ್ನನ್ನು ಪ್ರೀತಿಸುತ್ತೇನೆ. ಹೃತ್ಪೂರ್ವಕವಾಗಿ ಪ್ರೀತಿಸುತ್ತೇನೆ. (ಮಾರ್ರ್ಯಾಳ ಮುಖ ಕೆಂಪೇರಿ ಅವಳು ಮುಖವನ್ನು ತುಸು ತಗ್ಗಿಸಿದಳು.) ನಾನು ನಿನ್ನ ಸಹವಾಸ, ನಿನ್ನೊಡನೆ ಸಂಭಾಷಣೆಗೈವ ಮೋಹವನ್ನು ತಡೆಯಲಾರದೆ ನಿನ್ನನ್ನು ಕಾಣುತ್ತ ಬಂದೆ. ನಿನ್ನ ನೆನಪು, ನಿನ್ನ ಸುಂದರ ಮುಖ ಇನ್ನು ನನ್ನ ಜೀವಮಾನವಿಡೀ ನನಗೆ ಸುಖ ದುಃಖಗಳೆರಡನ್ನೂ ಕೊಡುವವು. ಆದರೆ ಈಗ ನಾನು ನಿನ್ನನ್ನು ನೋಯಿಸುವುದಾದರೂ ಸತ್ಯವನ್ನು ಬಚ್ಚಿಡಲಾರದಂಥ ಬಿಕ್ಕಟ್ಟಿನಲ್ಲಿ ಸಿಲುಕಿದ್ದೇನೆ. ಅದು ನಮ್ಮಿಬ್ಬರ ನಡುವೆ ನೀಗಲಾರದ ಅಡ್ಡಿಯೊಂದನ್ನು—"

"ಗೊತ್ತು ನನಗೆ. ನಾನೆಂದೂ ನಿನ್ನ ಹೆಂಡತಿಯಾಗುವಂತಿಲ್ಲ," ಮಾರ್ರ್ಯಾ ನಡುವೆಯೆ ಹೇಳಿದಳು.

"ನೀನು ಹಿಂದೊಮ್ಮೆ ಬೇರೆಯವನನ್ನು ಪ್ರೀತಿಸಿದ್ದೆ ಎಂದು ನನಗೆ ಗೊತ್ತಿದೆ. ಆದರೆ ಸಾವು, ಮೂರು ವರ್ಷಗಳ ಶೋಕ— ಬೇಡ, ಪ್ರಿಯ ಮಾಶಾ, ಮಾತಾಡಬೇಡ. ನನ್ನನ್ನು ಪೀಡಿಸಬೇಡ. ನೀನು ನನ್ನವಳಾಗಬಹುದಿತ್ತು ಎಂದು ಬಲ್ಲೆ. ಆದರೆ ನಾನು ದುರ್ದೈವಿ. ನಾನು ವಿವಾಹಿತ."

ಮಾರ್ರ್ಯಾ ಗೆವ್ರಿಲೋವ್ನಾ ಅವನನ್ನು ಆಶ್ಚರ್ಯದಿಂದ ನೋಡಿದಳು.

"ನಾನು ವಿವಾಹಿತ. ನನ್ನ ಲಗ್ನವಾಗಿ ನಾಲ್ಕು ವರ್ಷಗಳಾದವು. ಆದರೆ ನನಗೆ ನನ್ನ ಹೆಂಡತಿ ಯಾರು, ಎಲ್ಲಿದ್ದಾಳೆ, ನಾನವಳನ್ನು ಎಂದಾದರೂ ಕಾಣುತ್ತೇನೆಯೇ— ಯಾವುದೂ ಗೊತ್ತಿಲ್ಲ."

"ಆಂ! ಎಂಥ ವಿಚಿತ್ರ. ಹೇಳು, ದಯವಿಟ್ಟು ಹೇಳು."

"೧೮೧೨ ರಲ್ಲಿ ನಾನು ವಿಲ್ನಾಕ್ಕೆ ಹೊರಟಿದ್ದೆ. ಅಲ್ಲಿ ನಮ್ಮ ಪಥಕ ಬೀಡುಬಿಟ್ಟಿತ್ತು. ಒಂದೆಡೆ ನಾನು ನನ್ನ ಗಾಡಿಗೆ ಹೊಸ ಕುದುರೆಗಳನ್ನು ಹೂಡಿಸಿಕೊಳ್ಳುತ್ತಿದ್ದಾಗ ಭಯಂಕರ ಬಿರುಗಾಳಿ ಬೀಸತೊಡಗಿತು. ಈಗ ಹೊರಡಬೇಡಿ ಎಂದು ಜನ ಹೇಳಿದರು. ನಾನೊಪ್ಪಿದೆ. ಆದರೆ ನನ್ನನ್ನು ಯಾವುದೋ ಚಿಂತೆ ಆವರಿಸಿತು. ಏನೋ ನನ್ನನ್ನು ಮುಂದೊತ್ತುವಂತೆನಿಸಿತು. ಬಿರುಗಾಳಿ ತಗ್ಗಲಿಲ್ಲ. ತಾಳ್ಮೆಗೆಟ್ಟು ನಾನು ಹೊರಟೆ. ಹಾದಿ ತಪ್ಪಿತು. ಒಂದೆಡೆ ದೀಪ ಕಾಣಿಸಲು ಅಲ್ಲಿಗೆ ಗಾಡಿ ಹೊಡೆಯಲು ಹೇಳಿದೆ. ಅದೊಂದು ಹಳ್ಳಿ. ಒಂದು ಚರ್ಚಿನಲ್ಲಿ ದೀಪ ಉರಿಯುತ್ತಿತ್ತು. ಬಾಗಿಲು ತೆರೆದಿತ್ತು. ಹೊರಗಡೆ ಕೆಲ ಗಾಡಿಗಳು ನಿಂತಿದ್ದವು. ಹೀಗೆ—ಇತ್ತ ಬನ್ನಿ ಎಂದು ಅನೇಕರು ಕೂಗಿದರು. ನನ್ನ ಗಾಡಿ ಚರ್ಚಿನ ಸಮೀಪಕ್ಕೆ ಬಂತು. 'ಇಷ್ಟೇಕೆ ತಡ ಮಾಡಿದಿರಿ? ವಧು ಮೂರ್ಛೆ ಹೋಗಿದ್ದಾಳೆ. ಪಾದ್ರಿ ಏನು ಮಾಡಬೇಕೆಂದು ತಿಳಿಯದೆ ಕುಳಿತಿದ್ದಾನೆ. ನಾವೆಲ್ಲ ಮನೆಗೆ ಹೋಗುವವರಿದ್ದೆವು. ಬೇಗ ಒಳಗೆ ಬನ್ನಿ' ಎಂದು ಒಬ್ಬನೆಂದ. ನಾನು ಗಾಡಿಯಿಂದ ಜಿಗಿದು ಚರ್ಚಿನ ಒಳಗೆ ಹೋದೆ.

"ಅಲ್ಲಿ ಒಬ್ಬ ಹುಡುಗಿ ಬೆಂಚಿನ ಮೇಲೆ ಕುಳಿತಿದ್ದಳು. ಅವಳ ಕೈಕಾಲು ಹಣೆಗಳನ್ನು ತಿಕ್ಕುತ್ತಿದ್ದವಳು 'ದೇವರೇ ಪಾರು ಮಾಡಿದ. ಅಂತೂ ಬಂದಿರಿ. ನನ್ನ ಒಡತಿಯನ್ನು ಕೊಂದೇ ಬಿಟ್ಟಿದ್ದಿರಿ ನೀವು' ಎಂದಳು. ಪಾದ್ರಿ ಬಂದು ಶುರು ಮಾಡೋಣವೇ ಎಂದು ಕೇಳಿದ. ಅನ್ಯಮನಸ್ಕನಾಗಿಯೆ 'ಹೂಂ.' ಎಂದೆ. ಆ ಹುಡುಗಿಯನ್ನು ಎಬ್ಬಿಸಿ ನಿಲ್ಲಿಸಿದರು. ಅವಳು ಸುಂದರಿಯಾಗಿದ್ದಳು. ನಮ್ಮಿಬ್ಬರ ಮದುವೆಯಾಯಿತು. 'ಅವಳನ್ನು ಚುಂಬಿಸು' ಎಂದರು. ನನ್ನ ಹೆಂಡತಿಯಾದವಳು ತನ್ನ ವಿವರ್ಣ ಮುಖವನ್ನು ಮೇಲೆತ್ತಿದಳು. ನಾನು ಅವಳನ್ನು ಚುಂಬಿಸಬೇಕು ಎಂದಿದ್ದಾಗ ಅವಳು 'ಅಲ್ಲ. ಇವನು ಅವನಲ್ಲ, ಅವನಲ್ಲ' ಎಂದು ಚೀರಿ ಎಚ್ಚರ ತಪ್ಪಿ ಬಿದ್ದುಬಿಟ್ಟಳು. ಸಾಕ್ಷಿದಾರರು ನನ್ನನ್ನು ಚಿಕಿತ್ಸಕ ದೃಷ್ಟಿಯಿಂದ ನೋಡತೊಡಗಿದರು. ನಾನು ಚರ್ಚಿನಿಂದ ಹೊರಬಿದ್ದು ನನ್ನ ಗಾಡಿಯನ್ನೇರಿ, 'ಹೊಡಿ' ಎಂದು ಕೂಗಿದೆ."

"ಅಯ್ಯೊ ದೇವರೇ! ನಿನ್ನ ದುರ್ದೈವಿ ಹೆಂಡತಿಯ ಗತಿಯೇನಾಯಿತು ಎಂದು ನಿನಗೆ ಗೊತ್ತಿಲ್ಲವೆ?" ಎಂದು ಮಾರ್ಯಾ ಗೆವ್ರಿಲೋವ್ನಾ ಕೇಳಿದಳು.

"ಇಲ್ಲ. ನನ್ನ ಲಗ್ನವಾದ ಆ ಹಳ್ಳಿಯ ಹೆಸರು ನನಗೆ ತಿಳಿಯದು. ನಾನು ಯಾವ ಊರಿನಿಂದ ಅಲ್ಲಿಗೆ ಬಂದಿದ್ದೆ ಎನ್ನುವುದೂ ನೆನಪಿಲ್ಲ. ನನ್ನ ದೈವದ ಈ ಹುಡುಗಾಟಕ್ಕೆ ನಾನಂದು ವಿಶೇಷ ಮಹತ್ವವನ್ನು ಕೊಡಲೇ ಇಲ್ಲ. ಚರ್ಚಿನಿಂದ ಹೊರಬಿದ್ದ ಬಳಿಕ ಗಾಡಿಯಲ್ಲಿ ನಾನು ನಿದ್ದೆ ಹೋದೆ. ಮಾರನೆಯ ದಿನ ಮುಂಜಾನೆಯ ವರೆಗೂ ನನಗೆ ಎಚ್ಚರವಾಗಲೇ ಇಲ್ಲ. ಆಗ ನನ್ನೊಡನೆ ಇದ್ದ ಆಳು ಯುದ್ಧದಲ್ಲಿ ಸತ್ತು ಹೋದ. ಹೀಗಾಗಿ ನಾನು ಅಂದು ಯಾರೊಡನೆ ಈ ರೀತಿ ಕ್ರೂರವಾಗಿ ಅಣಕ ವಾಡಿದೆನೊ ಅವಳ ವಿಚಾರವನ್ನು ತಿಳಿಯುವ ಆಶೆ ನನ್ನಲ್ಲಿ ಉಳಿದಿಲ್ಲ. ಈಗ ಅದರ ಮುಯ್ಯಿ ಚಕ್ರಬಡ್ಡಿಯಲ್ಲಿ ತೀರುವಂತಾಗಿದೆ."

"ದೇವಾ!" ಮಾರ್ಯಾ ಗೆವ್ರಿಲೋವ್ನಾ ಅವನ ಅಂಗಿಯ ತೋಳನ್ನು ಹಿಡಿದುಕೊಂಡು ಹೇಳಿದಳು "ಅಂದರೆ! ಅಂದು ನನ್ನನ್ನು ಲಗ್ನವಾದವನು ನೀನೇನು? ನನ್ನ ಗುರುತು ನಿನಗೆ ಸಿಕ್ಕಲಿಲ್ಲ?" ಎಂದಳು.

ಬರ್ಮಿನ್ನನ ಮುಖ ಬೆಳ್ಳಗಾಯಿತು.... ಆತ ಅವಳ ಕಾಲ ಬಳಿ ಮೈ ಚೆಲ್ಲಿದ. *



# 'ಅನಾಸಿನ್'

## ಈಗ ಹೊಸದಾದ,
## ಆರೋಗ್ಯದ ದೃಷ್ಟಿಯಿಂದ ಸೀಲುಮಾಡಿದ
## ಸೆಲೋಫೇನ್ ಪ್ಯಾಕೆಟಿನಲ್ಲಿ ದೊರೆಯುತ್ತದೆ








## 4 ಔಷಧಗಳಿಂದ ಕೂಡಿದ
## ಅನಾಸಿನ್ ಉತ್ತಮವಾಗಿದೆ

ಅನಾಸಿನ್ – ಹೊಸ, ನಿರ್ಮಲವಾಗಿ ಸೀಲ್‌ಮಾಡಿದ ಸೆಲೋಫೇನ್ ಪ್ಯಾಕೆಟಿನಲ್ಲಿ ದೊರೆಯುತ್ತವೆ. ಡಾಕ್ಟರರ ಸುರಕ್ಷಿತ ಔಷಧದಂತೆ ಆರೋಗ್ಯದ ದೃಷ್ಟಿಯಿಂದ ಸಮ್ಮಿಲನವಾದ ನಾಲ್ಕು ಔಷಧಗಳಿಂದ ಕೂಡಿದ 'ಅನಾಸಿನ್' ನೋವನ್ನು ಸಂಪೂರ್ಣವಾಗಿ, ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಅನಾಸಿನ್ (1) ತಲೆನೋವು, ಶೀತ, ಹಲ್ಲುನೋವು ಮತ್ತು ಸ್ನಾಯುಗಳ ನೋವನ್ನು ಅಧಿಕ ಶೀಘ್ರವಾಗಿ ಉಪಶಮನಗೊಳಿಸುತ್ತದೆ; (2) ಗಾಬರಿಗೊಳಿಸುವ ನರಗಳಿಗೆ ಶಾಂತತೆಯನ್ನೀಯುತ್ತದೆ;—ನೀವು ಸುಖವಾಗಿ, ಆರಾಮದಿಂದಿರುವಂತೆ ಮಾಡುತ್ತದೆ; (3) ನಿರುತ್ಸಾಹವನ್ನು ಹೋಗಲಾಡಿಸುತ್ತದೆ; (4) ಜ್ವರವನ್ನು ಕಡಿಮೆಮಾಡುತ್ತದೆ. ನಾಲ್ಕು ಔಷಧಗಳಿಂದ, ಕೂಡಿರುವ ಅನಾಸಿನ್ ನೋವನ್ನು ಹೋಗಲಾಡಿಸಲು ಬಹಳ ಉತ್ತಮವಾಗಿದೆ. ಯಾವಾಗಲೂ ಮನೆಯಲ್ಲಿ 'ಅನಾಸಿನ್' ಇಟ್ಟುಕೊಳ್ಳಿರಿ.

ಪಿಲ್ಫರ್-ಪ್ರೂಫ್ ಪ್ಯಾಕಿಂಗ್‌ನಲ್ಲಿ ಭದ್ರವಾಗಿ ಮುಚ್ಚಲ್ಪಟ್ಟ ಸೀಸೆಯಲ್ಲಿ 32 ಬಿಲ್ಲೆಗಳು ದೊರೆಯಲಾಗುತ್ತವೆ.

*Registered User :* GEOFFREY MANNERS & CO. PRIVATE LTD.

KAN. Z.41.

# ಬಳ್ಳಾರಿ ಸೆರೆಮನೆಯಲ್ಲಿ

# "ಅಲೀಪುರಂ ತಿಂಬಲ್"

ಎಸ್. ರಾಜನ್

೧೯೪೨ ರ ಚಲೇಜಾವ್ ಚಳವಳಿ ಕಾಳ್ಗಿಚ್ಚಿನಂತೆ ಹಬ್ಬಿತ್ತು. ಬಂಧಿಸಿದ ಸಹಸ್ರಾರು ಜನರನ್ನು ಇಡಲು ಸ್ಥಳ ಸಾಲದೆ ಕಂಗೆಟ್ಟ ಬ್ರಿಟಿಶ್ ಸರಕಾರ ಬಳ್ಳಾರಿಯ ಬಳಿಯಲ್ಲಿರುವ ಹೈದರ್ ಅಲಿಯ ಕುದುರೆ ಲಾಯಗಳನ್ನೆ ಸೆರೆಮನೆಯನ್ನಾಗಿ ಪರಿವರ್ತಿಸಿತು. ಅಲೀಪುರಂ ಎಂಬ ಹೆಸರನ್ನಿಟ್ಟ ಈ ಸೆರೆಮನೆ ಯುದ್ಧ ಕೈದಿಗಳನ್ನಿಡುವ ಶಿಬಿರದ ಮಾದರಿಯಲ್ಲಿತ್ತು.

ಅಹಿಂಸಾತ್ಮಕ ಸಮರ ಪ್ರಾರಂಭವಾದ ಕೆಲವೇ ವಾರಗಳಲ್ಲಿ ಅಲೀಪುರಂ ಜೇಲಿನಲ್ಲಿ ದಕ್ಷಿಣ ಭಾರತದ ಎಲ್ಲೆಡೆಗಳಿಂದ ಹಿಡಿದು ತಂದ ಸುಮಾರು ೪,೦೦೦ ಸೆರೆಯಾಳುಗಳಿದ್ದರು. ಪ್ರತಿ ನಿತ್ಯವೂ ಹುಡುಗರಿಂದ ಹಿಡಿದು ಮುದುಕರವರೆಗೆ, ಉತ್ಸಾಹಿ ದೇಶಭಕ್ತರ ತಂಡ ಸೆರೆಮನೆಯನ್ನು ಪ್ರವೇಶಿಸುತ್ತಿತ್ತು. ಅವರು ಹೇಳುತ್ತಿದ್ದ ಸಾಹಸದ, ಧೈರ್ಯದ, ಸರಕಾರದ ಕ್ರೂರ ದಬ್ಬಾಳಿಕೆಯ, ಜನರ ಅಪಾರ ಸಹನೆಯ ಕಥೆ ರೋಮಾಂಚಕವಾಗಿರುತ್ತಿತ್ತು. ವಿದ್ಯುಚ್ಛಕ್ತಿಯ ಮುಳ್ಳು ತಂತಿಗಳ ಬೇಲಿಯ ಹಿಂದೆ ಬಾಹ್ಯ ಜಗತ್ತಿನ ಸಂಪರ್ಕವಿಲ್ಲದೆ ಇದ್ದ ಈ ಜೇಲಿನ ಸಹಸ್ರಾರು ಜನರಿಗೆ ಹೊರಗಿನ ಆಗುಹೋಗುಗಳನ್ನು ತಿಳಿಸುತ್ತಿರುವುದಕ್ಕಾಗಿ ಒಂದು ಸಂಘಟನೆ ಅಗತ್ಯವಾಗಿತ್ತು.

ಅಲಿಪುರಂ ಜೇಲಿನ ಸುಪರಿಂಟೆಂಡೆಂಟ್ ಕರ್ನಲ್ ಹೋವೆ ಕಠೋರ ಮನುಷ್ಯ. 'ಗಾಂಧಿ ಜನ'ರನ್ನು ದಂಡಿಸುವ ತನ್ನ ರೀತಿಯಿಂದ ಆತ ಈಗ ಅನೇಕ ವರ್ಷಗಳಿಂದ ಪ್ರಖ್ಯಾತನಾಗಿದ್ದ. ಆತನ ಒಂದು ಕೈ ಊನವಾಗಿತ್ತು. ೧೯೩೦ ರ ಚಳವಳಿಯ ಕಾಲದಲ್ಲಿ ಕರ್ನಲ್ ಹೋವೆಯ ನಿರಂಕುಶತನವನ್ನು ಪ್ರತಿಭಟಿಸಿ ಒಬ್ಬ ಕೈದಿ, ಅವನ ಕೈಲಿದ್ದ ಮೋಟು ದೊಣ್ಣೆಯನ್ನೆ ಕಸಿದುಕೊಂಡು ಪ್ರಹಾರ ಮಾಡಿದ್ದರಿಂದ ಈ ಕೈ ಊನವಾಗಿತ್ತು.

ಕರ್ನಲ್ ಹೋವೆ ಚತುರ. ಆತ ಅಲೀಪುರಂ ಜೇಲನ್ನು ಹದಿನೈದು ಬ್ಲಾಕುಗಳಲ್ಲಿ ವಿಭಾಗಿಸಿದ್ದ. ಒಂದೊಂದು ಬ್ಲಾಕೂ ದೊಡ್ಡದೊಂದು ದಿವಾಣಖಾನೆಯಂತಿತ್ತು. ಈ ದಿವಾಣಖಾನೆಗಳ ನಡುವೆ ಸಂಪರ್ಕವಿಟ್ಟುಕೊಳ್ಳಲು ಪ್ರತಿಬಂಧವಿತ್ತು. ನಿರಕ್ಷರಿಗಳೂ ಪಕ್ಕಾ ಅಪರಾಧಿಗಳೂ ಆಗಿದ್ದ ಜೇಲ್ ವಾರ್ಡರರೇ ಏನಾದರೂ ಹೊರಗಿನ ಸುದ್ದಿಗಳನ್ನು ಹೇಳಿದರೆ ಹೇಳಬೇಕಾಗಿತ್ತು.

ಧಾರ್ಮಿಕ ಪುಸ್ತಕಗಳನ್ನು ಬಿಟ್ಟರೆ ಮತ್ತಾವ

ಮುಂಬಯಿ "ಸಂಡೇ ಟೈಮ್ಸ್" ನಿಂದ




ಬಗೆಯ ಪುಸ್ತಕಗಳು ಅಥವಾ ವೃತ್ತಪತ್ರಿಕೆಗಳು ಜೇಲಿನೊಳಗೆ ಬರುವಂತಿಲ್ಲವಾದ್ದರಿಂದ ಜೇಲಿನಲ್ಲಿ ನಾನಾ ವಿಧವಾದ ಗಾಳಿವಾರ್ತೆಗಳು ಹಬ್ಬುತ್ತಿದ್ದವು. ಶ್ರೀ ಸುಭಾಷಚಂದ್ರ ಬೋಸರು ವಿಮೋಚನಾ ಸೈನ್ಯದೊಂದಿಗೆ ಕಲಕತ್ತೆಗೆ ಬಂದಿದ್ದಾರೆಂಬ ಸುದ್ದಿ ಒಂದು ದಿನ ಬಂತು. ಮತ್ತೊಂದು ದಿನ ಪಂಡಿತ ಜವಾಹರಲಾಲ ನೆಹರೂರನ್ನು ಸರಕಾರ ಯಾವುದೊ ಅಜ್ಞಾತ ಸ್ಥಳಕ್ಕೆ ಸಾಗಿಸಿಬಿಟ್ಟಿದೆಯೆಂಬ ವರ್ತಮಾನ ಬಂತು. ಮುಂದೆ ಕೆಲ ದಿನಗಳ ಮೇಲೆ ಮದ್ರಾಸಿನ ಪತ್ರಿಕೆಯೊಂದರ ಸಂಚಿಕೆ ಗುಪ್ತ ರೀತಿಯಲ್ಲಿ ಜೇಲಿಗೆ ಬಂದಾಗಲೇ ಈ ಸಂಗತಿಗಳು ಸುಳ್ಳು ಎಂದು ತಿಳಿದು ನಮಗುಂಟಾಗಿದ್ದ ಉತ್ಸಾಹ, ವೇದನೆಗಳು ಇಲ್ಲದಂತಾದದ್ದು.

ಒಂದು ಸ್ಪೆಶಲ್ ಬ್ಲಾಕಿನಲ್ಲಿ ಪ್ರತ್ಯೇಕವಾಗಿರಿಸಲ್ಪಟ್ಟಿದ್ದ ವಿದ್ಯಾರ್ಥಿಗಳ ತಂಡವೊಂದು ಜೇಲಿನಲ್ಲಿ ಒಂದು ಭೂಗತ ಪತ್ರಿಕೆಯನ್ನು ನಡೆಸುವ ನಿರ್ಧಾರವನ್ನು ಮಾಡಿತು. ಒಂದು ರಾತ್ರಿ ನಮ್ಮ ಸಭೆಯಲ್ಲಿ ಈ ಪತ್ರಿಕೆಗೆ ಟೋಕಿಯೋದ ಪ್ರಸಿದ್ಧ ಪತ್ರಿಕೆಯಾದ "ಅಸಾಹಿ ಶಿಂಬನ್"ನ ಮಾದರಿಯಲ್ಲಿ "ಅಲೀಪುರಂ ಶಿಂಬನ್" ಎಂದು ಹೆಸರಿಡಲು ನಿರ್ಧರಿಸಿದೆವು; ನಾವು ಜಪಾನಿಗಳ ಪಕ್ಷಪಾತಿಗಳಾಗಿದ್ದೆವು ಎಂದಲ್ಲ, ಆದರೆ ಸುಪರಿಂಟೆಂಡೆಂಟ್ ಹೋವೆಯನ್ನು ರೊಚ್ಚಿಗೆಬ್ಬಿಸುವ ಒಂದು ಸಂದರ್ಭವನ್ನೂ ಕಳೆದುಕೊಳ್ಳಬಾರದೆಂದು.

ಸಂಪಾದಕ ಮಂಡಳಿಯ ನೇಮಕವಾಯಿತು. ಪ್ರಧಾನ ಸಂಪಾದಕ; ಇಬ್ಬರು ಉಪಸಂಪಾದಕರು; ೨೦ ಜನ ಸುದ್ದಿಗಾರರು. ಆದರೆ ನಮ್ಮೆದುರು ಇದ್ದ ಮುಖ್ಯ ಅಡಚಣೆ ತಾಂತ್ರಿಕವಾಗಿತ್ತು. ಯಾರ ಬಳಿಯಲ್ಲೆ ಅಗಲಿ, ಕಾಗದ ಸಿಕ್ಕರೆ ಕಠಿನವಾಗಿ ಶಿಕ್ಷಿಸಲಾಗುವುದು ಎಂದು ಕರ್ನಲ್ ಹೋವೆ ಸಾರಿದ್ದ. ಆದರೆ ಸುದೈವದಿಂದ ಆತ ಪ್ರತಿಯೊಬ್ಬ ಕೈದಿಯೂ ಒಂದು ಪಾಟಿ(ಸ್ಲೇಟ್)ಯನ್ನು ಕೊಂಡಿಟ್ಟುಕೊಳ್ಳಬಹುದೆಂದು ಹೇಳಿದ್ದ. ಈ ಪಾಟಿಗಳೇ ನಮ್ಮ ಪತ್ರಿಕೆಯ ಕಾಗದವಾಗಬೇಕು ಎಂದು ನಿರ್ಧರಿಸಿದೆವು.

ಪತ್ರಿಕೆಯನ್ನು ಹೊರಡಿಸಿ ಹಂಚುವ ರೀತಿಯನ್ನು ಯೋಚಿಸಿ ನಿಶ್ಚಯಿಸಿದೆವು. ಪ್ರತಿಯೊಂದು ಬ್ಲಾಕಿನಲ್ಲಿಯೂ ಸುದ್ದಿಗಾರರನ್ನೂ ಪ್ರತಿನಿಧಿಗಳನ್ನೂ ನೇಮಿಸಬೇಕು; ಜೇಲಿನ

ಮುಖ್ಯ ಸ್ಥಳಗಳಾದ ಆಸ್ಪತ್ರೆ ಮತ್ತು ಉಗ್ರಾಣದಲ್ಲಿ ಸುದ್ದಿ ತಿಳಿಸುವ ಗುಪ್ತಚಾರರಿರಬೇಕು. ಇವರು ಪಾಟಿಗಳ ಮೇಲೆ ಬರೆದು ಸುದ್ದಿಗಳನ್ನು ನಮಗೆ ಅನುಕೂಲರಾದ ಜೇಲ್ ವಾರ್ಡರರ ಮೂಲಕ ನಮಗೆ ಮುಟ್ಟಿಸಬೇಕು. (ಮಂಗಳೂರು ಬೀಡಿಗಳಂಥ ವಿಲಾಸ ವಸ್ತುಗಳನ್ನು ಸಂಪಾದಿಸಲು ನಾವು ತುಂಬ ಲಂಚಕೊಟ್ಟು ಈ ಮೊದಲೇ ವಾರ್ಡರರನ್ನು ಒಲಿಸಿಕೊಂಡಿದ್ದೆವು). ಜೋಡು ಖೂನಿಯ ಆರೋಪಕ್ಕಾಗಿ ಹದಿನೈದಕ್ಕಿಂತಲೂ ಹೆಚ್ಚು ವರ್ಷಗಳನ್ನು ಸೆರೆಮನೆಯಲ್ಲಿ ಕಳೆದಿದ್ದ ಒಬ್ಬ ಹಿರಿ ವಾರ್ಡರನು ನಮಗೆ ನಿತ್ಯವೂ ಮೂರು ರೂಪಾಯಿಗಳಿಗೆ ಮದ್ರಾಸ್ ಪತ್ರಿಕೆಯ ಒಂದು ಸಂಚಿಕೆಯನ್ನು ಒದಗಿಸಲು ಒಪ್ಪಿಕೊಂಡ. ಹೀಗೆ ಸಂಪಾದಿಸಿದ ಸುದ್ದಿಗಳನ್ನು ಆರೆಂಟು ಪಾಟಿಗಳ ಮೇಲೆ ಬರೆದು "ಅಲೀಪುರಂ ಶಿಂಬನ್"ನ ಒಂದು ಸಂಚಿಕೆಯನ್ನು ತಯಾರಿಸಬೇಕೆಂದಾಯಿತು. ಒಂದು ಸಂಚಿಕೆಯ ಹದಿನೈದು ಪ್ರತಿಗಳನ್ನು ತಯಾರಿಸುವುದೆಂದೂ ಆಯಿತು. ಪ್ರತಿನಿತ್ಯ ನಸುಕಿನಲ್ಲಿ ಈ ಪ್ರತಿಗಳನ್ನು ಜೇಲಿನ ಬೇರೆ ಬೇರೆ ಕೇಂದ್ರಗಳಿಗೆ ಮುಟ್ಟಿಸುವ ಏರ್ಪಾಡನ್ನೂ ಮಾಡಿದೆವು.

"ಅಲೀಪುರಂ ಶಿಂಬನ್"ನ ಪ್ರಥಮ ಸಂಚಿಕೆ ಕೋಲಾಹಲವನ್ನೆ ಎಬ್ಬಿಸಿತು. ಅದರಲ್ಲಿ ಚಲೇ ಜಾವ್ ಚಳವಳಿಯ ತೀರ ಈಚೆಗಿನ (ಅಂದರೆ ಸುಮಾರು ಐದು ದಿನಗಳ ಹಿಂದಿನ) ಸುದ್ದಿಗಳು, ಮಹಾಯುದ್ಧದ ವಾರ್ತೆ, ತಾಜಾ ಸ್ಥಳಿಕ ಸುದ್ದಿಗಳು ಪ್ರಕಟವಾಗಿದ್ದವು. ಪಾಟಿಯ ಭಿತ್ತಿ ಪತ್ರಗಳ ವ್ಯವಸ್ಥೆಯನ್ನೂ ಮಾಡಿದ್ದೆವು.

ಜೇಲಿನಲ್ಲಿ ಹೊರಟ ಈ ಪತ್ರಿಕೆ ಸೆರೆಯಾಳುಗಳ ನೈತಿಕ ಧೈರ್ಯವನ್ನು ಹೆಚ್ಚಿಸುವಲ್ಲಿ ತುಂಬ ಪರಿಣಾಮಕಾರಿಯಾಯಿತು. ಸ್ವಾತಂತ್ರ್ಯ ಹೋರಾಟ ದೇಶದಲ್ಲೆಲ್ಲ ಭರದಿಂದ ಸಾಗುತ್ತಿತ್ತೆಂದು ಅವರಿಗೆ ತಿಳಿಯಿತು. ಸೆರೆಯಾಳುಗಳಲ್ಲಿ ನಿಕಟ ಸಂಬಂಧವುಂಟಾಗಲು ಅದೊಂದು ಸಾಧನವಾಯಿತು. ಕರ್ನಲ್ ಹೋವೆ ಮತ್ತು ಅವನ ಜನ ನಿತ್ಯವೂ ನಮ್ಮ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದರೂ ನಮ್ಮನ್ನು ಅವಮಾನಗೊಳಿಸುತ್ತಿದ್ದರೂ ಭಾರತದ ಭಾಗ್ಯ ತೆರೆಯುತ್ತಿದೆಯೆಂಬ ಮಾತಿನಲ್ಲಿ ನಮ್ಮ ನಂಬಿಕೆ ದೃಢವಾಗುತ್ತ ನಡೆಯಿತು.

ಸುದ್ದಿ ಸಂಪಾದನೆ ಮತ್ತು ಅದನ್ನು ತಿರುಗಿ ಬರೆಯುವುದರಲ್ಲಿ ನಮ್ಮ ಹಗಲೆಲ್ಲ ಕಳೆಯುತ್ತಿತ್ತಲ್ಲದೆ ರಾತ್ರಿ ಕೂಡ ಬಹಳ ಹೊತ್ತಿನ ವರೆಗೆ ನಾವು ಕಾರ್ಯಮಗ್ನರಾಗಿರುತ್ತಿದ್ದೆವು. ಅಲೀಪುರಂ ಉದ್ರಿಕ್ತ ಭಾವನೆಗಳ ಆಗರವಾಗಿತ್ತು. ಯಾವ ನಿಮಿಷದಲ್ಲಿ ಏನಾಗುವುದು ಎಂದು ಹೇಳುವಂತಿರಲಿಲ್ಲ. ರೊಟ್ಟಿಗಾಗಿ ಸಾಲುಗಟ್ಟಿ ನಿಂತಾಗ ಕೈದಿಗಳಲ್ಲಿ ಒಬ್ಬಾತ ಕುಳಿತುಕೊಂಡ ಎಂಬ ಕ್ಷುಲ್ಲಕ ಕಾರಣಕ್ಕಾಗಿ ವಾರ್ಡರನೊಬ್ಬ ಅವನನ್ನು ಮೈಮುರಿ ಥಳಿಸಿಬಿಡುತ್ತಿದ್ದ. ಕರ್ನಲ್ ಹೋವೆಯ ಸಿಟ್ಟಂತೂ ಬೇಸಿಗೆಯ ಮಳೆಯಂತಿತ್ತು. ಜೇಲಿನ ನಿಯಮವೊಂದು ಭಂಗವಾಯಿತೆಂದು ಯಾರಿಗೂ ಕಲ್ಪನೆಯಿರದಂಥ ವೇಳೆಯಲ್ಲಿ ಆತ ಸೆರೆಯಾಳೊಬ್ಬನಿಗೆ ಫಟಕಿ ಶಿಕ್ಷೆ ವಿಧಿಸುತ್ತಿದ್ದ. ಅಂಥವನನ್ನು ಆಮೇಲೆ ಚಿಕಿತ್ಸೆಗಾಗಿ ಆಸ್ಪತ್ರೆಗೆ ಒಯ್ಯುತ್ತಿದ್ದುದರಿಂದ ಅಲ್ಲಿಯ ಸುದ್ದಿಗಾರನಿಗೆ ಎಚ್ಚರಿಕೆ ಕೊಡಬೇಕಾಗುತ್ತಿತ್ತು. ಸುದ್ದಿಗಾರರೊಡನೆ ಸಂಪರ್ಕ ಬೆಳೆಸುವುದೇನೂ ಸುಲಭವಾಗಿರಲಿಲ್ಲ. ಟೆಲಿಫೋನಿನಂಥ ಸಂಪರ್ಕ ಸಾಧನಗಳಿರಲಿಲ್ಲ. ಸುದ್ದಿ ಸಂಗ್ರಹ ಕಾರ್ಯ ಗಂಡಾಂತರಕಾರಿಯಾಗಿತ್ತು, ಅಂತೇ ಅದ್ಭುತರಮ್ಯವಾಗಿತ್ತು.

ಅಲೀಪುರಂ ಜೇಲಿನಲ್ಲಿ ಆಡಳಿತದ ಹೊಲಸು ತುಂಬಿತ್ತು. ಜೇಲಿಗೆ ಪೂರೈಸುತ್ತಿದ್ದ ಆಹಾರವನ್ನು ಕದ್ದು ಮಾರುತ್ತಿದ್ದ ಜೇಲಿನ ಅಧಿಕಾರಿಗಳ ಕಥೆಗಳು "ಶಿಂಬನ್"ನಲ್ಲಿ ಪ್ರಕಟವಾದವು. ಆಸ್ಪತ್ರೆಯ ಗುಪ್ತಚಾರ ಅಲ್ಲಿ ಹಣ ಎತ್ತಿ ಹಾಕುವ ವಿಚಾರದಲ್ಲಿ ಮಾಹಿತಿ ಪೂರೈಸಿದ.

ಭಿತ್ತಿಪತ್ರದಪ್ಪಕ್ಷರಗಳಲ್ಲಿ ಸಾರಿತು. "ಆಲೀಪುರಂದಲ್ಲಿ ಕೊಲೆ! ರೋಗಗ್ರಸ್ತನಾದ ದೇಶಭಕ್ತ ಅಲಕ್ಷ್ಯದಿಂದಾಗಿ ಸತ್ತ!"

ಪ್ರತಿಭಟನಾ ಸಭೆಗಳ ವರದಿ ಕೊಡಬೇಕಾಗುತ್ತಿತ್ತು. ಆಗೊಮ್ಮೆ ಈಗೊಮ್ಮೆ ವ್ಯಂಗ್ಯ ಚಿತ್ರಗಳನ್ನೂ ಪ್ರಕಟಿಸಿದೆವು. ಪಾಪ! ಚಿತ್ರಕಾರ ಪ್ರತಿ ಒಂದು ಪ್ರತಿಗಾಗಿಯೂ ಚಿತ್ರ ಬರೆಯಬೇಕಾಗುತ್ತಿತ್ತು. ಅಗ್ರಲೇಖಗಳು ಉಗ್ರವಾಗಿರುತ್ತಿದ್ದವು, ತರುಣರ ಹೃದಯದಲ್ಲಿ ಕ್ರೋಧಾಗ್ನಿಯನ್ನು ಹೊತ್ತಿಸುತ್ತಿದ್ದವು.

ಸಂಪಾದಕರು ಕೇವಲ ರಾಜಕೀಯ ವ್ಯಾಮೋಹವುಳ್ಳವರಾಗಿರಲಿಲ್ಲ. ನಾವು ಜನರು ಬಯಸುವ ಇತರ ಸುದ್ದಿಗಳನ್ನೂ ಪ್ರಕಟಿಸುತ್ತಿದ್ದೆವು. ಒಂದು ರಾತ್ರಿ ಒಬ್ಬ ಸಹವಿದ್ಯಾರ್ಥಿಗೆ ಚೇಳು ಕಡಿಯಿತು. ಜೇಲಿನಲ್ಲಿ ಈ ಪ್ರಾಣಿಗಳು ಹೇರಳವಾಗಿದ್ದವು. ಆಗ ದೀಪಗಳಿರದ್ದರಿಂದ ಗದ್ದಲವೊ ಗದ್ದಲವಾಯಿತು. ನಾವು ವಾರ್ಡರರನ್ನು ಕೂಗಿಕರೆದೆವು. ಅವರು ನಮ್ಮ ಕರೆಯನ್ನು ದುರ್ಲಕ್ಷಿಸಿ ಗೊರಕೆ ಹೊಡೆಯುತ್ತಿದ್ದರು. ೧೫ ನಿಮಿಷಗಳ ವರೆಗೆ ಕೂಗಿದ ಮೇಲೆ ಅವರಲ್ಲೊಬ್ಬನನ್ನೆಚ್ಚರಿಸಲು ನಾವು ಸಮರ್ಥರಾದೆವು.

ಜೇಲಿನ ಡಾಕ್ಟರರು ಬರಲು ಸರ್ವಥಾ ಒಪ್ಪಲಿಲ್ಲವೆಂದು ಆತ ಅವರಲ್ಲಿಗೆ ಹೋಗಿ ಬಂದು ತಿಳಿಸಿದ. ಇಷ್ಟೇ ಅಲ್ಲ, "ಆ ವಿದ್ಯಾರ್ಥಿಗೆ ಚೆನ್ನಾಗಿ ಒಂದು ನಾಲ್ಕು ಬಾರಿಸಿರಿ. ಅಂದರೆ ಚೇಳಿನ ಕಡಿತದ ಬಾಧೆ ತುಸು ಕಡಿಮೆಯಾದೀತು" ಎಂದು ಆ ಮಹಾಪುರುಷ ಡಾಕ್ಟರರು ಹೇಳಿದರು ಎಂದೂ ಆ ವಾರ್ಡರ್ ತಿಳಿಸಿದ. ಈ ಘಟನೆ ನಮ್ಮ ಮುಂದಿನ "ಶಿಂಬನ್" ಸಂಚಿಕೆಯಲ್ಲಿ ಪ್ರಾಮುಖ್ಯದ ಸುದ್ದಿಯಾಯಿತು. ಚೇಳು ಕಡಿಸಿಕೊಂಡವನನ್ನು ಮುಂದೆ ಎಲ್ಲರೂ "ಮಿ. ಸ್ಕೊರ್ಪಿಯನ್" ಎಂದು ಕರೆಯತೊಡಗಿದರು.

ಪಕ್ಷ ರಾಜಕಾರಣಕ್ಕೆ ಪತ್ರಿಕೆಯಲ್ಲಿ ಎಡೆಯಿರಲಿಲ್ಲ. ಜೇಲಿನಲ್ಲಿ ನಾನಾವಿಧವಾದ ರಾಜಕೀಯ ವಿಚಾರದ ಜನರಿದ್ದರು. ಒಮ್ಮೆ ಕೆಲ ಕಮ್ಯುನಿಸ್ಟ್ ಪಕ್ಷಪಾತಿಗಳು "ಶಿಂಬನ್"ನ ಪ್ರಗಾಮಿ ಸಂಪಾದಕೀಯ ಧೋರಣದ ವಿರುದ್ಧ ಪ್ರತಿಭಟಿಸಲೆಂದು ಸಭೆ ಕರೆದರು. ಒಬ್ಬ ಉಪಸಂಪಾದಕ ಮತ್ತು ಆರು ಜನ ಸುದ್ದಿಗಾರರು ರಾಜೀನಾಮೆ ಕೊಟ್ಟರು. "ಶಿಂಬನ್"ಗೆ ಗಂಡಾಂತರ ಬಂದಿತು. ಈ ಬಂಡುಗಾರರು ಪ್ರತಿಸ್ಪರ್ಧಿ ಪತ್ರಿಕೆ ಹೊರಡಿಸುವ ವಿಚಾರವನ್ನೂ ಮಾಡಿದರು. ಆದರೆ ಅದರಲ್ಲಿ ಅವರು ಯಶಸ್ವಿಯಾಗಲಿಲ್ಲ. ಜೇಲಿನಲ್ಲಿ ಕೂಡ ಹೊಸ ಪತ್ರಿಕೆ ಹೊರಡಿಸಲು ಬೇಕಾಗುವ ಬಂಡವಲಿನ ಸಮಸ್ಯೆಯಿದ್ದೇ ಇತ್ತು.

ಎಷ್ಟು ಆಕಸ್ಮಾತ್ತಾಗಿ ಪ್ರಾರಂಭವಾಗಿತ್ತೋ ಅಷ್ಟೇ ಆಕಸ್ಮಾತ್ತಾಗಿ "ಶಿಂಬನ್" ನಿಂತುಹೋಯಿತು. ಒಂದು ರಾತ್ರಿ ವಿದ್ಯಾರ್ಥಿ ಸೆರೆಯಾಳೊಬ್ಬ — ಅವನ ಹೆಸರು ಕುಮಾರನ್ ನಾಯರ್ ಎಂದಿತ್ತು ಎಂದು ಕಾಣುತ್ತದೆ— ಜೇಲಿನಿಂದ ಪಾರಾದ. ಆತ ಒಂದು ಖಾಲಿ ನೀರಿನ ಟಾಕಿಯಲ್ಲಿ ಅಡಗಿಕೊಂಡಿದ್ದ. ಮೂರು ಸಂಜೆಯ ಹೊತ್ತಿಗೆ ಎಲ್ಲ ಸೆರೆಯಾಳುಗಳನ್ನೂ ಅವರವರ ಬ್ಲಾಕಿನಲ್ಲಿ ಕೂಡಿ ಹಾಕಿದಾಗ ಅವನಿಲ್ಲದಿರುವುದು ಯಾರ ಗಮನಕ್ಕೂ ಬರಲಿಲ್ಲ. ಬಳ್ಳಾರಿಯ ವಿದ್ಯುಚ್ಛಕ್ತಿ ಯಂತ್ರಕ್ಕೆ ವಿಶ್ರಾಂತಿ ಕೊಡಲೆಂದು ಪ್ರತಿ ರಾತ್ರಿ ೧ ರಿಂದ ೩ ರ ವರೆಗೆ ಅದನ್ನು ಬಂದು ಮಾಡುತ್ತಿದ್ದರು. ಈ ಎರಡು ತಾಸುಗಳ ಕಾಲದಲ್ಲಿ ಜೇಲಿನ ಸುತ್ತಲಿನ ಮುಳ್ಳು ಬೇಲಿಯಲ್ಲಿ ವಿದ್ಯುತ್ತು ಹರಿಯುತ್ತಿರಲಿಲ್ಲ. ಧೈರ್ಯಶಾಲಿಯಾದ ಕುಮಾರನ್ ಆ ಸಮಯ ಸಾಧಿಸಿ ಆ ಬೇಲಿಯಲ್ಲಿ ನುಸುಳಿ ಪಾರಾದ.

ಹನ್ನೆರಡು ತಾಸುಗಳ ನಂತರವೇ ಕುಮಾರನ್ ನಾಪತ್ತೆಯಾಗಿರುವುದು ಹೊರಬಿತ್ತು. ಹೋವೆಯ ಆಡಳಿತ ಯಂತ್ರ ಚಟುವಟಿಕೆಯನ್ನಾರಂಭಿಸಿತು. ಶೀಟಿಗಳು ಊದಿದವು.

ಎಲ್ಲ ಸೆರೆಯಾಳುಗಳಿಗೆ ಹಾಸಿಗೆಯ ಮೇಲೆ ಬಿದ್ದುಕೊಳ್ಳಲು ಆಜ್ಞೆಯಾಯಿತು. ಅನೇಕ ಬ್ಲಾಕುಗಳಲ್ಲಿ ಹಲವಾರು ಲಾಠಿ ಚಾರ್ಜುಗಳು ನಡೆದವು. ಇಬ್ಬರಿಗೆ ವಿಶೇಷ ಗಾಯಗಳಾದವು. ಅನೇಕರಿಗೆ ಚಿಕ್ಕ ಪುಟ್ಟ ಗಾಯಗಳಾದವು. ಸೆರೆಯಾಳುಗಳಲ್ಲಿ ಹೆಚ್ಚಿನವರನ್ನು ೩೬ ತಾಸುಗಳ ವರೆಗೆ ಉಪವಾಸವಿಡಲಾಯಿತು. ಉದ್ದೇಶ ರಹಿತವಾದ ಸೇಡಿನ ದಿನವಾಗಿತ್ತದು. ಆದರೆ ಈ ಕ್ರೂರ ದಬ್ಬಾಳಿಕೆಯ ಅಂಧಕಾರದಲ್ಲಿ ಕುಮಾರನ್ ನಾಯರನ ಸಾಹಸ ಜ್ಯೋತಿಯಂತೆ ಪ್ರಕಾಶಿಸುತ್ತಿತ್ತು.

"ಶಿಂಬನ್" ತನ್ನ ಕರ್ತವ್ಯವನ್ನು ದಕ್ಷತೆಯಿಂದ ನೆರವೇರಿಸಿತು. ಕರ್ನಲ್ ಹೋವೆಯ ದಬ್ಬಾಳಿಕೆಯ ಪೂರ್ಣ ವೃತ್ತಾಂತವನ್ನದು ಪ್ರಕಟಿಸಿತು. ಅದುವರೆಗೂ ಯೋಚಿಸದೆ ಇದ್ದ ಒಂದು ಕೆಲಸವನ್ನೂ ಆಗ ನಾವು ಮಾಡಿದೆವು. ಮದ್ರಾಸಿನ ಮತ್ತು ಮುಂಬಯಿಯ ಪ್ರಮುಖ ಪತ್ರಿಕೆಗಳ ಬಳ್ಳಾರಿ ಸುದ್ದಿಗಾರರಿಗೆ ಎರಡು ಪಾಟಿಗಳನ್ನು ಗುಪ್ತವಾಗಿ ಮುಟ್ಟಿಸಿದೆವು.

ಜೇಲ್ ಅಧಿಕಾರಿಗಳ ಕ್ರೂರ ವರ್ತನೆ ದೇಶಕ್ಕೆ ಆಘಾತವನ್ನುಂಟುಮಾಡಿತು. ನಾವು ಸುದ್ದಿ ಕಳಿಸಿದ ಮೂವತ್ತಾರೇ ತಾಸುಗಳಲ್ಲಿ ಬರ್ಲಿನ್ ಆಕಾಶವಾಣಿ ಅದನ್ನು ಬಿತ್ತರಿಸಿತ್ತು ಎಂದು ನಮಗೆ ಅನಂತರ ತಿಳಿಯಿತು. ಸುದ್ದಿ ಹೇಗೆ ಹೊರಬಿತ್ತು ಎಂದು ಕರ್ನಲ್ ಹೋವೆ ವಿಚಾರಣೆ ನಡೆಸಿದ. "ಅಲೀಪುರಂ ಶಿಂಬನ್" ಈ ಗುಟ್ಟನ್ನು ಹೊರಗೆಡಹಿತು ಎಂದು ಆತ ಕಿಡಿಕಿಡಿಯಾದ.

ಕರ್ನಲ್ ಹೋವೆಗೆ ನಮ್ಮ ಪತ್ರಿಕೆಯ ಸುಳಿವು ಇತ್ತು ಎಂಬ ಮಾತು ಆ ಮೇಲೆ ನಮಗೆ ತಿಳಿಯಿತು. "ನಾನು ಈ ಪತ್ರಿಕೆಯ ವಿಚಾರವನ್ನು ತಿಳಿಸಿದಾಗ ಒಂದು ಗುಟುಕು ವಿಸ್ಕಿ ಕುಡಿದು ಕರ್ನಲ್ ಹೋವೆ ತುಂಬ ನಕ್ಕ. ಜೇಲಿನಲ್ಲಿರುವ ಕೆಲ ತುಂಟ ಹುಡುಗರು ಸಾರ್ವಭೌಮ ಸರಕಾರದ ವಿರುದ್ಧ ಪಾಟಿಗಳನ್ನು ಉಪಯೋಗಿಸುತ್ತಿದ್ದಾರೆಂದೂ ಆತ ಮದ್ರಾಸ ಸರಕಾರಕ್ಕೆ ತಿಳಿಸಿದ್ದ" ಎಂದು ಡೆಪ್ಯುಟಿ ಜೇಲರ್ ನಮಗೆ ಹೇಳಿದ. ಆದರೆ ಕುಮಾರನ್ ನಾಯರನ ಸಾಹಸದ ಸುದ್ದಿ ಪ್ರಕಟವಾದಾಗ ಹೋವೆ ತನ್ನ ರಾಜ್ಯದಲ್ಲಿ ಪತ್ರಿಕಾಸ್ವಾತಂತ್ರ್ಯದ ಅತಿರೇಕವಾಯಿತು ಎಂದು ಅಂದುಕೊಂಡಿರಬೇಕು.

ಕುಮಾರನ್ ನಾಯರ್ ಪಲಾಯನ ಮಾಡಿದ ಮೂರನೆಯ "ದಿನ ಅಲಿಪುರಂ ಶಿಂಬನ್" ಮುದ್ರಣಾಲಯವು ನಾಶಗೊಳಿಸಲ್ಪಟ್ಟ ದುರ್ದೈವಿ ಘಟನೆಯನ್ನು ನಾವು ನೋಡುವಂತಾಯಿತು. ವಾರ್ಡರರು ಬಂದು ಎಲ್ಲ ಪಾಟಿಗಳನ್ನು ಕಸಿದುಕೊಂಡು ತಮ್ಮ ಬೋಟು ದೊಣ್ಣೆಗಳಿಂದ ಅವನ್ನು ಪುಡಿ ಪುಡಿ ಮಾಡಿದರು. ಇವರಲ್ಲಿಯ ಕೆಲವರು "ಶಿಂಬನ್"ನ ಯಶಸ್ಸಿಗೆ ಸಹಾಯ ಮಾಡಿದವರಾಗಿದ್ದರು. ತಮ್ಮ ಮೇಲೆ ಗಂಡಾಂತರವೆರಗುವಂತಿದ್ದರೂ ಅವರು ಧೈರ್ಯದಿಂದ ವೃತ್ತಪತ್ರಿಕೆಗಳನ್ನು ತಂದುಕೊಟ್ಟಿದ್ದರು. ಇವರಲ್ಲಿ ಹಿರಿ ವಯಸ್ಸಿನವನೊಬ್ಬ ನಮ್ಮೊಡನೆ ಆಗಾಗ "ನೀವು ಪಾಟಿಗಳ ಮೇಲೆ ಬರೆಯುತ್ತಿರುವುದನ್ನು ಕಂಡಾಗ ನನಗೆ ಮದುರೆಯಲ್ಲಿರುವ ನನ್ನ ಮಕ್ಕಳ ನೆನಪಾಗುತ್ತದೆ" ಎಂದು ಸಜಲ ನಯನನಾಗಿ ಹೇಳುತ್ತಿದ್ದ. ಊರ ಜಗಳದಲ್ಲಿ ಕೊಲೆ ಮಾಡಿದನೆಂಬ ಆರೋಪಕ್ಕಾಗಿ ಆತನಿಗೆ ಜೀವಾವಧಿ ಶಿಕ್ಷೆಯಾಗಿತ್ತು.

"ಶಿಂಬನ್"ನ ಸಾವಿನಿಂದ ಜೇಲಿನ ಜೀವನದಲ್ಲಿ ತುಂಬಿ ಬಾರದ ಕೊರತೆಯಾಯಿತು. ನಮ್ಮಲ್ಲಿಯ ನಿರಾಶಾವಾದಿಗಳು ಕೂಡ "ಶಿಂಬನ್" ಎಂಥ ಐಕ್ಯ ಮತ್ತು ಮಾರ್ಗದರ್ಶಕ ಶಕ್ತಿಯಾಗಿತ್ತೆಂಬುದನ್ನು ಈಗ ಮನಗಂಡರು. ಆದರೆ ಸುದೈವದಿಂದ ಈ ಮಹಾಪತ್ರಿಕೆಯ ಮರಣ ಮತ್ತು ಜೇಲಿನ ಪತ್ರಿಕೋದ್ಯಮಿಗಳಲ್ಲಿ ಹೆಚ್ಚಿನವರ ಬಿಡುಗಡೆಯ ದಿನಗಳು ಹತ್ತಿರಹತ್ತಿರವಾಗಿದ್ದವು. *




# ಜಾಹೀರಾತಿಸಮ್

ಕೇಳಿದ್ದೀರಾ ಈ ಮನೋರೋಗ?

ಲಲಿತಾ ಶಾಸ್ತ್ರಿ

ನಮ್ಮೂರಿನ ಸುಬ್ಬಾ ಭಟ್ಟರು ನಿಮಗೆ ಗೊತ್ತಿಲ್ಲವೆ? ಗೊತ್ತಿಲ್ಲದಿದ್ದರೆ ಗೊತ್ತು ಮಾಡಿಕೊಳ್ಳಲೇ ಬೇಕು. ಜಗತ್ತಿನ ವೈಜ್ಞಾನಿಕ ಶಬ್ದ ಕೋಶಕ್ಕೆ "ಜಾಹೀರಾತಿಸಂ" ಎಂಬ ಹೊಸ ಶಬ್ದದ ಸೇರ್ಪಡೆಗೆ ಕಾರಣರಾದ ಮಹಾಪುರುಷರು ಅವರು.

ಶುದ್ಧ ವೈದಿಕರಾಗಿದ್ದ ಭಟ್ಟರು ಕಾರಣಾಂತರಗಳಿಂದ ತಮ್ಮ ವೈದಿಕ ವೃತ್ತಿಯನ್ನು ಅಮೂಲ್ಯವಾದ 'ಮಡಿ'ಯೊಂದಿಗೆ ಕಾಶಿಯಲ್ಲಿ ಬಿಟ್ಟು ಬಂದ ನಂತರ 'ಲೌಕಿಕ' ವಿಷಯಗಳ ಕಡೆಗೆ ಗಮನ ಕೊಡತೊಡಗಿದರು. — ಎಲ್ಲಾದರೂ ಉಂಟೆ? ಜನ್ಮತಃ ವೈದಿಕರಾದವರು ತಮ್ಮ ಕಡೆಗಾಲದಲ್ಲಿ 'ಮಾಯೆ'ಗೆ ಬಲಿಯಾಗಿ ಹೀಗೆ ಬದಲಿಸುವುದು ಸಾಧ್ಯವೆ? ಎಂದೆಲ್ಲಾ ಕೇಳಬೇಡಿ. ಇದು ಪ್ರಶ್ನೆಗೆ ಯೋಗ್ಯವಾದ ವಿಷಯವೇ ಅಲ್ಲ. 'ನೆನ್ನೆ', 'ಕ್ಯಾಪಿಟಲಿಸ್ಟ'ನಾಗಿದ್ದ 'ಇಂದಿ'ನ 'ಕಾಂಗ್ರೆಸ್‌ಭಕ್ತ'ನು, 'ನಾಳೆ'ಯೇ 'ಕಮ್ಯೂನಿಸಂನ ಕಾಮ್ರೇಡ'ನಾಗುವುದಿಲ್ಲವೆ! ವರ್ಣ ಪರಿವರ್ತನೆಯೇ ಪ್ರಧಾನ ಧರ್ಮವಾಗಿರುವ ಈ ಯುಗದಲ್ಲಿ ಯಾವುದು ಅಸಾಧ್ಯ?

ಹೀಗೆ, ಪೂರ್ವಾಶ್ರಮದಲ್ಲಿ ಗೀತಾಪಾರಾಯಣದಲ್ಲಿ ಮಗ್ನರಾಗಿರುತ್ತಿದ್ದ ನಮ್ಮ ಭಟ್ಟರು ಈಗ 'ಪತ್ರಿಕಾಪ್ರಿಯ'ರಾಗಿದ್ದಾರೆ. ಆದರೆ ಪತ್ರಿಕೆಗಳಲ್ಲಿ ಅವರನ್ನು ಆಕರ್ಷಿಸಿದುದು ರಾಜಕೀಯವಲ್ಲ; ಜಾಹೀರಾತುಗಳು! ಜಾಹೀರಾತುಗಳೆಂದರೆ ಭಟ್ಟರಿಗೆ ಏನೋ ಒಂದು ಬಗೆಯ ಆದರ; ಆತ್ಮೀಯತೆ. ಅವುಗಳನ್ನು ನೋಡಿದಾಗ ಅವರ ಹೃದಯಕ್ಕೆ, ಅವರ್ಣನೀಯವಾದ ಯಾವುದೋ ಒಂದು ಮಧುರ ಯಾತನೆಯ ಅನುಭವವಾಗುತ್ತಿತ್ತಂತೆ. "ಪೂರ್ವ ಜನ್ಮದ ವಾಸನೆ, ಬಾಂಧವ್ಯ" ಎಂದು ಹೇಳುವುದು ಇದಕ್ಕೇ ಇರಬೇಕು! ಅವರಿಗೆ ಪ್ರಿಯವೆನಿಸುವ,

ಕಂಠಪಾಠವಾಗಿರುವ ಜಾಹೀರಾತುಗಳಿಲ್ಲದ ಪತ್ರಿಕೆಗಳೇ ಇಲ್ಲ. ಜಾಹೀರಾತುಗಳಿಲ್ಲದ ಪತ್ರಿಕೆಯೆಂದರೆ ಕುಂಕುಮವಿಲ್ಲದ ಸುಮಂಗಲಿಯಂತೆ ಎಂದವರ ದೃಢಾಭಿಪ್ರಾಯ. ದಿನದಲ್ಲಿ ಅವರ ಬಾಯಿಂದ ಪಾರಾಗುವ ಮಾತುಗಳಲ್ಲಿ ಅಧಿಕಾಂಶ ಈ ಜಾಹೀರಾತುಗಳಿಗೆ ಸಂಬಂಧಪಟ್ಟದ್ದೇ. ಅವರ ಈ 'ಜಾಹೀರಾತಾಂಧತೆ'ಯ ಅತಿರೇಕಕ್ಕೆ ಅಥವಾ ಹುಚ್ಚಿಗೆ, ಇತ್ತೀಚಿಗೆ ತಮ್ಮನ್ನು 'ಸೈಕಾಲಜಿಸ್ಟ್' ಎಂದು ತಿಳಿಯುವ ನಮ್ಮೂರಿನ ಒಬ್ಬ ವ್ಯಕ್ತಿ ಇಟ್ಟಿರುವ ಹೆಸರೇ— "ಜಾಹೀರಾತಿಸಂ!" ಮನುಷ್ಯನ ಬುದ್ಧಿಗೂ ಮರುಳುತನಕ್ಕೂ 'ಅನ್ಯೋನ್ಯಾಶ್ರಿತ' ಸಂಬಂಧವಿರುವುದೇ ಇದಕ್ಕೆ ಕಾರಣ ಎಂದು ಅವರು ಈ ನವೀನ ರೋಗದ ವಿವರಣೆಯನ್ನಿತ್ತಿದ್ದಾರೆ! ಆದರೆ ಇದು ಉಳಿದ ರೋಗಗಳಂತಲ್ಲ. ಇದರ ಗುಣವೇ ಬೇರೆ. ಈ ಹೊಸದಾದ ಮಾನಸಿಕ ವ್ಯಾಧಿಯನ್ನು ಬರಿಸಿಕೊಂಡು ನರಳುವುದೂ ಇಂದಿನ ಫ್ಯಾಶನ್ ಎಂದು ತಿಳಿಯುವವರು ಇದ್ದಾರೆ.

ಮೊದಲು-ಮೊದಲು ಭಟ್ಟರ ಈ 'ಹುಚ್ಚು' ನಮಗೆ ಮನೋರಂಜನೆಗೆ ಮಾತ್ರ ಕಾರಣವಾಗಿದ್ದು, ಮುಂದೆ ರೇಗಿಸುವಂತಾಗಿ ಕೊನೆಗೆ ನಮ್ಮ 'ಮರುಕ'ಕ್ಕೆ ಪಾತ್ರವಾಯಿತು. 'ರಾಮಾ-ಕೃಷ್ಣಾ' ಎಂದು ಕಾಲ ನೂಕಬೇಕಾಗಿದ್ದ ವಯಸ್ಸಿನಲ್ಲಿ 'ಆ್ಯಸ್ಪ್ರೋ-ಆ್ಯಸ್ಪ್ರೋ' ಎಂದೂ 'ಸರ್ಫ್‌ನಿಂದ ಒಗೆದರೆ ಅತಿ ಬಿಳುಪು' ಎಂದೂ ಸ-ರಾಗವಾಗಿ ಗುಣುಗುಣಿಸಬೇಕಾಗಿ ಬಂದ ಅವರ ಅವಸ್ಥೆಗಾಗಿ ಕನಿಕರಿಸಿದೆವು. ನಮ್ಮ 'ಮರುಕ'ವು ಹೆಚ್ಚು ಪ್ರಮಾಣದಲ್ಲಿ ಖರ್ಚಾದುದು, ಅವರು ತಮ್ಮ ಮೊಮ್ಮಗಳನ್ನು ವಿವಾಹವಾಗಲೆಂದು ಬಂದ 'ಕನ್ಯಾರ್ಥಿ'ಯನ್ನು 'ಪ್ರಶ್ನಾಸ್ತ್ರ'ಗಳಿಂದ ಬೆದರಿಸಿ ಓಡಿಸಿದಾಗಲೇ!

ವರ-ಪರೀಕ್ಷೆಗೆಂದು 'ವರ'ನ ಮುಂದೆ ಸ್ವಯಂ ಭಟ್ಟರೇ 'ಪೇಪರ್‌ಪಾಣಿ'ಯಾಗಿ ಮಂಡಿಸಿದ್ದರು. ಪತ್ರಿಕೆಗಳನ್ನೋದುವ ಅಥವಾ 'ನೋಡುವ' ಅಭ್ಯಾಸ ಆ 'ವರಮಹಾಶಯ'ನಿಗೆ ಇತ್ತೆಂದು ತಿಳಿದು ಅವರು ಸಮಾಧಾನಗೊಂಡಿದ್ದರು. ಆದರೆ ಅವನ ಇರುವಿಕೆಯೂ ವ್ಯವಹಾರವೂ ಅವರಿಗೆ ಅನುಮಾನಾಸ್ಪದವಾಗಿದ್ದುವು. ತಮ್ಮ ಸಂದೇಹ ನಿವಾರಣೆಗಾಗಿ ಅವರು ಪ್ರಶ್ನಾವಳಿಯ ಸಹಾಯವನ್ನು ಕೋರಿದರು ಅವರ ಸಂಭಾಷಣೆ ಹೆಚ್ಚು ಕಡಿಮೆ ಈ ರೀತಿ ನಡೆಯಿತು—

ಭಟ್ಟರು ಕೇಳಿದರು, "ನೀವು ಪತ್ರಿಕೆಗಳ-ನ್ನೋದುವಿರಷ್ಟೆ?"

"ಓಹೋ"—ವರ ಮಹಾಶಯ ಉತ್ತರಿಸಿದ.

"ತಲೆ ಬಾಚಲು ನೀವು ಯಾವ 'ಹೇರ್ ಟಾನಿಕ್' ಉಪಯೋಗಿಸುವಿರಿ?"

"ನೀರು ಮಿಶ್ರಿತ ಖಮಟು ಕೊಬ್ಬರಿ ಎಣ್ಣೆ!" —ಕೆದರು ತಲೆಯ 'ವರ' ಹೇಳಿದ.

ಆಶ್ಚರ್ಯಗೊಂಡ ಭಟ್ಟರು ಹೇಳಿದರು: "ತ್ಸುತ್ಸು. ನೀವು 'ಬ್ರಿಲ್‌ಕ್ರೀಮ'ನ್ನೇಕೆ ಉಪಯೋಗಿಸಬಾರದು? ಅದರಿಂದ ನಿಮ್ಮ ತಲೆಗೂದಲು ಸುಂದರವಾಗುವುದಲ್ಲದೆ ಹೆಚ್ಚು ಜನರನು ಆಕರ್ಷಿಸುವುದು: ಅದರಲ್ಲೂ ಹುಡುಗಿಯರನ್ನು! ನಾನು ನನ್ನ ಜುಟ್ಟಿಗೂ ಅದನ್ನೇ ಹಚ್ಚುವುದು."

ಇದನ್ನು ಕೇಳಿ 'ವರ' ನಿಗೆ ನಗು ಬಂತು— ಹೊಸದಾಗಿ 'ಕವಿತೆ' ಗಳನ್ನು ಬರೆಯುತ್ತಿರುವ 'ನವ್ಯಕವಿ' ಈತ, ಅದರಿಂದಲೇ ಸರಿಯಾಗಿ ತಲೆ ಬಾಚಿಲ್ಲ ಎಂಬ ಗುಟ್ಟು ಭಟ್ಟರಿಗೆ ಹೇಗೆ ತಿಳಿಯಬೇಕು?—

ಅವನು ನಕ್ಕಾಗ ಪ್ರದರ್ಶಿತವಾದ ದಂತಾವಳಿಯನ್ನು ನೋಡಿ ಮೆಚ್ಚಿದ ಭಟ್ಟರು ಅಂದರು: "ನೀವು 'ಬಿನಾಕಾ' ಉಪಯೋಗಿಸುವಿರೆಂದು ತೋರುತ್ತೆ, ಅಲ್ಲವೆ? ಅದು ಒಳ್ಳೆಯದು. ಹಾಗೆಯೇ ನೀವು 'ಜಿಲೆಟ್' ಬ್ಲೇಡುಗಳನ್ನುಪಯೋಗಿಸುವುದು ಒಳಿತು. ನಿಮ್ಮ 'ಮಿಂಚುವ ಕೆನ್ನೆ' ಗಳಿಂದ ಆಕರ್ಷಿತನಾಗುವ ಆಫೀಸರನು ನಿಮಗೆ ನೌಕರಿಯಲ್ಲಿ 'ಬಡತಿ' ಯನ್ನು ಕೊಡಬ-

ಹುದು ಅಲ್ಲದೆ. . . . "

ಆ ಭಾವೀ ಅಳಿಯನು ಸಿಗರೇಟ್ ಸೇದುವ ನೆಪದಿಂದ ಊರ್ಧ್ವಮುಖನಾದ. ಅವನು ಸಿಗರೇಟ್ ಸೇದುವುದನ್ನು ನೋಡಿದ ಭಟ್ಟರ ಜಾಹೀರಾತು-ಪಕ್ಷಪಾತಿಯಾದ ಮನಸ್ಸಿಗೆ ಭಾರೀ ಆಘಾತವಾದಂತಾಯಿತು,— "ಇದೇನು, ನೀವು ತಿಳಿದೂ-ತಿಳಿದೂ ಈ ಹಾಳು ಸಿಗರೇಟನ್ನು ಸುಡುವಿರಿ? ಬೀಡಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದುದು 'ಭಿಕುಸಾಭಾಪ ಸಿನ್ನರ ಬೀಡಿ' ಎಂದು ತಿಳಿಯದೆ ಈ ಸುಟ್ಟ ಸಿಗರೇಟನ್ನು ಬಿಟ್ಟು 'ಭಿಕುಸಾಬೀಡಿ' ಯನ್ನು ಹತ್ತಿಸಬಾರದೆ? ಬೀಡಿ ಸಮೇತರಾದ ನಿಮಗೆ ಯಾವುದಾದರೂ ಒಬ್ಬ ರಾಜಕುಮಾರಿಯು 'ಮಾಲೆ' ಹಾಕದೆ ಬಿಡಳು. ನಾನೇನಾದರೂ ನಿಮ್ಮಂತೆ ಇದ್ದಿದ್ದರೆ. . . "

". . . . . ಇದ್ದಿದ್ದರೆ ತಲೆಯೊಡಕೊಂಡ ಸಾಯುತ್ತಿದ್ದೆ. ನಿಮ್ಮ ಭಿಕುಸಾ ಬೀಡಿಯೂ ನನಗೆ ಗೊತ್ತಿಲ್ಲ, 'ಬ್ರಿಲ್‌ಕ್ರೀಮೂ' ಗೊತ್ತಿಲ್ಲ! ನೀವು ಹೀಗೇ ಹೇಳೋದಾದರೆ. . . ." ಕಟಕಟನೆ ಹಲ್ಲು ಕಡಿದ ಶಬ್ದ, ವರನಿಂದ!

ಅವನ ಕೋಪಕ್ಕಿಂತ, ಈ ಅಭಿನವ ಜಾಹೀರಾತು-ಪ್ರತಿನಿಧಿಗಳನ್ನು ಆಶ್ಚರ್ಯಗೊಳಿಸಿದುದು ಅವನು ತಾವು ಹೇಳಿದ ವಿಷಯಗಳಿಗೆ ತೀರ ಅಪರಿಚಿತನೆಂಬುದೇ ಆಗಿತ್ತು. ಇದರಿಂದ ಅವರಿಗೆ ಸ್ವಲ್ಪ ಅಸಮಾಧಾನವೂ ನಿರಾಶೆಯೂ ತಲೆದೋರಿದುವು. ಆದರೂ ಅವರು ಕೇಳುವುದನ್ನು ಬಿಡಲಿಲ್ಲ,— "ಏನು ನಿಮಗೆ ಇದೊಂದೂ ತಿಳಿಯದೆ? ಆಶ್ಚರ್ಯ! ಹೋಗಲಿ, ನಿಮಗೆ ಬಿನ್ನಿಯವರ 'ಸ್ಯಾನ್‌ಫೊರೈಸ್ಡ್' ಬಟ್ಟೆ. . . ."

"ಸ್ಸಾ. ಸ್ಸಾ. . ಸಾಕು ನಿ. . . .ನಿಲ್ಸಿ. ಇ. ಇ. . . ." ಕೋಪಾವಿಷ್ಟನಾದ 'ವರ'ನ ಬಾಯಿಂದ ಮಾತುಗಳು ಹೊರಡಲಿಲ್ಲ. ಇದನ್ನು ಅಪಾರ್ಥ ಮಾಡಿಕೊಂಡ ಭಟ್ಟರು ಬೇಗ ಬೇಗ ಹೇಳಿದರು: "ಉಗ್ಗು ಏಕೆ? ಸ್ಪಷ್ಟ ಮಾತಾಡಿರಿ. ಡಾ. ಸುರತಕರ್‌ರ ಆಂಟಿ ಸ್ಟಾಮರಿಸೆಟ್‌ನ್ನು ಉಪಯೋ. . . ." ಅವರ ಮಾತು ಮುಗಿಯುವದರೊಳಗೆ ಆ 'ಬಡಪಾಯಿ' ರಸ್ತೆಯನ್ನೇ ದಾಟಿ ಪಾರಾಗಿದ್ದ! ಒಂದೇ ಉಸಿರಿಗೆ ಅಷ್ಟು ಜೋರಾಗಿ ಅವನು ಓಡುವುದನ್ನು ನೋಡಿದ ಭಟ್ಟರು, 'ಆಫೀಸರ್ ನಶ್ಯ' ದಿಂದಲೇ ಅವನಿಗೆ ಅಂತಹ ಸ್ಫೂರ್ತಿ ಬಂದಿರಬಹುದೆಂದು ಭಾವಿಸಿದರು.

ಭಟ್ಟರನ್ನು ರಾಮೇಶ್ವರ ಯಾತ್ರೆಗೆ ಕಳಿಸಿಕೊಟ್ಟರೇನೇ ತಮ್ಮ ಅಳಿಯನಿಗೆ 'ಕಾಶೀಯಾತ್ರೆ' ಮಾಡಿಸುವುದು ಸಾಧ್ಯವೆಂದು ಭಟ್ಟರ ಮಗ ಮಾಡಿದ ತೀರ್ಮಾನಕ್ಕೆ ನಾವೂ ನಮ್ಮ ಮೌನ ಸಮ್ಮತಿಯನ್ನು ಸೂಚಿಸಿದೆವು.

ಯಾಕೆ ಹೇಳೊಕ್ಕೆ ಬಂದೆ ಅಂದರೆ—

"ಪೇಪರಿನಲ್ಲಿರುವ 'ಜಾಹೀರಾತು ಮಾರಿ' ಯನ್ನು ನಮ್ಮ ಮೇಲೆ ಆವಾಹನೆ ಮಾಡಿಕೊಳ್ಳುವುದು ಮೂರ್ಖತನ" ಎಂದು! *

---

## ಹುಣಸೇ ಹಣ್ಣಿನ ಕಥೆ

ಇಂಗ್ಲೀಷಿನಲ್ಲಿ 'ಟಾಮರಿಂಡ್' (Tamarind) ಎಂದರೆ ಹುಣಸೇ ಹಣ್ಣು. ಇದಕ್ಕೆ 'ಟಾಮರಿಂಡೋ' (Tamarindo) ಎಂಬ ಸ್ಪೇನ್ ಭಾಷೆಯ ಪದವೇ ಮೂಲ. ಸ್ಪೇನಿನವರು ಇದನ್ನು ಅರಬ್ಬೀ ಭಾಷೆಯಿಂದ ತೆಗೆದುಕೊಂಡಿರುವರು. ಅರಬ್ಬಿಯಲ್ಲಿ 'ತಾಮರ್-ಇ-ಹಿಂದ್' (Tamar-i-Hind) ಎಂದಿದೆ. ತಾಮರ್ ಎಂದರೆ ಖರ್ಜೂರ. ಭಾರತದಲ್ಲಿ ಆಗ ಖರ್ಜೂರ ಇರಲಿಲ್ಲ. ಖರ್ಜೂರದಂತೆ ಕಂಡ ಹುಣಸೇಹಣ್ಣನ್ನೇ ಅವರು 'ಭಾರತದ ಖರ್ಜೂರ' ತಾಮರ್-ಇ-ಹಿಂದ್ ಎಂದರು.

ಸಂಗ್ರಹ : ಎಸ್. ಬಿ. ರವೀಂದ್ರನಾಥ, ಶ್ರವಣಬೆಳ್ಗೊಳ

ಇದರ ಮೇಲೆ ಹಿಡಿತವಿಡಿ!



ಕನ್ಹಯ್ಯಲಾಲ ಮಿಶ್ರ ಪ್ರಭಾಕರ

# ಈ ಡೈನಾಮೈಟ್ ನಿಮಗೆ ಗೊತ್ತೆ?

ಡೈನಾಮೈಟ್! ಹಾಂ ಹೌದು ಸ್ವಾಮೀ, ನಾನು ಹೇಳುತ್ತಿರುವುದು ಸ್ಫೋಟಕ ಮದ್ದಿನ ಮಾತನ್ನೇ!

ಹೆಸರಿನಂತೆಯೆ ಜೋರಾಗಿದೆ ಈ ಡೈನಾಮೈಟ್! ಮನೆಯ ಕೆಳಗೆ ಸೇರಿಸಿ ಬೆಂಕಿ ಹಚ್ಚಿ. ಮನೆಯ ಇಟ್ಟಿಗೆ ಇಟ್ಟಿಗೆಯೂ ಬೇರೆ ಬೇರೆಯಾಗಿ ಸಿಡಿದು ಬೀಳುವುದು. ಗುಡ್ಡದೊಳಗೆ ಸೇರಿಸಿ ಬೆಂಕಿ ಹಚ್ಚಿ. ಬಂಡೆಗಳಿಗೆ ಬಂಡೆಗಳೇ ಉರುಳಿ ಬೀಳುವವು. ಬಲು ವಿಧ್ವಂಸಕ ಶಕ್ತಿಯನ್ನು ಹೊಂದಿದೆ ಈ ಡೈನಾಮೈಟ್.

ಮನುಷ್ಯನ ಮನಸ್ಸು ಎಷ್ಟು ವಿಚಿತ್ರವಾಗಿದೆ ಬಲ್ಲಿರಾ? ಈ ಡೈನಾಮೈಟನ್ನು ಶೋಧಿಸಿದ ನೋಬೆಲ್ ಮಹಾಶಯ ಅದರಿಂದ ಕೋಟಿಗಟ್ಟಲೆ ರೂಪಾಯಿ ಗಳಿಸಿದ. ಆದರೆ ಆ ಸಂಪತ್ತನ್ನು ಆತ ವಿಶ್ವದಲ್ಲಿ ಶಾಂತಿಸ್ಥಾಪನೆಗಾಗಿ ಸರ್ವೋತ್ತಮವಾದ ಕಾರ್ಯ ಮಾಡುವ ಜನರಿಗೆ, ಶ್ರೇಷ್ಠ ವೈಜ್ಞಾನಿಕ ಶೋಧ ಮಾಡುವವರಿಗೆ ಬಹುಮಾನರೂಪದಲ್ಲಿ ಕೊಡಲು ದಾನವಾಗಿತ್ತ. ಎಲ್ಲಿ ವಿಧ್ವಂಸ, ಎಲ್ಲಿ ಸೃಷ್ಟಿ!! ವಿಧ್ವಂಸಕ ಶಕ್ತಿಯು ನಿರ್ಮಾಪಕ ಸೃಷ್ಟಿಯ ಸಂರಕ್ಷಕನಾದದ್ದು ಪ್ರಕೃತಿಯ ಎಂಥ ವಿರೋಧಾಭಾಸ!

ಎಲ್ಲಿ ಸಿಗುತ್ತದೆ ಈ ಡೈನಾಮೈಟ್ ಎಂದು ಕೇಳುತ್ತೀರಾ? ಏನು ಸ್ವಾಮೀ, ಎಂಥ ಮಾತು! ಹಾಗೇನು ಬೇಕೆನಿಸಿದಾಗ ಒಂದಾಣೆ ಬಿಸಾಕಿ ಕೊಂಡುಕೊಳ್ಳಲು ಅದೇನು ಕಡ್ಡಿಪೆಟ್ಟಿಗೆಯೆ? ಸರಕಾರ ಅದರ ಮೇಲೆ ನಿಯಂತ್ರಣವಿಟ್ಟುಕೊಂಡಿದೆ. ಹಾಗೆ ರಾಮನಿಗೂ ರಹಿಮನಿಗೂ ಡೈನಾಮೈಟ್ ಬೇಕೆಂದ ಹಾಗೆ ಸಿಗುತ್ತಿದ್ದರೆ ಈ ಜಗತ್ತು ಸುಂದರ ಕಟ್ಟಡಗಳ ಬೀಡಾಗಿರದೆ ಭಗ್ನಾವಶೇಷಗಳ ಪ್ರದರ್ಶನವಾಗಿಬಿಡುತ್ತಿತ್ತು.

ಆದರೆ ಇನ್ನೊಂದು ಮಾತಿದೆ ಸ್ವಾಮೀ. ನೋಬೆಲ್ ಮಹಾಶಯನಿಗಿಂತಲೂ ಮೊದಲೇ ಅಸ್ತಿತ್ವದಲ್ಲಿದ್ದ ಡೈನಾಮೈಟ್ ಒಂದಿದೆ. ಅದರ ಮೇಲೆ ಯಾರ, ಯಾವ ನಿಯಂತ್ರಣವೂ ಇಲ್ಲ. ಅದು ನಿತ್ಯವೂ ಅನೇಕ ಮನೆಗಳನ್ನು, ಸಂಸಾರಗಳನ್ನು ಹಾಳು ಮಾಡುತ್ತಿದೆ. ಎಲ್ಲರೂ ಅದನ್ನು ಸ್ವಚ್ಛಂದವಾಗಿ ಉಪಯೋಗಿಸುತ್ತಾರೆ. ನೀವು ಸ್ವತಃ ಈ ಡೈನಾಮೈಟನ್ನು ಅನಿರ್ಬಂಧವಾಗಿ ಉಪಯೋಗಿಸುತ್ತಿರುವಿರಿ.

ನಿಮಗೆ ಆ ವಸಂತನಿಗೆ ಬೇನೆಯಾದದ್ದು,

ಅವನು ಸತ್ತದ್ದು ನೆನಪಿದೆ ತಾನೇ! ಬಹಳ ಜಾಣ ಹುಡುಗನಾಗಿದ್ದನಾತ. ನೆನಪಾದೊಡನೆ ಹೃದಯ ಚುರ್ರೆನ್ನುತ್ತದೆ. ಆತ ಬೇನೆ ಬಿದ್ದಾಗ ಅವನ ತಂದೆ ಬಡವನಾಗಿದ್ದರೂ ಔಷಧೋಪಚಾರದಲ್ಲಿ ಒಂದಿಷ್ಟೂ ಕಡಿಮೆ ಮಾಡಲಿಲ್ಲ. ಡಾ. ಹರ್ಷ ವರ್ಧನರಿಂದ ಬೆಲೆ ಬಾಳುವ ಔಷಧಿಗಳನ್ನು ತಂದು ಕೊಟ್ಟ. ಡಾ. ಕಾಮತ, ಡಾ ಸುರೇಂದ್ರ, ಡಾ. ಭಟನಾಗರರ ಸಲಹೆಯನ್ನೂ ಪಡೆದ.

ಡಾಕ್ಟರರು ಮಾತ್ರವಲ್ಲ, ನೆರೆಹೊರೆಯವರು ಕೂಡ ವಸಂತನನ್ನುಳಿಸಿಕೊಳ್ಳಲು ಮಾಡಿದ ಪ್ರಯತ್ನಗಳು ಅತ್ಯಂತ ಸಮರ್ಪಕವಾಗಿದ್ದವು ಎಂದು ಅಂದರು. ಆದರೆ ನೀವು ಡೈನಾಮೈಟ್ ಹಾರಿಸಿ ಆ ಬಡ ಮುದುಕ– ವಸಂತನ ತಂದೆ– ಕಟ್ಟಿಕೊಂಡಿದ್ದ ದುರ್ಗವನ್ನು ವಿಧ್ವಂಸಗೊಳಿಸಿ ಬಿಟ್ಟಿರಿ.

ಯಾಕೆ ನನ್ನನ್ನು ದುರುಗುಟ್ಟಿ ನೋಡುತ್ತೀರಿ? ಹುಡುಗ ಸತ್ತ ವಾರನೆಯ ದಿನವೇ ನೀವು, "ಡಾಕ್ಟರರ ಬೆನ್ನು ಹತ್ತದೆ ನನ್ನ ಮಾತು ಕೇಳಿ ಮಂತ್ರವಾದಿಗಳನ್ನು ಕರೆಸಿ ವಿಭೂತಿ ಹಾಕಿಸಿ-ದ್ದರೆ ನಿನ್ನ ಮಗ ಬದುಕುತ್ತಿದ್ದ" ಎಂದು ಆತನ ತಂದೆಗೆ ಹೇಳಿದಿರಿ.

ಈಗ ಹೇಳಿ, ನಿಮ್ಮ ಈ 'ಕೇಳಿದ್ದರೆ' ಎಂಬ ಶಬ್ದ ಒಂದೇ ನಿಮಿಷದಲ್ಲಿ ಆ ಮುದುಕ ಮಾಡಿದ್ದೆಲ್ಲವೂ ವ್ಯರ್ಥವಾಗಿತ್ತು ಎಂದು ಸಾರಿಬಿಡಲಿಲ್ಲವೆ? ನೀವು ಬಿತ್ತಿದ ವಿಷ ಬೀಜ ಎಂಥ ಭಯಂಕರವಾಗಿತ್ತು ಎಂಬುದು ವಸಂತನು ತಂದೆ ನನ್ನೊಡನೆ, "ನಾನು ಅವರ (ನಿಮ್ಮ) ಮಾತನ್ನು ಕೇಳಿದ್ದರೆ ನನ್ನ ಮನೆ ಸ್ಮಶಾನವಾಗುತ್ತಿರಲಿಲ್ಲ" ಎಂದು ಅತ್ತಾಗಲೇ ನನಗೆ ತಿಳಿಯಿತು. ಆದ್ದರಿಂದಲೇ ನಾನು –– ಈ 'ಆದರೆ' 'ಇದ್ದರೆ' ಎಂಬ ಡೈನಾಮೈಟ್ ನೋಬೆಲ್‌ನಿಗಿಂ-ತಲೂ ಮೊದಲಿನಿಂದಲೂ ಇದೆ. ನಾನು, ನೀವು ಎಲ್ಲರೂ ಅದನ್ನು ಅನಿರ್ಬಂಧವಾಗಿ ಉಪಯೋಗಿಸುತ್ತಿದ್ದೇವೆ ಅನ್ನುತ್ತೇನೆ.

ಪಂಡಿತ ಮಾಯಾರಾಮನನ್ನು ಬಲ್ಲಿರಿ ತಾನೇ? ಆತ ನಿಮಗೆ ದೂರದ ಸಂಬಂಧಿಕ ಎಂದಮೇಲೆ ಗೊತ್ತಿರದೆ ಏನು! ಅವರು ಒಂದು ಹಳ್ಳಿಯ ಶಾನುಭೋಗರು. ಮಗ ಝುಮ್ಮನಲಾಲನನ್ನು ಶಾಲೆಗೆ ಸೇರಿಸುವಾಗ ಅವರು ಯೋಚಿಸಿದರು: "ಝುಮ್ಮನನಿಗೆ ಈಗ ವರ್ಷ ೧೦. ೪ ವರ್ಷಗಳಲ್ಲಿ ಈತ ಮಿಡಲ್ ಪಾಸ್ ಮಾಡುತ್ತಾನೆ. ಆ ಮೇಲೆ ಈತನನ್ನು ಶಾನುಭೋಗ ಉಮೇದುವಾರಿಕೆಗೆ ಸೇರಿಸಿದರೆ ಎರಡು ವರ್ಷಗಳಲ್ಲಿ ಅಂದರೆ ೧೬ ನೇ ವರ್ಷಕ್ಕೆ ಈತ ಶಾನುಭೋಗನಾಗುತ್ತಾನೆ. ಶಾನುಭೋಗರ ಮಗ ಶಾನುಭೋಗನಾಗುತ್ತಾನೆ. ಆದರೆ ಈತ ಮಿಡಲ್‌ಪಾಸ್ ಆಗುವಾಗ ಬರೇ ೧೪ ವರ್ಷದವನಾಗುತ್ತಾನೆ. ಶಾನುಭೋಗ ಉಮೇದುವಾರಿಕೆಗೆ ಸೇರಲು ೧೬ ವರ್ಷಗಳಾಗಬೇಕಾಗುತ್ತದೆ. ಏನು ಮಾಡಬೇಕು?"

ಮಾಯಾರಾಮ ತಲೆ ಓಡಿಸಿದ. ಶಾಲೆಯಲ್ಲಿ ಮಗನ ವಯಸ್ಸನ್ನು ೧೦ ರ ಬದಲು ೧೨ ಎಂದು ಬರೆಸಿದ. ಮಾತು ಹೊರಬಿತ್ತು, ಗುಟ್ಟು ರಟ್ಟಾಯಿತು. ವಯಸ್ಸು ಹೆಚ್ಚಿಸಿದ್ದು ಬಹಿರಂಗವಾಯಿತು. ಶಾಲೆಯಲ್ಲಿ ಹುಡುಗರು ಝುಮ್ಮನನನ್ನು ಹನ್ನೆರಡರ ಕೋಣ ಎಂದು ಗೇಲಿ ಮಾಡಹತ್ತಿದ್ದರು. ಝುಮ್ಮನ ಅತ್ತ, ಬೇಡಿಕೊಂಡ, ಆದರೆ ತಂದೆ ಒಂದನ್ನೂ ಲೆಕ್ಕಿಸಲಿಲ್ಲ, ಮಗನ ವಯಸ್ಸಿನ ದಾಖಲೆಯನ್ನು ತಿದ್ದಿಸದೆ ಹಾಗೇ ಇಟ್ಟ.

ಹುಡುಗ ಮಿಡಲ್‌ನಲ್ಲಿ ಒಂದನೇ ನಂಬರು ಬಂದು ಪಾಸಾದ. ಅವನಿಗೆ ಸ್ಕಾಲರ್‌ಶಿಪ್ ಸಿಕ್ಕಿತು. ಅಪ್ಪ ಎಷ್ಟು ಹೇಳಿದರೂ ಮಗ ಶಾನುಭೋಗ ಉಮೇದುವಾರನಾಗಲು ಒಪ್ಪದೆ ಇಂಗ್ಲಿಷ್ ಶಾಲೆ ಸೇರಿದ. ಮ್ಯಾಟ್ರಿಕ್ ಆದ, ಎಂ. ಎ. ಆದ. ಎಂ ಎ.ದಲ್ಲಿ ಕೂಡ ಒಂದನೇ ನಂಬರು ಬಂದ. ಆ ಕಾಲದಲ್ಲಿ ವಿಶ್ವವಿದ್ಯಾಲಯದಲ್ಲಿ ಒಂದನೇ ನಂಬರು ಬಂದವನನ್ನು ಐ.ಸಿ.ಎಸ್. ಗೆ ಸೇರಿಸಿಕೊಳ್ಳುವ ರೂಢಿ ಇತ್ತು.

ಝುಮ್ಮನನನ್ನೂ ಸೇರಿಸಿಕೊಂಡರು. ಮಾಯಾರಾಮನ ಮಗ ಕಲೆಕ್ಟರನಾದ ಎಂದು ಎಲ್ಲೆಡೆ ಸುದ್ದಿ ಹಬ್ಬಿಬಿಟ್ಟಿತು. ಆದರೆ ಐ. ಸಿ. ಎಸ್. ಸಿಲೆಕ್ಶನ್ ಬೋರ್ಡಿನೆದುರು ಕಾಗದ ಪತ್ರಗಳು ಬಂದಾಗ ಝುಮ್ಮನನ ವಯಸ್ಸು ನಿರ್ದಿಷ್ಟ ವಯಸ್ಸಿಗಿಂತ ಎರಡು ವರ್ಷ ಹೆಚ್ಚಿಗಿದೆ ಎಂದು ಗೊತ್ತಾಗಲು ಝುಮ್ಮನನನ್ನು ಐ. ಸಿ. ಎಸ್. ಗೆ ಸೇರಿಸಿಕೊಳ್ಳಲಿಲ್ಲ.

ಈಗ ಜೆ. ಎಲ್. ವಾಶಿಷ್ಠ, ಎಂ. ಎ. ಆಗಿದ್ದ ಝುಮ್ಮನಲಾಲ ಒಂದು ಕಾಲೇಜಿನಲ್ಲಿ ಪ್ರೊಫೆಸರನಾದ. ಅವನ ತಂದೆ ಮಾತ್ರ ಸದಾ ನಾನು ಮೊದಲೇ ಮಗನ ಮಾತನ್ನು ಮನ್ನಿಸಿ ಅವನ ನಿಜ ವಯಸ್ಸನ್ನು ಬರೆಸಿದ್ದರೆ ಮಗ ಇಂದು ಕಲೆಕ್ಟರ ದೊರೆ ಆಗುತ್ತಿದ್ದ" ಎಂದುಕೊಂಡು ಪಶ್ಚಾತ್ತಾಪಪಡುತ್ತಲೇ ಉಳಿಯುವಂತಾಯಿತು. ಈ " ರೆ " ಅವರ ಬಾಳಿನ ಭಗ್ನಾವಶೇಷವಾಗಿತ್ತು.

ಇನ್ನೊಬ್ಬ ತಂದೆಯ ಮಾತನ್ನು ಹೇಳುತ್ತೇನೆ, ಕೇಳಿ.

ಮುಕುಂದರಾಮ ಮತ್ತು ನಾನು ಸಹಪಾಠಿಗಳು. ಆತ ಓದು ಮುಗಿಸಿ ಊರಿಗೆ ಹೋದ ಮೇಲೆ ಅವನ ಲಗ್ನ ನಿಶ್ಚಯವಾಯಿತು. ಹೆಣ್ಣು ನಮ್ಮ ಊರಿನದೇ. ಆದ್ದರಿಂದ ಮುಕುಂದರಾಮನ ದಿಬ್ಬಣ ನಮ್ಮ ಊರಿಗೆ ಬಂತು. ನನ್ನನ್ನು ಕಂಡೊಡನೆ ಮುಕುಂದರಾಮನ ತಂದೆ " ನೋಡಿದೆಯೇನೊ, ಈ ಹುಡುಗ ನನ್ನ ಮಾತು ಕೇಳುವುದೇ ಇಲ್ಲ." ಎಂದ.

ಮುಕುಂದರಾಮ ಎಷ್ಟು ಸರಳ ಮತ್ತು ಭೋಳೇ ಸ್ವಭಾವದವ ಎಂದರೆ ಅವನು ನನ್ನ ಮಾತನ್ನೂ ಮೀರುತ್ತಿರಲಿಲ್ಲ. ಅಂಥವನು ತಂದೆಯ ಮಾತನ್ನು ಮೀರುತ್ತಾನೆ ಎಂದರೆ? ಇದು ಅಸಂಭವ. ಈಗ ಅಸಂಭವ ಸಂಭವವಾಗಿತ್ತು. ಇಲ್ಲವಾದರೆ ನನ್ನನ್ನು ಕಂಡೊಡನೆ ಅವನ ತಂದೆ ಹೀಗೆನ್ನುತ್ತಿದ್ದರೆ? ಮುಕುಂದರಾಮನನ್ನು ಏಕಾಂತದಲ್ಲಿ ಕೇಳಿದೆ. ತಿಳಿಯಿತು ಸಮಾಚಾರ. ಅದೇ ಡೈನಾಮೈಟ್ ವಿಚಾರ.

ಮದುವೆಗಾಗಿ ಒಯ್ಯಬೇಕಾಗಿದ್ದ ಪೆಟ್ಟಿಗೆಯನ್ನು ಹೊರಗೆ ಒಂದು ಗಿಡದ ಬುಡದಲ್ಲಿ ಇಟ್ಟಿದ್ದರು. ಎಲ್ಲ ತಯಾರಾಗಿ ಎಲ್ಲರೂ ಹೊರಡುವ ಸಮಯದ ವರೆಗೆ ಅದನ್ನು ನೋಡಿಕೊಂಡಿರಲು ಮುಕುಂದರಾಮನಿಗೆ ಅವನ ತಂದೆ ಹೇಳಿದರು. ಮದುವೆಗೆ ಬರುವವರೆಲ್ಲ ಅಲ್ಲಿಯೆ ಒಂದು ಎತ್ತಿನ ಬಂಡಿಯನ್ನೇರತಕ್ಕವರಿದ್ದರು. ಆ ಬೇವಿನ ಗಿಡದ ಮೇಲೆ ಕುಳಿತಿದ್ದ ಕಾಗೆಯೊಂದು ಮಲವಿಸರ್ಜನೆಮಾಡಲು ಅದು ಮುಕುಂದರಾಮನ ಕೋಟಿನ ಮೇಲೆ ಬಿದ್ದು ಅದು ಹೊಲಸಾಯಿತು. ಮುಕುಂದರಾಮ ಕೋಟನ್ನು ಒರಸಿಕೊಳ್ಳುತ್ತಿದ್ದಾಗಲೇ ಹೊರಗೆ ಬಂದ ತಂದೆ ಅದನ್ನು ನೋಡಿ ಗರ್ಜಿಸಿದರು. " ಥೂ ಕತ್ತೆ, ನಾಲ್ಕೂ ಕಡೆಗೆ ದೃಷ್ಟಿ ಹಾಯಿಸಿ ನೋಡಿಕೊಳ್ಳಲಾರದ ನೀನು ಮತ್ತೇನು ಮಾಡಬಲ್ಲೆ? ಮರದ ಮೇಲೆ ಕೂಡ ಒಮ್ಮೆ ದೃಷ್ಟಿ ಹಾಯಿಸಿ ನೋಡಬೇಕು ಎಂಬ ಸರಳ ಮಾತು ಕೂಡ ನಿನ್ನ ಮಂದಬುದ್ಧಿಗೆ ಹೊಳೆಯಲಿಲ್ಲವೆ?"

ಎಲ್ಲರೂ ಸ್ಟೇಶನ್ನಿಗೆ ಬಂದರು. ಮತ್ತೆ ಸಾಮಾನುಗಳನ್ನು ಒಂದು ಗಿಡದ ಕೆಳಗಿಡಿಸಿ ತಂದೆ ಗಾಡಿ ಬರುವ ವರೆಗೆ ಅವನ್ನು ನೋಡಿಕೊಂಡಿರಲು ಮುಕುಂದರಾಮನಿಗೆ ಹೇಳಿದರು. ಮುಕುಂದರಾಮನಿಗೆ ಮೊದಲಿನ ಮಾತು ನೆನಪಿಗೆ ಬಂದು ಆತ ತಲೆ ಮೇಲೆತ್ತಿ ಗಿಡದ ಮೇಲೆಲ್ಲಾದರೂ ಕಾಗೆಗಳು ಕುಳಿತಿವೆಯೆ ಎಂದು ನೋಡತೊಡಗಿದ.

ಅಷ್ಟರಲ್ಲಿ ತಿರುಗಿ ಬಂದ ತಂದೆ ಮತ್ತೆ ಗರ್ಜಿಸಿದರು: " ಥೂ ನಿನ್ನ, ನಿನ್ನ ಲಕ್ಷ್ಯವನ್ನು ಉದ್ದಿಷ್ಟ ಕಾರ್ಯದ ಮೇಲಿಡಲಾರದೆ ಮಂಗನಂತೆ ಅತ್ತಿತ್ತ ನೋಡುವ ನೀನು ಈ ಜಗತ್ತಿನಲ್ಲಿ ಬದುಕುವುದಾದರೂ ಹೇಗೆ? ಸಾಮಾನಿನ ಮೇಲೆ ಕಣ್ಣಿಟ್ಟಿರಬೇಕು ಎಂಬ ಸರಳ ಮಾತು ಕೂಡ ನಿನ್ನ ಮಂದ ಬುದ್ಧಿಗೆ ಹೊಳೆಯಲಿಲ್ಲವೆ?"

ಮುಕುಂದರಾಮನಿಗೆ ಬಂದ ಸಮಸ್ಯೆ ನಿಜವಾಗಿ ಸಮಸ್ಯೆಯೆ ಆಗಿತ್ತು. ಅಪ್ಪನ ಮೊದಲಿನ ಮಾತು ಕೇಳಿದರೆ ಎರಡನೆಯ ಮಾತನ್ನು ಮೀರಬೇಕಾಗುತ್ತಿತ್ತು. ಎರಡನೆಯದನ್ನು ಕೇಳಿದರೆ ಮೊದಲನೆಯದನ್ನು ಮೀರಬೇಕಾಗುತ್ತಿತ್ತು. ತಂದೆಯ ಮಾತು ಕೇಳಿದ್ದರೆ ಬೈಸಿಕೊಳ್ಳಬೇಕಾಗುತ್ತಿರಲಿಲ್ಲ ಎಂದು ಆತ ಯೋಚಿಸಿದರೂ ಯಾವ ಮಾತನ್ನು ಕೇಳಿದ್ದರೆ ಬೈಸಿಕೊಳ್ಳುವುದು ತಪ್ಪುತ್ತಿತ್ತು ಎಂಬುದು ಅವನಿಗೆ ಸಮಸ್ಯೆಯೆ ಆಗಿ ಉಳಿಯಿತು.

ನಾನೇನೊ ಆತನಿಗೆ ಸಮಾಧಾನ ಹೇಳಿದೆ. ಆದರೆ ಸಮಾಧಾನ ಹೇಳಲು ಬಾರದಂಥ ಸಂದರ್ಭಗಳೂ ಇರುತ್ತವೆ. ಕೇಳಿದ್ದೀರಲ್ಲ, ಕಾಕಾನ ಬಂಗಲೆಯ ಕಥೆಯನ್ನು! ಇಲ್ಲವೆ, ಹಾಗಾದರೆ ಕೇಳಿ.

ಒಬ್ಬರು ಬಹಳ ಹಣ ವೆಚ್ಚಮಾಡಿ ಒಂದು ಸುಂದರ ಬಂಗಲೆಯನ್ನು ಕಟ್ಟಿಸಿದರು. ಅವರ ಮಿತ್ರ ತನ್ನ ಮಗನಿಗೆ "ನಿನ್ನ ಕಾಕಾ ಬಂಗಲೆ ಕಟ್ಟಿಸಿದ್ದಾರೆ, ಹೋಗಿ ನೋಡಿ ಬಾ" ಎಂದ.

ಮಗ ಬಂದ. ಕಾಕಾ ಅವನಿಗೆ ಅಭಿಮಾನದಿಂದ ಬಂಗಲೆ ತೋರಿಸಿದರು. ಇಬ್ಬರೂ ಹೊರಗೆ ಬಂದ ಮೇಲೆ ಅವರು: "ಏನಪ್ಪಾ, ಹೇಗಿದೆ ಬಂಗಲೇ ? ಎಂದು ಕೇಳಿದರು.

ಹುಡುಗ ಗಂಭೀರನಾಗಿ, "ಬಂಗಲೆ ಅರಮನೆಯೇ ಆಗಿದೆ. ಆದರೆ ಇದರ ಬಾಗಿಲು ಮಾತ್ರ ತೀರ ಚಿಕ್ಕದಾಗಿದೆ. ಇದರಲ್ಲಿಂದ ಒಂದು ಹೆಣವನ್ನು ಕೂಡ ಹೊರಗೆತ್ತಿ ತರಲು ಸಾಧ್ಯವಾಗದು" ಎಂದ.

ಕಾಕಾನ ಮನಸ್ಸು ಮುದುಡಿಹೋಯಿತು.

ಅಂದು ಸಂಜೆ ಆ ಮಿತ್ರ ಮಹಾಶಯ ಬಂಗಲೆ ನೋಡಲು ಬಂದ. ಕಾಕಾ ಅವನ ಮಗ ಅಂದದ್ದನ್ನು ಹೇಳಿ: "ಹೀಗೆ ಹೇಳಬೇಕೇ ಆತ ?" ಎಂದು ಕೇಳಲು ಮಿತ್ರ ಮಹಾಶಯ "ಥೂತ್ ! ಮೂರ್ಖ ಹುಡುಗ. ಅವನ ಮಾತನ್ನೇನು ಮನಸ್ಸಿಗೆ ಹಚ್ಚಿಕೊಳ್ಳುತ್ತೀರಿ ? ಈ ಬಾಗಿಲಲ್ಲಿ, ಒಂದಲ್ಲ ಎರಡು ಹೆಣಗಳನ್ನು ಏಕಕಾಲಕ್ಕೆ ಹೊರಗೆ ತರಬಹುದು" ಎಂದ.

ಹೇಳಿ, ಕಾಕಾ ಅವರಿಬ್ಬರಲ್ಲಿ ಯಾರ ಮಾತನ್ನೂ ಲೆಕ್ಕಕ್ಕೆ ಹಿಡಿಯಬೇಕು? ಆ ತಂದೆ ಮಕ್ಕಳಲ್ಲಿ ಯಾರಿಗೆ ಬುದ್ಧಿ– ಸಮಾಧಾನ ಹೇಳಬಹುದು ?

ಈಗಲಾದರೂ ತಿಳಿಯಿತೇ, ನೋಬಲ್ ಮಹಾಶಯನಿಗಿಂತಲೂ ಮೊದಲೇ ಅಸ್ತಿತ್ವದಲ್ಲಿರುವ, ನಾನು, ನೀವು, ಎಲ್ಲರೂ ಅನಿರ್ಬಂಧವಾಗಿ ಉಪಯೋಗಿಸುತ್ತಿರುವ ಡೈನಾಮೈಟ್‌ನ ವಿಷಯ ?

*

---

ಹಂಗೆರಿಯಲ್ಲಿ ಕಮ್ಯುನಿಸ್ಟ್ ಅಧಿಕಾರಿ ಒಬ್ಬ ಸಂನ್ಯಾಸಿಯನ್ನು, ಹೊಸ ಆಲೂಗಡ್ಡೆ ಬೆಳೆಯ ಯೋಜನೆ ಹೇಗೆ ಸಾಗುತ್ತಿದೆಯೆಂದು ಕೇಳಿದ. "ಸ್ಟಾಲಿನ್ನನ ವೈಭವಯುತ ಆಡಳಿತದಲ್ಲಿ ನಮ್ಮ ಆಲೂಗಡ್ಡೆಯ ಬೆಳೆ ತುಂಬಾ ಆಶ್ಚರ್ಯಕರವಾಗಿದೆ ! ನಾವು ನಮ್ಮ ಎಲ್ಲ ಆಲೂಗಡ್ಡೆಗಳನ್ನು ಕಂಬದಾಕಾರದಲ್ಲಿ ಜೋಡಿಸಿದಲ್ಲಿ, ಅವು, ದೇವರ ಪಾದವನ್ನು ಸೇರುವಂಥ ಪರ್ವತವನ್ನು ರಚಿಸುತ್ತವೆ !" ಎಂದುತ್ತರಿಸಿದ ಆ ಸಂನ್ಯಾಸಿ.

"ಆದರೆ ನೀವು ತಿಳಿದಿರುವ ಹಾಗೆ ಅಲ್ಲಿ ದೇವರಿಲ್ಲವಲ್ಲ" ಅಧಿಕಾರಿ ಹೇಳಿದ.

"ಇಲ್ಲೂ ಕೂಡ ಆಲೂಗಡ್ಡೆಗಳೇ ಇಲ್ಲ !" ಎಂದುತ್ತರಿಸಿದ ಸಂನ್ಯಾಸಿ.

ಸಂಗ್ರಹ:— ಜಿ. ಕೆ. ನಾಡಿಗ್

ಈ ಭೀಕರ ಜಂತು ಬುದ್ಧಿಶಕ್ತಿಯಲ್ಲಿ
ಒಂದನೇ ನಂಬರಲ್ಲ !

# ಮೊಸಳೆ, ಮನುಷ್ಯ ಮತ್ತು ಬೇಟೆ

ಶ್ರೀನಿವಾಸ ಹಾವನೂರ

ಜಲಚರ ಪ್ರಾಣಿಗಳಲ್ಲೆಲ್ಲ ಮೊಸಳೆಯಷ್ಟು ಕುರೂಪಿಯೂ ಅಸಹ್ಯಕರವಾದುದೂ ಆದ ಪ್ರಾಣಿ ಬೇರೊಂದಿಲ್ಲ. ಆದರೂ ಅದನ್ನು ಪೂಜಿಸುವ, ಪವಿತ್ರವೆಂದು ಕಾಣುವ ಜನಾಂಗಗಳು ಹಲವಾರು ಇವೆ. ಗಜೇಂದ್ರಮೋಕ್ಷಕ್ಕೆ ಕಾರಣವಾದ ಮಹಾಮೊಸಳೆ, ಶಂಕರಾಚಾರ್ಯರ ಸಂನ್ಯಾಸ ದೀಕ್ಷೆಗೆ ಲೈಸನ್ಸ್ ಒದಗಿಸಿದ ಮೊಸಳೆ ನಮ್ಮ ದೇಶದಲ್ಲಿ, ಹಿಂದೂ ಧರ್ಮದಲ್ಲಿ ಚಿರಾಯುವಾಗಿವೆ. ಅದೇನು ಕಾರಣವೊ, ಬೌದ್ಧರಿಗೂ ಮೊಸಳೆಯು ಅತ್ಯಂತ ಪೂಜನೀಯವಾಗಿದೆ. ಆಫ್ರಿಕೆಯ ಪ್ರತಿಯೊಂದು ಕಾಡು ಜನಾಂಗವೂ ಮೊಸಳೆಯನ್ನು ಪೂಜಿಸುತ್ತದೆ ಎನ್ನಬಹುದು. ಪುರಾತನದ ಕಾಲದ ಇಜಿಪ್ತದವರಂತೂ ಮೊಸಳೆಯ ಶವದ ಮೇಲೆ ವಿಶಿಷ್ಟ ಗೋರಿ ಗೋಪುರಗಳನ್ನು ಕಟ್ಟುತ್ತಿದ್ದರಂತೆ.

ಕರಾಚಿಯಲ್ಲಿ ಮೊಸಳೆಗಾಗಿಯೆ ಒಂದು ಜಲಾಶಯವಿದೆ. ಅಲ್ಲಿ ವಾಸ್ತವ್ಯ ಮಾಡಿದ ಮೊಸಳೆಗಳಿಗೆ ಧಾರ್ಮಿಕ ರೀತ್ಯಾ ಆಹಾರಾದಿಗಳನ್ನು ಕೊಡುತ್ತಾರೆ. ಹೀಗೆ ಜನರ ಕೈಯಿಂದ ಆಹಾರವನ್ನು ಸ್ವೀಕರಿಸಲು, ಮೊಸಳೆಗಳು ತಾವಾಗಿ ಹತ್ತಿರ ಬಂದು ಹೋಗುವಷ್ಟು ಅವು ಸಲಿಗೆಯನ್ನು ಪಡೆದಿರುತ್ತವೆ.

ಮೊನ್ನೆ ಮೊನ್ನೆ ಸ್ವಾತಂತ್ರ್ಯವನ್ನು ಹೊಂದಿದ ಬೆಲ್ಜಿಯನ್ ಕಾಂಗೋದಲ್ಲಿಯ ಮೊಸಳೆಗಳು ಎಲ್ಲಕ್ಕಿಂತ ಹೆಚ್ಚು ಸುದೈವಿಗಳೆನ್ನಬೇಕು. ಅಲ್ಲಿ, ಹುಣ್ಣಿಮೆಯ ದಿನ ಹುಟ್ಟಿದ ಶಿಶುಗಳನ್ನು ಒಂದು ವರ್ಷ ಬೆಳೆಸಿ ಅದೇ ಪೂರ್ಣಿಮೆಯ ದಿನ, ಮೊಸಳೆಗಳಿಗೆ ಬಲಿ ಕೊಡುತ್ತಾರೆ. ಆ ದಿನ ಊರಿಗೆಲ್ಲ ಮೇಜವಾನಿ. ದಂಡೆಯ ಮೇಲೆ ಸಾಲಾಗಿ ಮಲಗಿಸಿ, ಹಾಡು, ಕುಣಿತಗಳಲ್ಲಿ ಜನ ಮಗ್ನರಾಗು



ತ್ತಾರೆ. ಅಲ್ಲಿಂದ ರಾತ್ರಿ, ಅವರೆಲ್ಲ ಎದ್ದು ತಮ್ಮ ಮನೆಗೆ ಹೋದರೆಂದರೆ ಮೊಸಳೆಗಳು ಹಿಂಡು ಹಿಂಡಾಗಿ ಬಂದು ಆ ಮಕ್ಕಳನ್ನು ತಿಂದುಹಾಕು ತ್ತವೆ. ತಮ್ಮ ಮಕ್ಕಳು ಕೈಬಿಟ್ಟವೆಂದು ತಂದೆ ತಾಯಿಗಳಿಗೆ ದುಃಖವೆನಿಸುವುದೇ ಇಲ್ಲ, ಒಂದು ಹಬ್ಬದಂತೆ - ಈ ಸಮಾರಂಭವನ್ನು ಆಚರಿಸುತ್ತಾ ರೆಂದರೆ ಆಶ್ಚರ್ಯದ ಮಾತೇ ಸರಿ. ಈಚೆಗೆ ಇದರ ವೈಭವ ಕಡಿಮೆಯಾಗಿದ್ದು, ಶಿಶುಗಳ ಬದಲು ದನಗಳನ್ನು ಮೊಸಳೆಗಳಿಗೆ ಬಲಿ ಕೊಡುವು- ದುಂಟಂತೆ. ಆಫ್ರಿಕೆಯಲ್ಲಿ ಇನ್ನೊಂದು ಕಡೆ ಮೊಸಳೆಗಳಿಗೆ ಹಂದಿಯನ್ನು ಬಲಿ ಕೊಡುವ ಪದ್ಧತಿಯುಂಟು. ಹಂದಿ ಒಂದೇ ಇರುವುದ ರಿಂದ ಮೊಸಳೆಗಳು ತಮ್ಮಲ್ಲಿಯೆ ಕಚ್ಚಾಡುತ್ತವೆ. ಅದರಿಂದ ಒಂದಾದರೂ ಮೊಸಳೆ ಸಾಯುತ್ತದೆ. ಆ ಸತ್ತ ಮೊಸಳೆಯ ಚರ್ಮವನ್ನು ಗುಡಿಯಲ್ಲಿಟ್ಟು, ಅದರ ಮಾಂಸವನ್ನು ಮಕ್ಕಳ ಬಾಯಿಗೆ ಹಚ್ಚು ತ್ತಾರೆ. ಮೊಸಳೆಯ ಮಾಂಸದ ರುಚಿಯನ್ನು ನೋಡಿದ ಮಕ್ಕಳು ಗಟ್ಟಿಗರೂ ದೀರ್ಘಾಯುಷಿ ಗಳೂ ಆಗುವರೆಂದು ಅವರ ಕಲ್ಪನೆ.

ಮೊಸಳೆಯು ನೀರಿನಲ್ಲಿ ಇರುವ ಪ್ರಾಣಿ. ಆದರೆ ಅದು ನೆಲದ ಮೇಲೂ ಅಷ್ಟೇ ಸಲೀಲ ವಾಗಿ ಜೀವಿಸಬಲ್ಲದು. ಮನುಷ್ಯನಂತೆ ಅದಕ್ಕೆ ಆಕ್ಸಿಜನ್ ಬೇಕು. ಆದರೆ ಸ್ವಲ್ಪವೇ ಸಾಕು. ಅದಕ್ಕಾಗಿ ಮೊಸಳೆ ಅರ್ಧ ಮಿನಿಟಿನಷ್ಟು ಹೊತ್ತು ನೀರ ಮೇಲೆ ಬಂದು, ಉಸಿರಾಡಿಸಿ ತಿರುಗಿ ನೀರಲ್ಲಿ ಇಳಿದಿದ್ದಾದರೆ ತಾಸುಗಟ್ಟಲೆ ಉಳಿಯುತ್ತದೆ.

ಮೊಸಳೆಯು ಜಲಚರ ಪ್ರಾಣಿಯಾದರೂ ಅತಿ ಆಳವಾದ, ಸೆಳವುಳ್ಳ ನೀರಿನಲ್ಲಿ ಅದು ನೆಮ್ಮದಿಯಿಂದ ಬಾಳಲಾರದು. ಅಂತೆಯೇ ಸಮುದ್ರದ ನೀರು ಅದಕ್ಕೆ ವರ್ಜ್ಯ. ಅದರಂತೆ ಚಳಿಗಾಲವೆಂದರೆಯೂ ಮೊಸಳೆಗೆ ಹಿಡಿಸದು. ಈ ವಿಷಯದಲ್ಲಿ ಅದು ಹಾವಿನ ಸ್ವಭಾವವುಳ್ಳದ್ದು. ಚಳಿಗಾಲದಲ್ಲಿ ಅದರ ಶಕ್ತಿಯೆಲ್ಲ ಹೀರಿದಂತಾಗಿ ನೀರೊಳಗಿನ ತನ್ನ ಆಶ್ರಯ ಸ್ಥಾನದಲ್ಲಿ ಮುದುಡಿ ಕೊಂಡು ಹೇಗೋ ಕಳೆಯುತ್ತದೆ. ಬೇಸರಿಕೆ ಬಂದಾಗ, ಪ್ರಖರವಾದ ಬಿಸಿಲು ಬಿದ್ದಾಗ ಮಾತ್ರ ವೈಕಾಯಿಸಿಕೊಳ್ಳಲು ದಂಡೆಗೆ ಬರ ಬಹುದು.

ಬೇಸಿಗೆ ಬಂತೆಂದರೆ, ದಂಡೆಯ ಮೇಲೆ, ಮನುಷ್ಯರಿಲ್ಲದಾಗ ಸಂಚರಿಸುವುದು. ಇಲ್ಲವೆ ದಂಡೆಯ ಹಸಿಯುಸುಕಿನ ಮೇಲೆ, ಕಪ್ಪೆ ನುಂಗಿದ ಹಾವಿನಂತೆ, ಸುಮ್ಮನೆ ಬಿದ್ದು ಕೊಂಡಿರುತ್ತದೆ.

ಮೊಸಳೆಯ ಆಹಾರ ಏನು ಎನ್ನುವುದಕ್ಕಿಂತ ಅದು ಯಾವುದನ್ನು ತಿನ್ನುವುದಿಲ್ಲ ಎಂದು ಕೇಳ ಬೇಕಾದೀತು. ಆದರೆ ಮನುಷ್ಯನನ್ನು ತಿನ್ನುವ ಮೊಸಳೆಯೆ ಬೇರೆ, ಮೀನು ಮುಂತಾದವು ಗಳನ್ನು ತಿನ್ನುವವೇ ಬೇರೆ ಎಂದು ಸ್ಥೂಲವಾಗಿ ಹೇಳಬಹುದು. ಮೀನನ್ನೂ ಇತರ ಪ್ರಾಣಿ ಗಳನ್ನೂ ತಿನ್ನುವ ಮೊಸಳೆಗಳಿಂದ ಮನುಷ್ಯನಿಗೆ ಏನೂ ಅಪಾಯವಿಲ್ಲ. ಆದರೆ ಒಮ್ಮೆ ಮನುಷ್ಯನ ಮಾಂಸದ ರುಚಿ ಹತ್ತಿತೆಂದರೆ, ಅದರಂಥ ದುಷ್ಟ ಪ್ರಾಣಿ ಇನ್ನಾವುದೂ ಅಲ್ಲ. ಅಲ್ಲಿಯ ವರೆಗೆ ಅದು ಮನುಷ್ಯನಿಗೆ ಹೆದರುವುದೆಂದರೂ ಸಲ್ಲು ವುದು. ಮನುಷ್ಯನನ್ನು ನೀರಿನಲ್ಲಿ ಹಿಡಿದೆಳೆದು, ಆ ಶವದ ಕೊಳೆತ ಮಾಂಸದ ರುಚಿ ನೋಡಿದ ಮೇಲೆ, ಮನುಷ್ಯನ ಯೋಗ್ಯತೆ ಇಷ್ಟೇ, ಮತ್ತು ಆ ಮಾಂಸ ಬಲು ರುಚಿ ಎಂದು ಅದಕ್ಕೆ ಗೊತ್ತಾ ಗುತ್ತದೆ. ಅಲ್ಲಿಂದ ಅದರ ಕಣ್ಣೆಲ್ಲ ದಂಡೆಯ ಮೇಲೆ ಸುತ್ತಾಡುವ, ಸ್ನಾನಕ್ಕೆಂದು ನೀರಿಗೆ ಇಳಿಯುವ ಜನರ ಮೇಲೆಯೆ ಇರುತ್ತದೆ. ನೂರಾರು ಜನ ದಂಡೆಯ ಮೇಲೆ ನಿಂತಾಗ, ಅವರಿಗೆ ತಾನು ಕಾಣಿಸಿಕೊಂಡರೆ ಅವರು ಹೊಡೆದು ಕೊಲ್ಲುವರೆಂಬ ಪರಿವೆ ಅದಕ್ಕಿ ರುವುದಿಲ್ಲ. ಬದಲಾಗಿ ಇವರಿಷ್ಟು ಜನರಲ್ಲಿ ಯಾರು ನೀರಿಗೆ ಇಳಿದಾರು, ಯಾರು ತನಗೆ ದಕ್ಕುವರು ಎಂದು ಕಣ್ಣೆತ್ತಿ, ಜೊಲ್ಲು ಸುರಿಸುತ್ತ

ಅದು ಕಾಯುತ್ತಿರುತ್ತದೆ! ದೊಡ್ಡದೊಂದು ಮೊಸಳೆಯು ಮನುಷ್ಯನನ್ನು ಕಣ್ಣೆತ್ತಿ ಕೂಡ ನೋಡದೆ, ಹೆದರಿ ದೂರ ದೂರ ಇರುವಾಗ, ನರಮಾಂಸದ ರುಚಿ ಹತ್ತಿದ ಚಿಕ್ಕ ಮೊಸಳೆಯ ನಡತೆ ಅದಕ್ಕೆ ತದ್ವಿರುದ್ಧ.

ಮೊಸಳೆಯು ಜಾಣತನಕ್ಕೆ ಹೆಸರಾದ ಪ್ರಾಣಿ ಎಂದಿಗೂ ಅಲ್ಲ ಮಂಗವೊಂದನ್ನು ತನ್ನ ಬೆನ್ನ ಮೇಲೆ ಕೂಡ್ರಿಸಿಕೊಂಡು, "ಆ ದಂಡೆಗೆ ಕರೆದೊಯುತ್ತೇನೆ ಬಾ" ಎಂದು ಹೇಳುವಷ್ಟು ಜಾಣವಾದುದು ಎಂದೆನಿಸಬಹುದು. ಆದರೆ ನಡುಹೊಳೆಗೆ ಬಂದ ಮೇಲೆ, ಮಂಗನ ಹೃದಯ ಭಾಗದ ಮಾಂಸವನ್ನು ಬಯಸಿದಾಗ, "ಮೊದಲೇ ಹೇಳಬಾರದಿತ್ತೆ? ನನ್ನ ಹೃದಯವನ್ನು ಮೊದಲಿನ ದಂಡೆಯ ಮೇಲಿನ ಮಾವಿನ ಮರದಲ್ಲಿ ಬಿಟ್ಟು ಬಂದೆ" ಎಂಬ ಮಂಗನ ಉತ್ತರವನ್ನು ನಂಬುವಷ್ಟು ಶತಮೂರ್ಖ ಪ್ರಾಣಿ ಎಂದರೆ ಮೊಸಳೆಯೇ ಸರಿ. ಪಂಚತಂತ್ರದಲ್ಲಿ ಉಕ್ತವಾದ ಈ ಕಥೆ ಮೊಸಳೆಯ ಸ್ವಭಾವ ಪರಿಚಯವನ್ನು ಚೆನ್ನಾಗಿ ಮಾಡಿಕೊಡುತ್ತದೆ.

ಮೊಸಳೆ ತನ್ನ ಮಡ್ಡತನದಲ್ಲಿ, ತನ್ನ ಕೈಗಟ್ಟಿದ ರುಚಿಕಟ್ಟಾದ ನರ ಮಾಂಸಕ್ಕೆ ತಾನಾಗಿ ಎರವಾದ ಒಂದು ವಾಸ್ತವ ಪ್ರಸಂಗವನ್ನು ಮೋತಿಲಾಲ ಘೋಷರು ಹೇಳಿದ್ದಾರೆ. ಒಮ್ಮೆ ಬಡ ಬಂಗಾಲಿ ಬ್ರಾಹ್ಮಣನೊಬ್ಬ, ಕಾರ್ತಿಕಮಾಸದ ಕೆಟ್ಟ ತಂಡಿಯಲ್ಲಿ ಕಟಕಟನೆ ನಡುಗುತ್ತ ಸ್ನಾನ ಮುಗಿಸಿ, ಸೂರ್ಯದೇವನನ್ನು ಪ್ರಾರ್ಥಿಸುತ್ತಿರುವಾಗ ನಕ್ರದೇವನು ಪ್ರಸನ್ನನಾದನು. ಮೊಸಳೆಯು ಅವನ ಕಾಲನ್ನು ಹಿಡಿದು ನೀರೊಳಗೆ ಎಳೆಯುತ್ತಿತ್ತು. ಪಾಪ, ಆ ಬ್ರಾಹ್ಮಣನು ತನ್ನ ಇತಿಶ್ರೀಯಾಯಿತೆಂದು ಭಾವಿಸಿ ಕಂಗೆಟ್ಟಾಗ, ಈ ಮೊಸಳೆ ದೂರದಲ್ಲಿ ಬರುವ ಇನ್ನೊಂದು ಮೊಸಳೆಯನ್ನು ಕಂಡಿತು. ತನ್ನ ಬೇಟೆಗೆ ಅದು ಅಡ್ಡಬರುವುದೆಂಬ ಕಾರಣದಿಂದ, ಆ ಬ್ರಾಹ್ಮಣನ ಕಾಲನ್ನು ಬಿಟ್ಟುಕೊಟ್ಟು, ಇನ್ನೊಂದು ಮೊಸಳೆಯನ್ನು ಎದುರಿಸಲು ಅದು ಸಿದ್ಧವಾಯಿತು. ಮೊಸಳೆಯ ದವಡೆಯ ಹಿಡಿತ ತಪ್ಪಿದ ಕೂಡಲೇ ಆ ವ್ಯಕ್ತಿ ಪಾರಾದನೆಂದು ಹೇಳಲು ಕಾರಣವಿಲ್ಲ. ನೀರಲ್ಲಿ ಮೊಸಳೆಗೇ ಜಯವೆಂದಾದರೆ, ಭೂಮಿಯ ಮೇಲೆ ಅದರ ಆಟ ಅಷ್ಟೊಂದು ನಡೆಯುವುದಿಲ್ಲ. ಭೂಮಿಯ ಮೇಲೆ ಮನುಷ್ಯನೇ ಬಡಿಗೆಯನ್ನೆತ್ತಿ ಅದರ ಬೆನ್ನು ಹತ್ತಬಹುದು. ಆದರೆ ಅದು ಕೈಗೆ ಸಿಕ್ಕುವುದೆಂಬ ಭರವಸೆ ಇಲ್ಲ. ಅಷ್ಟು ವೇಗ ಅದಕ್ಕಿರುತ್ತದೆ. ಒಂದು ವೇಳೆ ಮನುಷ್ಯ ಹತ್ತಿರ ಹೋದದ್ದಾದರೆ, ಅದು ತನ್ನ ಹಿಂಭಾಗವನ್ನು ತಿರುಗಿಸಿ ಹೊಡೆಯಿತೆಂದರೆ ಮನುಷ್ಯ ನಿಂತಲ್ಲಿಯೆ ಕುಪ್ಪಳಿಸಿ ಬೀಳುವಷ್ಟು ಅದರ ರಭಸವಿರುತ್ತದೆ.

ನೀರಲ್ಲಿ ಮೊಸಳೆಗೇ ಜಯ ಕಟ್ಟಿದ್ದಾದರೂ ನೀರಿನ ಮೇಲಿನ ಡೋಣಿಯಲ್ಲಿರುವವರಿಗೆ ಮೊಸಳೆ ಏನೂ ಮಾಡಲಾರದು. ಮೊಸಳೆಯು ದೊಡ್ಡದಿದ್ದರೆ ಅದು ದೋಣಿಯ ಬುಡದಲ್ಲಿ ನೆಗೆದು ನಿಂತು ಅದನ್ನು ಹೊಯ್ದಾಡಿಸಬಹುದು.

ಮೊಸಳೆಯ ಒಂದು ಸ್ವಭಾವ ವೈಶಿಷ್ಟ್ಯವೆಂದರೆ ಯಾರಾದರೂ ಅದಕ್ಕೆ ಬಲಿಬಿದ್ದನಂತರ, ಅದು ಆ ಸ್ಥಳವನ್ನು ಬಿಟ್ಟು ಕೂಡಲೆ ಅನ್ಯತ್ರ ಹೊರಟು ಹೋಗುವುದಿಲ್ಲ. ಅಲ್ಲಿಯೇ ಇರುತ್ತದೆ. ಖೂನಿಯನ್ನು ಮಾಡಿದ ವ್ಯಕ್ತಿಯು ತಾನು ಕೊಲೆಗೈದ ಸ್ಥಳದಲ್ಲೇ ಸುತ್ತಾಡುತ್ತಿರುತ್ತಾನೆ ಎಂಬ ಪೋಲೀಸ್ ಶಾಸ್ತ್ರದ ಮಾತು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ.

ನೀರಲ್ಲಿರುವಾಗ ಮೊಸಳೆಯಿಂದ ಪಾರಾಗುವುದಕ್ಕೆ ನಮ್ಮ ದೇಶದಲ್ಲಿ ಹಲವಾರು ಹಳೆಯ ಪದ್ಧತಿಗಳುಂಟು. ಅವುಗಳಲ್ಲಿ ಬಿದಿರಿನ ಗಳಗಳನ್ನು ನೀರಲ್ಲಿ ಸುತ್ತಲೂ ಹುಗಿದು, ಕಟ್ಟೆ ಮರೆಯನ್ನು ಮಾಡಿಕೊಳ್ಳಬಹುದು. ಆಗ ನಿಶ್ಚಿಂತೆಯಿಂದ ಸ್ನಾನಾದಿ ಕಾರ್ಯಗಳನ್ನು ಮುಗಿಸಬಹುದು. ಆದರೆ ಇದರಿಂದ ಯಾವಾಗಲೂ

ಪಾರು ಬೀಳಬಹುದೆಂಬ ಖಾತ್ರಿ ಇಲ್ಲ. ಈ ಬಿದಿರಿನ ಮರೆಯ ಭಾಗವು ದಂಡೆಯಲ್ಲಿ ಬಾಯಿ ಬಿಟ್ಟಿರುತ್ತದಷ್ಟೇ. ಯಾರೂ ಇಲ್ಲದಾಗ ಮೊಸಳೆಯು ಮೆಲ್ಲಗೆ ಬಂದು ಅವಿತು ಕೂತುಕೊಳ್ಳುವುದು. ಅಷ್ಟು ಜಾಣತನ ಅದರಲ್ಲಿ ಕಂಡುಬಂದರೂ ಮುಂದೆ ಸ್ನಾನಕ್ಕೆಂದು ಬಂದ ಮನುಷ್ಯ ಪ್ರಾಣಿಯನ್ನು ಹಿಡಿದಾಗ, ತನಗೆ ಅಲ್ಲಿಂದ ಪಾರಾಗಿ ಹೋಗುವುದಕ್ಕೆ ಮಾರ್ಗವಿಲ್ಲ ಎಂಬಷ್ಟು ಬುದ್ಧಿ ಮಾತ್ರ ಅದಕ್ಕಿರುವುದಿಲ್ಲ! ಆಗ ಅದು ಸಿಕ್ಕಿ ಬೀಳುವುದುಂಟು. ಇನ್ನು ಅದರ ಹಲ್ಲುಗಳು ತೀಕ್ಷ್ಣವಾಗಿರುತ್ತವಷ್ಟೆ. ಅದರಿಂದ, ಗಳಗಳನ್ನು ಮುರಿದು ತನ್ನ ಮಟ್ಟಿಗೆ ದಾರಿ ಮಾಡಿಕೊಳ್ಳಬಹುದಾದರೂ ಆಗ ಅದರ ಬೇಟೆಯು ಪಾರಾಗಿ ಹೋಗದಿರದು.

ಈಸು ಬರುವ ಮನುಷ್ಯನೂ ನೀರಲ್ಲಿ ಮೊಸಳೆಯ ಕೈಯಿಂದ ಪಾರಾಗಬಲ್ಲನು. ಮೊಸಳೆಯು ತನ್ನ ಮೂಗಿನ ಹೊರಳೆಗಳನ್ನು ಮೇಲೆ ಮಾಡಿಕೊಂಡು ಸಾಗಿದ್ದಾಗ ಅದರ ಪರಿಚಯವಿದ್ದ ವ್ಯಕ್ತಿ ಗುರುತಿಸಬಹುದು. ಆಗ ಅವನು ತನ್ನ-ಷ್ಟಕ್ಕೆ ಈಸುತ್ತ ಇದ್ದರೆ ಮೊಸಳೆಯ ಕೈಗೆ, ಅಲ್ಲ, ದವಡೆಗೆ ಬೀಡುವ ಸಂಭವ ಕಡಿಮೆ. ಏಕೆಂದರೆ ಮೊಸಳೆ ನಿರ್ದಿಷ್ಟ ಜಾಗಕ್ಕಷ್ಟೆ ಗುರಿ ಇಟ್ಟು ಹೊರಡುತ್ತದೆ. ಅದು ಎಷ್ಟೇ ವೇಗದಿಂದ ಹೊರಟರೂ ಆ ಸ್ಥಳದಲ್ಲಿ ಆ ಕ್ಷಣಕ್ಕೆ ಅದರ ಬೇಟೆ ಇಲ್ಲಿರದಿದ್ದರೆ ಆಯಿತು, ಆಗ ಮೊಸಳೆಯು ತನ್ನ ಮುಖವನ್ನೆತ್ತಿ ಪುನಃ ಗುರಿ ಇಟ್ಟು ಹೊರಡುತ್ತದೆ. ಈಸುತ್ತ ಇರುವ ವ್ಯಕ್ತಿ ಮತ್ತೆ ಮುಂದೆ ಹೋಗಿರುತ್ತಾನೆ. ಅಂತೂ ಅವನು ಪಾರಾಗಬಲ್ಲ. ಈ ವಿಷಯದಲ್ಲಿ ನೆಲದ ಮೇಲಿನ ಕಾಡುಹಂದಿಯೂ ನೀರಲ್ಲಿರುವ ಮೊಸಳೆಯೂ ಒಂದೇ ಜಾತಿಯವು. ಇಂಥ ಪ್ರಸಂಗಗಳಲ್ಲಿ ಇರುವ ಹೆದರಿಕೆ ಏನೆಂದರೆ, ಆ ವ್ಯಕ್ತಿಯು ಅಯ್ಯೋ, ಮೊಸಳೆಯ ಕೈಯಲ್ಲಿ ಸಿಕ್ಕಿಬೀಳುವೆನಲ್ಲ ಎಂಬ ಭಯದಿಂದ ಕೈಕಾಲು ಗೆಡಬಾರದು. ಇನ್ನೊಂದೆಂದರೆ ದಂಡೆಯ ಮೇಲೆ ಸಾಕಷ್ಟು ಜನರು ಇಲ್ಲದೆಯೆ ಎಂದೂ ದಂಡೆಗೆ ಬರಲು ಧಾವಿಸಬಾರದು. ಮೊಸಳೆಯು ಆ ವ್ಯಕ್ತಿಯ ಮೇಲೆ ತನ್ನ ಗುರಿ ಇಡುತ್ತ ಸಾಗಿರುವಾಗ, ಅವನು ಒಂದೇ ಮಿನಿಟು ನೀರಲ್ಲಿ ಕಾಲೂರಿದನೆಂದರೆ ಅವನ ಆಯುಷ್ಯ ಮುಗಿಯಿತು ಒಂದು ಮಿನಿಟಿನಷ್ಟು ಅವಧಿಯಲ್ಲಿಯೆ ಅದು ಇದ್ದಲ್ಲಿಂದ ಧಾವಿಸಿ ಬಂದು ಗಪ್ಪನೆ ಅವನ ಕಾಲನ್ನು ಖಂಡಿತ ಹಿಡಿಯುತ್ತದೆ!

ನೀರಲ್ಲಿ ಮೊಸಳೆಯನ್ನು ಚೆನ್ನಾಗಿ ಎದುರಿಸಿ 'ಟಕ್ಕರ್' ಕೊಡುವ ಪ್ರಾಣಿಗಳೆಂದರೆ ಎಮ್ಮೆಕೋಣಗಳು. ಆನೆಗೂ ನೀಗದ ಕೆಲಸವನ್ನು ಅವು ಮಾಡಬಲ್ಲವು. ಆನೆಯನ್ನು ರಕ್ಷಿಸಲು ಭಗವಂತನು ಸಹಾಯಕ್ಕೆ ಬರಬೇಕಾಯಿತು. ಎಮ್ಮೆಗೆ ಅದರ ೪-೫ ಸಂಗಾತಿಗಳಿದ್ದರೆ ಸಾಕು. ಹಲವಾರು ಎಮ್ಮೆಗಳು ನೀರಲ್ಲಿ ಸಾಗಿರುವಾಗ ಯಾವ ಮೊಸಳೆಯೂ ಅವುಗಳ ಉಸಾಬರಿಗೆ ಹೋಗುವುದಿಲ್ಲ.

ಒಮ್ಮೆ ಬಂಗಾಲದಲ್ಲಿ ಕೆಲವು ಎಮ್ಮೆಗಳು ನದಿಯ ದಂಡೆಯ ಮೇಲಿನ ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದವು. ಆಗ ಅವುಗಳ ಸಣ್ಣ ಮಣಕವೊಂದು ನೀರಡಿಸಿ ನೀರಿಗಿಳಿದಾಗ ಮೊಸಳೆ ಅದರ ಕಾಲನ್ನು ಹಿಡಿದು ಎಳೆಯತೊಡಗಿತು. ಆ ಮಣಕದ ಆಕ್ರಂದನವನ್ನು ಕೇಳಿದ ಎಮ್ಮೆಗಳು ನೀರಿಗೆ ಧಾವಿಸಿದವು ಅಷ್ಟರಲ್ಲಿ ಮೊಸಳೆ ಬಹುದೂರ ಹೋಗಿ ಪಾರಾಯಿತು. ಮಣಕವನ್ನು ಕಳೆದುಕೊಂಡ ಎಮ್ಮೆಗಳು ಮರುದಿನ ಪಾಳತಿ ಇಟ್ಟು ಮೊಸಳೆಯನ್ನು ಕಂಡು, ನೀರಿಗಿಳಿದು ಅದನ್ನು ಸುತ್ತುವರಿದವು. ನಾಲ್ಕಾರು ತಾಸು, ಅದು ಹೋದಲ್ಲೆಲ್ಲ ಅಲೆದಾಡಿ, ಅದನ್ನು ದಂಡೆಗೆ ಬರುವಂತೆ ಮಾಡಿದವು. ಅದು ದಂಡೆಗೆ ಕಾಲಿಡುವ ಮುಂಚೆಯೆ ಎಮ್ಮೆಗಳೆಲ್ಲ ಮುಗಿಬಿದ್ದು ಅದನ್ನು ಕಚಪಚನೆ ತುಳಿದು ಕೊಂದವು!

ಇನ್ನು ಮೊಸಳೆ ಹಿಡಿಯಿತೆಂದರೆ, ಅದ

ರಿಂದ ಪಾರಾಗುವುದು ಅತಿ ಕಠಿನ. ಪಾರಾಗುವ ಪ್ರಯತ್ನಗಳಲ್ಲಿ ಒಂದೆಂದರೆ ಅದರ ಕಣ್ಣುಗಳನ್ನು ಮುಚ್ಚುವುದು ಇಲ್ಲವೆ ಗಾಯಗೊಳಿಸುವುದಾಗಿದೆ.

ಒಮ್ಮೆ ಒಬ್ಬ ಮೀನುಗಾರನು ಮೀನು ಹಿಡಿಯಲೆಂದು ನೀರಿಗೆ ಹೊರಟನು. ನೀರಲ್ಲಿ, ಆಗಾಗ ಕಾಣಿಸಿಕೊಳ್ಳುವ ಮೊಸಳೆಯೊಂದನ್ನು ಕಂಡು, ಅವನ ಅಣ್ಣನು "ತಮ್ಮಾ, ಅದಕ್ಕೆ ನರಮಾಂಸದ ರುಚಿ ಹತ್ತಿದಂತೆ ಕಾಣುತ್ತದೆ. ಹುಶಾರಿ" ಎಂದು ಎಚ್ಚರಿಸಿದನು. ಆದರೆ ತಮ್ಮನಿಗೆ ಹರೆಯದ ವಯಸ್ಸು. "ಹೋ ಅದೇನು ಮಾಡೀತು. ಒಂದು ವೇಳೆ ಅದು ಕಚ್ಚಿದರೂ ತಾನು ಪಾರಾಗಬಲ್ಲೆ" ಎಂದನು. ಅವತ್ತು ಅಲ್ಲದಿದ್ದರೂ ಅವನ ದುರ್ದೈವಕ್ಕೆ ಮೊಸಳೆಯು ಕೆಲ ದನದ ಮೇಲೆ ಅವನ ಕಾಲನ್ನು ಹಿಡಿಯಿತು.

ಮೊಸಳೆಯು ಹಿಡಿದಾಗ ಅವನು ಹೇಗೆ ಪಾರಾಗಬೇಕೆಂದು ಶಾಂತ ರೀತಿಯಿಂದ ವಿಚಾರ ಮಾಡಹತ್ತಿದನು. ಮತ್ತು ಅದರ ಕಣ್ಣಲ್ಲಿ ತಿವಿಯಬೇಕೆಂದು ತನ್ನ ಬೆರಳುಗಳನ್ನು ಮುಂದೆ ಚಾಚಹತ್ತಿದನು. ಆದರೆ ಅದಕ್ಕೆ ಯಶ ಸಿಗಲಿಲ್ಲ. ನೀರು ಅತ್ಯಂತ ಸ್ವಚ್ಛವಾಗಿದ್ದರಿಂದ ಅವನಿಗೆ ಅದರ ಕಣ್ಣುಗಳೇನೂ ಕಾಣಿಸುತ್ತಿದ್ದವು. ಆದರೆ ಮೊಸಳೆಯು ಅವನನ್ನು ಅತ್ಯಂತ ಬಲವಾಗಿ ನೀರಲ್ಲಿ ಎಳೆಯುತ್ತಿತ್ತು ಮತ್ತು ಅವನು ನೀರಿನ ಮೇಲ್ಗಡೆ ತನ್ನ ತಲೆಯನ್ನು ಇರಿಸಿಕೊಳ್ಳಬೇಕಾಗುತ್ತಿತ್ತು.

ಇತ್ತ ಅವನ ಕೂಗಾಟವನ್ನು ಕೇಳಿ ಅವನ ಅಣ್ಣನು ನೀರಿಗೆ ಇಳಿದು ತನ್ನ ತಮ್ಮನ ಕೈಹಿಡಿದು ದಂಡೆಯ ಕಡೆಗೆ ಎಳೆಯಹತ್ತಿದನು. ಅಷ್ಟರಲ್ಲಿ ೮–೧೦ ಜನರು ಬಂದು ಅವನನ್ನು ದಂಡೆಯ ಕಡೆ ಜಗ್ಗಿದರು. ಆಗ ಮೊಸಳೆಯ ಬಲ ಇಳಿತರವಾಯಿತು. ಮತ್ತು ಅದು ಅವನ ಕಾಲನ್ನು ಬಿಟ್ಟಿತು. ಆದರೆ ಆ ನರಮಾಂಸದ ರುಚಿಯ ಆಶೆಬುರುಕತನ ಎಲ್ಲಿ ಹೋಗಬೇಕು?

ದಂಡೆಗೆ ಹೋದರೆ ತನ್ನ ಅವಸಾನಕಾಲ ಸಮೀಪಿಸುವುದೆಂದು ತಿಳಿದೂ ಕೂಡ ಅದು ಅವನ ಮುಂಗೈಯನ್ನು ಹಿಡಿಯಿತು. ಈಗ ಜನರಿಗೆ ಬರ್ಚಿ, ಬಡಿಗೆ, ಕಲ್ಲು ಮುಂತಾದವುಗಳಿಂದ ಅದಕ್ಕೆ ಒಂದೇ ಸವನೇ ಏಟನ್ನು ಹಾಕಲು ಅನುವಾಯಿತು. ಹೀಗೆ ಮೊಸಳೆಯು ಅವನ ಮುಂಗೈಯನ್ನು ಬಿಟ್ಟು ಪಲಾಯನ ಹೇಳಿತು. ಮುಂದೆ ಆ ಮೀನುಗಾರನ ಗಾಯ ಗುಣವಾಗಲು ಆರು ತಿಂಗಳು ಹಿಡಿಯಿತು.

ನಮ್ಮ ದೇಶದಲ್ಲಿ, ದಕ್ಷಿಣಕ್ಕಿಂತ ಉತ್ತರದ ಸಮಪಾತಳಿಯ ನದಿಗಳಲ್ಲಿ ಮೊಸಳೆಗಳು ಹೆಚ್ಚಾಗಿ ಕಾಣಿಸುತ್ತವೆ. ಅವುಗಳ ಬೇಟೆಯಾಡುವವರು ಅಧಿಕೃತವಾಗಿ ಅಲ್ಲಲ್ಲಿ ಇರುತ್ತಾರೆ. ಕೋಲು ಬರ್ಚಿಗಳಿಂದಲೇ ಮೊಸಳೆಯ ಬೇಟೆಯಾಡುತ್ತಾರೆ. ನೀರಲ್ಲಿರುವ ಮೊಸಳೆಯನ್ನು ಅದು ಕಣ್ಣಿಗೆ ಬಿದ್ದಾಗ ಗುಂಡಿಕ್ಕಿ ಕೊಲ್ಲುವುದು ಸುಲಭ ಸಾಧ್ಯವೆಂದು ಕಂಡರೂ, ಅದು ಧೈರ್ಯ ಶೌರ್ಯದ ಮಾತಲ್ಲವೆಂದು ಮೇಲಣ ಪರಂಪರೆಯ ಬೇಟೆಗಾರರು ತಿಳಿಯುತ್ತಾರೆ. ಅದೇ ಮೊಸಳೆಯನ್ನು ಹುಡುಕಿಕೊಂಡು ಹೋಗಿ ಬೇಟೆಯಾಡುವುದು ಬಹು ದುಸ್ಸಾಹಸದ ಮಾತೇ ಸರಿ. ಅದಕ್ಕೆ ಧೈರ್ಯಬೇಕು. ಹತ್ತಾರು ಜನ ಇರಬೇಕು ತಾಸುಗಟ್ಟಲೆ, ಅದರ ಸ್ಥಳವನ್ನು ಹುಡುಕುತ್ತ, ರಾತ್ರಿಯಾಗಿತ್ತೆಂದರೆ ಪಂಜು ಹಚ್ಚಿಕೊಂಡು, ದೋಣಿಗಳಲ್ಲಿ ತಿರುಗುತ್ತ ಇರಬೇಕು. ಅದು ಕಂಡಿತೆಂದರೆ ಬರ್ಚಿ, ಕೋಲುಗಳಿಂದ ಹೊಡೆಯುತ್ತ ಇರಬೇಕು. ಗುರಿ ಒಮ್ಮೊಮ್ಮೆ ತಾಕುತ್ತದೆ, ಒಮ್ಮೊಮ್ಮೆ ಇಲ್ಲ. ತಾಕಿದ ಒಂದೇ ಹೊಡೆತಕ್ಕೆ ಮೊಸಳೆ ಸಾಯುವುದೆಂಬುದೂ ಇಲ್ಲ!

*



ಬಾಲ್ಯದ ಯಾವುದಾದರೊಂದು
ಘಟನೆ ಕೆಲವರಿಗೆ ಈ ಕ್ಲೇಶದಾಯಕ
ಗುಣವನ್ನುಂಟುಮಾಡುತ್ತದೆ. ಅದನ್ನು
ಹೇಗೆ ನೀಗಿಸಿಕೊಳ್ಳಬೇಕು ?

# ನಿಮ್ಮನ್ನು ನೀವು ದಂಡಿಸಿಕೊಳ್ಳುತ್ತೀರಾ ?

" ಸೈಕಾಲಜಿ " ಆಧಾರದಿಂದ

ಯಾವ ತಪ್ಪು ಸಂಭವಿಸಿದರೂ ಅದಕ್ಕೆ ನೀವೇ ಹೊಣೆ, ನೀವೇ ದೋಷಿ ಎಂದುಕೊಂಡು ನಿಮ್ಮನ್ನು ನೀವು ದಂಡಿಸಿಕೊಳ್ಳುತ್ತೀರೇನು ? ಇದು ಹೌದು ಎಂದರೂ ಗಾಬರಿಯಾಗುವ ಕಾರಣವೇನೂ ಇಲ್ಲ. ಅದೊಂದು ಸ್ವಾಭಾವಿಕವಾದ ಪ್ರತಿಕ್ರಿಯೆ— ಆದರೆ ಇದು ಅತಿಯಾದರೆ ಮಾತ್ರ ವಿವಂಚನೆಗೆ ಪ್ರಸಂಗವಿದೆ. ಅಂಥವರು ಜಗತ್ತಿನ ಅತ್ಯಂತ ಅಕಾರಣ ದುಃಖಿಗಳಾಗಿರುತ್ತಾರೆ.

ಕೆಲವೊಂದು ಸಂದರ್ಭಗಳಲ್ಲಿ ನಮಗೇ ದೋಷ ಕೊಟ್ಟುಕೊಳ್ಳುವುದು, ಅಪರಾಧದ ಭಾವ ಮನದಲ್ಲಿ ತಲೆದೋರುವುದು, ಉಪಕಾರವನ್ನೇ ಮಾಡುತ್ತದೆ. ನಮಗೆ ನಾವೇ ಕೇಡು ಬಗೆದುಕೊಳ್ಳುವುದರಿಂದ ಅಥವಾ ಪುನಃಪುನಃ ಮಾಡಿದ ತಪ್ಪನ್ನೇ ಮಾಡುವುದರಿಂದ ಅದು ನಮ್ಮನ್ನು ಉಳಿಸುತ್ತದೆ. ಸಾಮಾನ್ಯ ಮನುಷ್ಯನಿಗೂ ಅಪರಾಧಿಗೂ ಇರುವ ವ್ಯತ್ಯಾಸವೆಂದರೆ ಅಪರಾಧಿ ಮನುಷ್ಯನಲ್ಲಿ ತಾನು ಅಪರಾಧ ಮಾಡಿದ ಭಾವನೆಯೆ ಇರುವುದಿಲ್ಲ. ಇದ್ದರೂ ಅವನ ದೃಷ್ಟಿಯಲ್ಲಿ ಅಪರಾಧ ಶಬ್ದದ ವ್ಯಾಖ್ಯೆ ಬಹು ವ್ಯಾಪಕವಾಗಿರುತ್ತದೆ.

ಗೃಹಿಣಿಯೊಬ್ಬಳು ಕೈತಪ್ಪಿ ಒಂದು ಪಾತ್ರೆಯನ್ನೊಡೆದಾಗ ತನ್ನನ್ನು ದೂಷಿಸಿಕೊಳ್ಳುವುದು ಸ್ವಾಭಾವಿಕ. ಮೂರು ಮೂರು ಸಲ ತಪ್ಪು ನಂಬರಿಗೆ ಫೋನ್ ಮಾಡಿ ಬೆಪ್ಪಾದ ಮನುಷ್ಯ ತನ್ನನ್ನು ಮೂರ್ಖನೆಂದುಕೊಂಡರೆ ಅದೂ ಅಷ್ಟೇ ಸ್ವಾಭಾವಿಕವಾದದ್ದು. ಆದರೆ ಯಾವನಾದರೊಬ್ಬ ಹೀಗೇ ತನ್ನನ್ನೇ ಆರೋಪಿಯನ್ನಾಗಿ ಮಾಡಿಕೊಳ್ಳುವ ಚಟವನ್ನಂಟಿಸಿಕೊಂಡರೆ ಆಗ ಕಷ್ಟಕ್ಕಿಟ್ಟುಕೊಳ್ಳುತ್ತದೆ. ಸ್ವೇಚ್ಛಾನುಸಂಧಾನಕ್ಕಿಂತ, ಇಡೀ ಜಗತ್ತೇ ತನ್ನ ವಿರುದ್ಧವಿದೆ ಎಂದುಕೊಳ್ಳುವುದಕ್ಕಿಂತ ಇದು ಭೀಕರ ಪರಿಣಾಮ ಮಾಡಬಹುದು. ಇಂಥವನಿಗೆ ತನ್ನಲ್ಲಿ ಯಾವ ಗುಣವೂ ಕಾಣುವುದಿಲ್ಲ. ತನ್ನ ಕಡ್ಡಿಯಂಥ ತಪ್ಪು ಗುಡ್ಡವಾಗಿ ಕಾಣುತ್ತದೆ. ಅವನು ಹೋರಾಡದೆಯೆ ಶರಣಾಗತನಾಗುವ ಸೈನಿಕನಂತಿರುತ್ತಾನೆ.

ಈ ರೀತಿ ತಮಗೇ ದೋಷ ಕೊಟ್ಟುಕೊಳ್ಳುವವರಲ್ಲಿ ಮುಖ್ಯವಾಗಿ ಎರಡು ಗುಂಪುಗಳನ್ನು ಮಾಡಬಹುದು ; ತಮ್ಮದೇ ತಪ್ಪಾಯಿತೆಂದು ತಮ್ಮ ಮಟ್ಟಿಗೇ ಕೊರಗುವವರು ಒಂದು ಗುಂಪಾದರೆ, ಜಗತ್ತಿನಲ್ಲಿ ಸಂಭವಿಸುವ ಯಾವುದೇ ದುರ್ಘಟನೆಗೆ, ರಾಜಕೀಯವಿರಲಿ ಅಥವಾ ಧಾರ್ಮಿಕವಿರಲಿ, ತಾವೇ ಹೊಣೆಯೆಂದು ಪರಿತಪಿಸುವವರು ಇನ್ನೊಂದು ಗುಂಪು.

ಈ ಎರಡು ಗುಂಪುಗಳಲ್ಲಿಯೂ ತಮ್ಮ ತಲೆಗೇ ದೋಷ ಕಟ್ಟಿಕೊಳ್ಳುವುದು ಒಂದು ಚಟವಾಗಿರುವವರೂ ಪರಿಸ್ಥಿತಿಯ ಪ್ರಭಾವಕ್ಕೊಳಗಾಗಿ ತಾತ್ಕಾಲಿಕವಾಗಿ ದೋಷ ಅಂಟಿಸಿಕೊಳ್ಳುವವರೂ ಇದ್ದಾರೆ. ಈ ಎರಡು ಬಗೆಯವರಲ್ಲಿ ಮೊದಲನೆಯ ಜಾತಿಯವರೇ ಹೆಚ್ಚು ಉಪದ್ರವ

ಕಾರಿಗಳು.

ಆತ್ಮ ವಿಮರ್ಶೆ ಬೇರೆ, ಆತ್ಮನಿಂದೆ ಬೇರೆ. ಆತ್ಮ ವಿಮರ್ಶೆ ಸ್ಪಷ್ಟ ವಿಚಾರದ ದ್ಯೋತಕವಾಗಿದ್ದರೆ, ಆತ್ಮನಿಂದೆ ಭ್ರಾಂತಿಜನ್ಯವಾಗಿರುತ್ತದೆ. ಆತ್ಮಹತ್ಯೆ ಹೇಗೆ ಅಸ್ವಾಭಾವಿಕವೋ, ಆತ್ಮನಿಂದೆಯೂ ಅಸ್ವಾಭಾವಿಕ. ಆತ್ಮರಕ್ಷಣೆಯ ಪ್ರಯತ್ನ ಮಾನವಸಹಜವಾಗಿರುವಂತೆ ಸುಳ್ಳು ಆರೋಪಗಳಿಂದ— ಅದು ಪರರಿಂದ ಬರಲಿ, ನಿಮ್ಮಿಂದಲೇ ಬರಲಿ— ರಕ್ಷಿಸಿಕೊಳ್ಳುವುದು ಮಾನವ ಸಹಜ.

ಈ ಮುಂದಿನ ಪ್ರಶ್ನೆಗಳಲ್ಲಿ ಯಾವುದಕ್ಕೇ ಆಗಲಿ ಹೌದು ಎಂದು ನಿಮ್ಮ ಉತ್ತರವಿರುವುದಾದರೆ ನೀವು ಮೇಲೆ ಹೇಳಿರುವ ಅಂದರೆ ಎಲ್ಲವಕ್ಕೂ ದೋಷ ತಮ್ಮದೇ ಎಂದುಕೊಳ್ಳುವವರ ಸಾಲಿಗೆ ಸೇರಿದವರು, ಅಥವಾ ಸೇರಲಿರುವವರು ಎಂದರ್ಥ.

ನಿಮ್ಮ ಕೆಲಸ, ಕೌಟುಂಬಿಕ ಜೀವನ, ಸ್ನೇಹ ಸಂಪರ್ಕಗಳಲ್ಲಿ ಏನಾದರೂ ವಿಪರೀತ ಘಟಿಸಿದೊಡನೆ ಅದಕ್ಕೆ ನೀವೇ ಹೊಣೆ ಎಂದು ನೀವು ಹಿಂದು-ಮುಂದು ಯೋಚಿಸದೆ ಭಾವಿಸಿಕೊಳ್ಳುತ್ತೀರೇನು?

ಏನಾದರೊಂದು ತಪ್ಪು ನಿಮ್ಮಿಂದ ಜರುಗಿದಾಗ ೨೪ ತಾಸುಗಳಿಗಿಂತಲೂ ಹೆಚ್ಚು ಕಾಲ ನೀವದನ್ನೇ ಯೋಚಿಸುತ್ತ ಕೂಡ್ರುವಿರೇನು?

ಇನ್ನೊಬ್ಬರನ್ನು ಉಳಿಸಲು ಅವರ ದೋಷವನ್ನು ನಿಮ್ಮದೆಂದು ಸಾಧಿಸುವಿರೇನು?

ಏನಾದರೊಂದು ವಿಪರೀತ ಜರುಗಿದಾಗ "ನನ್ನ ಹಣೇಬರಹವೇ ಇಷ್ಟು. ನಾನು ಮೂರ್ಖ, ಕೈಲಾಗದವ" ಎಂದು ನಿಮ್ಮನ್ನು ಜರೆದುಕೊಳ್ಳುತ್ತೀರೇನು?

ನೀವು ನೀವಲ್ಲ, ಮತ್ತೆ ಯಾರೋ ಎಂಬಂತೆ ನಿಮ್ಮೊಡನೆ ನೀವು ನಡೆದುಕೊಳ್ಳುತ್ತೀರೇನು?

ವಾದಕ್ಕೆ ಎಡೆಕೊಡುವುದಕ್ಕಿಂತ ಅದಕ್ಕೆ ಕಾರಣವಾಗಬಹುದಾದಂಥ ಸಂಗತಿಯನ್ನು ಒಪ್ಪಿಕೊಂಡುಬಿಡುವ ಮಟ್ಟಿಗೆ ನೀವು ವಾದ-ವಿವಾದಗಳನ್ನು ದ್ವೇಷಿಸುತ್ತೀರೇನು?

ನೂರಾರು ಸಾಮಾನ್ಯರಲ್ಲಿ ನೀವೂ ಒಬ್ಬರು ಎಂದು ತಿಳಿಯುತ್ತೀರೇನು?

ನಿಮಗೆ ಬೇಕೆನಿಸಿದ ಯಾವುದೊಂದು ಸುಖದ ಸಾಧನವನ್ನು ಬೇಕೆಂದೇ ತ್ಯಜಿಸಿ ನಿಮ್ಮನ್ನು ದಂಡಿಸಿಕೊಳ್ಳುವುದರಲ್ಲಿ ನಿಮಗೆ ಸಮಾಧಾನವೆನಿಸುವುದೇ?

ನಿಮ್ಮ ಮಟ್ಟಿಗೆ ಅಸಹಿಷ್ಣುಗಳಾದ ನೀವು ಇನ್ನೊಬ್ಬರ ಮಾತು ಬಂದಾಗ ಸಹನಾಮೂರ್ತಿಗಳಾಗುತ್ತೀರೇನು?

ನಾನೊಬ್ಬ ಶತಮೂರ್ಖ, ಜನ ಯಾವಾಗಲೂ ನನ್ನನ್ನು ಉಪಹಾಸ ಮಾಡುತ್ತಾರೆ ಎಂದು ನಿಮಗನಿಸುವುದೇ?

ನೀವು ಕುರೂಪಿಗಳು ಎಂದು ನಿಮ್ಮ ಅಭಿಪ್ರಾಯವಿದೆಯೆ?

ಏಕಾಂತವಾಸ ನಿಮಗಿಷ್ಟವೆ?

ನಿಮ್ಮ ಪ್ರಾಮಾಣಿಕತನದಿಂದ ನಿಮಗೇ ನೋವೆನಿಸುವ ಮಟ್ಟಿಗೆ ನೀವು ಪ್ರಾಮಾಣಿಕರಾಗಿದ್ದೀರಾ?

ಸಣ್ಣ ಪುಟ್ಟ ಮಾತಿಗೂ ಕ್ಷಮೆ ಕೇಳುವ ಸ್ವಭಾವದವರೇನು ನೀವು?

ಇತರರು ಮಾಡುವುದಕ್ಕಿಂತ ನಿಮ್ಮ ಕೆಲಸದಲ್ಲಿ ನೀವು ಹೆಚ್ಚು ತಪ್ಪು ಮಾಡುತ್ತೀರೆಂದು ನಿಮ್ಮ ನಂಬಿಕೆಯಿದೆಯೆ?

ವಸ್ತುಗಳನ್ನು ಸಿಕ್ಕಲ್ಲಿ ಇಡುವ ಅಥವಾ ಅವನ್ನು ಕೆಡಿಸುವ, ಹೊತ್ತಿಗೆ ಸರಿಯಾಗಿ ಕೆಲಸ ಮಾಡದಿರುವ ಪ್ರವೃತ್ತಿ ನಿಮ್ಮದಾಗಿದೆಯೆ? ಮತ್ತು ಹಾಗಾದಾಗಲೆಲ್ಲ ನಿಮ್ಮನ್ನೇ ನೀವು ಬಯ್ದುಕೊಳ್ಳಲು ಆರಂಭಿಸುತ್ತೀರಾ?

ನನಗೆ ಸ್ವಂತದ ಅಭಿರುಚಿ ಇಲ್ಲ, ಯಾವಾಗಲೂ ಇತರರನ್ನೇ ನಕಲು ಮಾಡುವವ ನಾನು ಎಂದು ನಿಮಗನಿಸುವುದೆ?

ಖಂಡಿತವಾಗಿಯೂ ಅಸಫಲವಾಗುವುದೆಂದು

ಗೊತ್ತಿರುವಂಥ ಪ್ರೇಮಪಾಶದಲ್ಲಿ ಸಿಲುಕಿಕೊಂಡಿದ್ದೀರಾ?

ನಿಮ್ಮ ಜೀವನ ಬರೀ ಹೋರಾಟದ್ದು ಎಂದು ತಿಳಿದುಕೊಂಡು ನಿಮ್ಮ ಕೆಲಸದಿಂದ ನಿಮಗೆ ಸಿಗುವ ಸುಖಾದಿಗಳನ್ನು ಎಂದೂ ಯೋಚಿಸುವುದಿಲ್ಲವೆ?

ನಿಮ್ಮ ಸ್ನೇಹಿತರು ಮತ್ತು ಮಕ್ಕಳು ನಿಮಗೆ ನಿಷ್ಠರಾಗಿಲ್ಲವೆಂದು ನಿಮ್ಮ ತಿಳಿವಳಿಕೆಯಿದೆಯೆ?

ನಿಮ್ಮನ್ನು ನೀವೇ ದಂಡಿಸಿಕೊಳ್ಳಲು ಒದಗುವ ಹಲವು ಕಾರಣಗಳಲ್ಲಿ ಈ ಮೇಲಿನವು ಕೆಲವಾಗಿವೆ. ನೀವು ಈಗ ಇರುವುದಕ್ಕಿಂತ ಹೆಚ್ಚು ಸುಖಿಗಳಾಗಬೇಕಾದಲ್ಲಿ ಹೆಚ್ಚು ವ್ಯವಹಾರಿಕರಾಗಿರಬೇಕಾಗುವುದು. ಮೇಲಿನ ಪ್ರಶ್ನೆಗಳಿಗೆ ಉತ್ತರ ಕೊಟ್ಟುಕೊಂಡು ಆ ಮೇಲೆ ತದನುಸಾರವಾಗಿ ನಿಮ್ಮನ್ನು ತಿದ್ದಿಕೊಳ್ಳಲೆತ್ನಿಸಿರಿ.

ಆದರೆ ಮೇಲಿನ ಪ್ರಶ್ನೆಗಳಿಗೆ ಉತ್ತರ ಕೊಟ್ಟುಕೊಂಡು ಕೊರತೆಗಳನ್ನು ನಿವಾರಿಸಿಕೊಳ್ಳುವುದು ಚಿಕಿತ್ಸೆಯ ಒಂದು ಅಂಶ ಮಾತ್ರ. ನಿಮ್ಮನ್ನು ನೀವೇ ದಂಡಿಸಿಕೊಳ್ಳಲು ಎಂದು, ಯಾತಕ್ಕಾಗಿ ಆರಂಭಿಸಿದಿರಿ, ಎಂಬುದರ ಪತ್ತೆಹಚ್ಚುವುದು ಚಿಕಿತ್ಸೆಯ ಇನ್ನೊಂದು ಮುಖ್ಯ ಅಂಶವಾಗಿದೆ.

ನಾವೆಲ್ಲ ನಮ್ಮ ಜೀವನವನ್ನು "ಬಿಳಿ ಹಾಳೆ" ಯಿಂದಲೇ ಆರಂಭಿಸುತ್ತೇವೆ. ಆ ಮೇಲೆ ಪರಿಸ್ಥಿತಿ ನಮ್ಮ ಜೀವನದ ಹಾಳೆಯ ಮೇಲೆ ಬರೆಬರೆದು ನಮ್ಮನ್ನು ಬದಲಾಯಿಸುತ್ತದೆ. ದೈಹಿಕ ನ್ಯೂನತೆಗಳು ಕೂಡ ಇತರರೊಡನೆ ಮತ್ತು ನಮ್ಮೊಡನೆ ನಾವು ನಡೆದುಕೊಳ್ಳುವ ರೀತಿಯ ಮೇಲೆ ಪ್ರಭಾವ ಬೀರಬಲ್ಲವು. ಆದರೆ ಹೆಚ್ಚಾಗಿ ಬಾಲ್ಯದಲ್ಲಿ ನಡೆದ ಯಾವುದೊಂದು ಘಟನೆ ಅಥವಾ ಘಟನೆಗಳೇ ನಮ್ಮ ಈ ಬಗೆಯ ಸ್ವಭಾವಕ್ಕೆ ಕಾರಣವಾಗುವುದು.

ಮಿದುಳು ದೊಡ್ಡದೊಂದು ಉಗ್ರಾಣ. ಅಲ್ಲಿ ಸುಪ್ತ ಮನಸ್ಸಿನಲ್ಲಿ ಬಾಲ್ಯದಿಂದಲೂ ನಡೆದ ಪ್ರತಿಯೊಂದು ಘಟನೆಯೂ ಕೊರೆದಿಡಲ್ಪಡುವುದು. ನಾವು ನೆನಪು ಮಾಡಿಕೊಳ್ಳಲಾರದ ಘಟನೆಗಳು ಹಿನ್ನೆಲೆಯಲ್ಲಿದ್ದುಕೊಂಡು ನಮ್ಮ ನಡೆ-ನುಡಿ-ಭಾವನೆ-ನಿರ್ಣಯಾದಿಗಳ ಮೇಲೆ ಪ್ರಭಾವ ಬೀರುವವು.

ನಿಮ್ಮ ಬಾಲ್ಯದ ದಿನಗಳನ್ನು ನೆನಪಿಗೆ ತಂದುಕೊಳ್ಳಿ. ಯಾವುದೊಂದು ಘಟನೆ ನಿಮಗೆ ಅದಕ್ಕೂ ಹಿಂದಿನ ಕಾಲದ ನೆನಪನ್ನು ಮಾಡಿಕೊಳ್ಳಲು ಸಹಾಯಕವಾಗಬಹುದು. ನಾವಕಾಶವಾಗಿ, ಅವಸರ ಮಾಡದೆ ನೆನಪು ಮಾಡಿಕೊಳ್ಳುತ್ತ ಹೋದಿರಾದರೆ ನಿಮ್ಮ ಇಂದಿನ ಸ್ವಭಾವಕ್ಕೆ ಕಾರಣವಾದ ಸಂಗತಿ ನಿಮಗೆ ನೆನಪಿಗೆ ಬರಬಹುದು.

ಈ ಪ್ರಯತ್ನದಲ್ಲಿ ನಿಮಗೆ ಸಂಪರ್ಕ ಬಂದ ವ್ಯಕ್ತಿಗಳನ್ನು ನೆನೆಸಿಕೊಳ್ಳುವುದು ಪ್ರಯೋಜನವಾದೀತು. ಅದರಿಂದ ನಿಮಗೆ ಘಟನೆಗಳ ನೆನಪು ಹೆಚ್ಚು ಸುಲಭವಾಗಿ ಬರಬಹುದು. "ಎಲಾ ಇಂಥ ಸಣ್ಣ ಮಾತಿನಿಂದ ನಾನಿಷ್ಟು ತಪ್ಪು ಹಾದಿಗಿಳಿದೆನೆ" ಎಂದು ನಿಮಗೆ ಅನಿಸಿ ನೀವು ಹೆಚ್ಚು ಸುಖಿ ಜೀವನಕ್ಕೆ ಪಾಯ ಹಾಕಿಕೊಳ್ಳಲು ಸಾಧ್ಯವಾದೀತು.

ಬಹುಶಃ ನಿಮ್ಮನ್ನು ನೀವೇ ದಂಡಿಸಿಕೊಳ್ಳುವ ಚಟ ಬೀಳುವುದಕ್ಕೆ ನಿಮ್ಮನ್ನು ಹಣಿದು ಬಗ್ಗಿಸಿದ ಯಾವನಾದರೊಬ್ಬ ಮನುಷ್ಯ ಅಥವಾ ಘಟನೆ ಕಾರಣವಾಗಿರಬಹುದು. ನಿಮಗಿಂತಲೂ ಬಲಿಷ್ಠನಾದವನ ಎದುರು ಅಥವಾ ನಿಮ್ಮ ಶಕ್ತಿಗೆ ಮೀರಿದ ಘಟನೆಯ ಎದುರು ತಲೆಬಾಗಿಸಿ ಅದಕ್ಕೆ ತಪ್ಪುಗಾರ ನೀವೇ ಎಂದುಕೊಂಡಿರಬಹುದು. ಆಗ ನೀವು ಪ್ರತಿಭಟನೆ ಮಾಡಲಿಲ್ಲ. ಪ್ರತಿಭಟಿಸುವ ಶಕ್ತಿ ನಿಮ್ಮಲ್ಲಿಲ್ಲ ಎಂಬ ಭ್ರಮೆ ನಿಮ್ಮಲ್ಲಿ ಹೊಕ್ಕಿಕೊಂಡಿತು. ಆದರೆ ನಿಮ್ಮ ಸ್ವಾತಂತ್ರ್ಯವನ್ನು ಪ್ರಸ್ಥಾಪಿಸುವ ಹೋರಾಟ ನಡೆಸುವುದಕ್ಕೆ ಸಮಯ ಯಾವಾಗಲೂ ಮೀರಿಹೋಗಿರುವುದಿಲ್ಲ ಎಂಬುದು ನಿಮಗೆ ನೆನಪಿರಲಿ.

ಒನ್ನಿ, ಈಗ ನಿಮ್ಮ ಗತ ಜೀವನದಲ್ಲಿ ಹಣಿಕಿ ಕ್ಕೊಣ. ಜೀವನದಲ್ಲಿ ನಮಗೆ ಬರುವ ಮೊದಲ ಸಂಪರ್ಕ ತಂದೆ ತಾಯಿಗಳದು. ಆ ಸಂಪರ್ಕ ಕಾಲದಲ್ಲಿ ನಿಮಗೆ ನೆನಪಿಗೆ ಬರುವ ಮೊಟ್ಟ ಮೊದಲನೆ ಘಟನೆಯನ್ನು ಯೋಚಿಸಿ. ಅದು ಸುಖಕರವಾಗಿತ್ತೆ ? ಅಥವಾ ದುಃಖಕಾರಕ ವಾಗಿತ್ತೆ ? ನಿಮ್ಮ ತಂದೆ-ತಾಯಿ " ಥೂ, ಎಂಥ ದರಿದ್ರ ಹುಡುಗ ನೀನು ! ನಿನ್ನಿಂದ ಏನೂ ಆಗ ಲಕ್ಕಿಲ್ಲ ಶತಥಡ್ಡ ನೀನು !" ಎಂದು ಹೇಳಿದ್ದರೆ ? ನಿಮ್ಮ ಎದುರು ನಿಮ್ಮ ಅಣ್ಣ ಅಥವಾ ನೆರೆ ಮನೆಯ ಹುಡುಗ ಬುದ್ಧಿವಂತ ಎಂದು ಹೊಗಳಿ ನಿಮ್ಮನ್ನು ಜರೆದಿದ್ದರೆ ? ಹುಡುಗಾಟಿಕೆಯಲ್ಲಿ "ಛಿ ! ಎಂಥ ಮೂಗೇ ನಿನ್ನದು. ಗಿಳಿ ಮೂಗಿನ ನಿನ್ನನ್ನು ಯಾರು ಮಾಡಿಕೊಳ್ಳುತ್ತಾರೊ !" ಎಂದಿದ್ದರೆ ? ನೀವೇನಾದರೂ ಕಳೆದುಕೊಂಡಾಗ " ಅಲ್ಲಿ ಹೋಗಬಾರದಿತ್ತು, ಇಡಬಾರದಿತ್ತು, ಹಾಗೆ ಹೀಗೆ " ಎಂದು ನಿಮ್ಮನ್ನು ನಿಂದಿಸಿದ್ದರೆ ?

ಇಂಥ ಘಟನೆಗಳು ಕಾಲಕ್ರಮೇಣ ಮರೆತು ಹೋದರೂ ಇವೇ ಮುಂದೆ ನಿಮ್ಮಲ್ಲಿ ನಿಮ್ಮನ್ನು ನೀವು ದಂಡಿಸಿಕೊಂಡು ವ್ಯಥೆಪಟ್ಟು ಸುಗ್ಗಾಗುವ ಚಟವನ್ನು ಅಂಟಿಸುತ್ತವೆ. ಹೀಗಾದ ಮೇಲೆ ಮುಂದೆ ಮನುಷ್ಯ ತನ್ನನ್ನೆ ದ್ವೇಷಿಸತೊಡಗು ತ್ತಾನೆ. ಈ ದ್ವೇಷ ಎಷ್ಟು ತೀವ್ರವಾಗಬಹು ದೆಂದರೆ ಆ ಭರದಲ್ಲಿ ಮನುಷ್ಯ ಆತ್ಮಹತ್ಯೆಗೂ ಉದ್ಯುಕ್ತನಾಗಬಹುದು.

ಇಲ್ಲಿ ಇಂಥ ಚಟ ಹೋಗಲಾಡಿಸಿಕೊಳ್ಳಲು ಅಥವಾ ಅದನ್ನು ಆದಷ್ಟು ಕಡಿಮೆ ಮಾಡಿ ಕೊಳ್ಳಲು ಬರುವಂಥ ಕೆಲ ಉಪಾಯಗಳನ್ನು ಸೂಚಿಸಿದೆ.

ನಿಮ್ಮ ಗತ ಜೀವನವನ್ನು ನೆನಪು ಮಾಡಿ ಕೊಂಡು ನಿಮ್ಮ ಈ ಅವಸ್ಥೆಗೆ ಕಾರಣವಾದ ಮೊಟ್ಟ ಮೊದಲನೆಯ ಕಾರಣವನ್ನು ಹುಡುಕಿರಿ. ಹೆಚ್ಚಿನ ಸಂದರ್ಭಗಳಲ್ಲಿ ಆ ಕಾರಣ ತೀರ ಕ್ಷುಲ್ಲಕವಾಗಿತ್ತೆಂದೂ ನಿಮ್ಮ ಈಗಿನ ಜೀವನದಲ್ಲಿ ಅದರ ಮಹತ್ವ ಏನೇನೂ ಇಲ್ಲವೆಂದೂ ನಿಮಗೆ ಮನವರಿಕೆಯಾಗುವುದು ಸಾಧ್ಯವಿದೆ.

ನಿಮಗೆ ಬೆಂಬಲ-ಸಹಾಯ ಸಿಕ್ಕೀತೆಂಬ ನಂಬಿಗೆ ಇದ್ದರೆ ಮಾತ್ರ ನಿಮ್ಮನ್ನು ನೀವೇ ದಂಡಿಸಿಕೊಳ್ಳುವಂಥ ಸಂದರ್ಭವನ್ನು ಒದಗಿ ಸಿದ ವಿಷಯವನ್ನು ನಿಮ್ಮ ಹೆಂಡತಿ, ಸ್ನೇಹಿತರು ಮುಂತಾದವರೊಡನೆ ಚರ್ಚಿಸಿರಿ.

ಮೊಟ್ಟಮೊದಲು ನಿಮ್ಮನ್ನು ಸಮತೋಲ ತಪ್ಪಿಸಿದಾತ ಯಾವ ಉದ್ದೇಶದಿಂದ ( ಹೊಟ್ಟೆ ಕಿಚ್ಚು, ದ್ವೇಷ, ನಿರಾಶೆ ಇತ್ಯಾದಿ ) ಹಾಗೆ ಮಾಡಿದ ಎಂದು ಕಂಡುಹಿಡಿಯಿರಿ.

ನಿಮ್ಮಲ್ಲಿ ಇಂಥ ಸ್ವಭಾವ ಮೂಡಲು ಕಾರಣ ರಾದವರಿಂದ ದೂರವಿದ್ದರೆ ಈ ಚಟದಿಂದ ಮುಕ್ತರಾಗುವುದು ತುಂಬ ಸುಲಭ ಎಂದು ತಿಳಿದಿರಲಿ.

ನಿಮ್ಮ ಕೆಲಸದಲ್ಲಿ ಪ್ರಗತಿ ಹೊಂದುತ್ತಿಲ್ಲ ವೆಂಬುದಕ್ಕಾಗಿ ನೀವು ನಿಮ್ಮನ್ನು ಪೀಡಿಸಿಕೊಳ್ಳು ತ್ತಿದ್ದರೆ ಅದಕ್ಕೆ ಮೂರು ಉಪಾಯಗಳಿವೆ :

(೧) ನೀವು ಅಸಮರ್ಥರಿದ್ದೀರಿ, ಆದರೆ ನಿಮಗೆ ಈಗಿನ ಕೆಲಸ ಸೇರಿಕೆಯಾಗುತ್ತದೆ ಎಂದಿ ದ್ದರೆ ನಿಮ್ಮ ಯೋಗ್ಯತೆಯನ್ನು ಹೆಚ್ಚಿಸಿಕೊ ಳ್ಳಲು ಮನಸಾ ಪ್ರಯತ್ನಿಸಿರಿ. (೨) ನೀವು ಸಮರ್ಥರಿದ್ದೀರಿ, ಆದರೆ ಅಸೂಯೆಯಿಂದ ನಿಮ್ಮ ಮೇಲಿನವರು ಅಥವಾ ಸುತ್ತಲಿನವರು ಆತಂಕ ಒಡ್ಡುತ್ತಿದ್ದಾರೆ ಎಂದಾದರೆ ಬೇರೆ ಕಡೆಗೆ ಇಂಥದೇ ಕೆಲಸ ಹಿಡಿಯಿರಿ. (೩) ಸದ್ಯದ ಕೆಲಸ ನಿಮಗೆ ಹೇಳಿದ್ದಲ್ಲ ಎಂದಾದರೆ ನಿಮಗೆ ಸೇರುವಂಥ ಬೇರೆ ಕೆಲಸ ಹಿಡಿಯಿರಿ.

ಬೇರೆ ಕೆಲಸ ಹಿಡಿದರೆ ಸಮಾಜದಲ್ಲಿ ಕೀಳೆ ನಿಸಿಕೊಂಡೇನು ಎಂಬ ಭ್ರಮೆ ಹಚ್ಚಿಕೊಳ್ಳ ಬೇಡಿ. ಕಾರಕೂನರ ಕೆಲಸ ಬಿಟ್ಟು ಬೇರೆ ಉದ್ಯೋಗ ಮಾಡಿದರೆ ಮರ್ಯಾದೆ ಹೋದೀತು ಎಂಬ ಭ್ರಮೆಯಲ್ಲಿ ಸಿಲುಕಿಕೊಂಡು ಅನೇಕರು ಅನ್ಯಾಯವಾಗಿ ಕಷ್ಟಜೀವನವನ್ನು ನಡೆಸುತ್ತಾರೆ.

ನಿಮ್ಮನ್ನು ನೀವೇ ದಂಡಿಸಿಕೊಳ್ಳುವಂಥ ಸಂದರ್ಭ ಬಂದಾಗಲೆಲ್ಲ "ಇಷ್ಟೆಲ್ಲ ಯೋಜನೆ ಮಾಡುವಷ್ಟು ಮಹತ್ವದ ವಿಷಯವೇ ಇದು ?" ಎಂದು ಪ್ರಶ್ನೆ ಹಾಕಿಕೊಳ್ಳಿ.

ತಪ್ಪು ಮಾಡಿದಾಗ ಅದನ್ನೆ ಕುರಿತು ಯೋಚಿಸುವ ಬದಲು ಅದನ್ನು ತಿದ್ದಿಕೊಳ್ಳುವ ಪ್ರಯತ್ನಕ್ಕಾರಂಭಿಸಿ. ತಪ್ಪು ತಿದ್ದಲು ಬಾರದಂತಿದ್ದರೆ "ಆದದ್ದಾಯಿತು" ಎಂದು ಅದರ ವಿಚಾರವನ್ನೆ ಬಿಟ್ಟುಬಿಡಿರಿ.

ಇತರರೊಡನೆ ವ್ಯವಹರಿಸುವಾಗ ಎರಡು ದೋಣಿಯ ಮೇಲೆ ಕಾಲಿಟ್ಟವರಂತೆ ಇರಬೇಡಿರಿ. ಸ್ಪಷ್ಟವಾಗಿ ಮಾತಾಡುವುದರಿಂದ ನಿಮ್ಮಲ್ಲಿ ಆತ್ಮವಿಶ್ವಾಸ ಬಲವಾಗುವುದು.

ನಿಮ್ಮ ಬಗ್ಗೆ ಕನಿಕರಪಟ್ಟುಕೊಳ್ಳಬೇಡಿ. ಜಗತ್ತು ನಿಮಗೆ ವಿರುದ್ಧವಾಗಿರದೆ, ನೀವೇ ನಿಮಗೆ ಆತಂಕವಾಗಿರುತ್ತೀರಿ.

ಸ್ವಂತ ಮತ್ತು ಪರ ಎರಡೂ ವಿಚಾರಗಳಲ್ಲಿ ವ್ಯಾವಹಾರಿಕ ದೃಷ್ಟಿಯಿರಲಿ.

ನಿಮ್ಮನ್ನು ನೀವು ದಂಡಿಸಿಕೊಳ್ಳುತ್ತಿರುವುದರಿಂದ ನೀವು ಮಹಾ ಸಾತ್ವಿಕರು, ಸದ್ಗುಣಿಗಳು ಎಂದು ಭ್ರಮೆಗೊಳಗಾಗಬೇಡಿ. ಮಹಾಪುರುಷರಲ್ಲಿ ವಿನಯಾದಿಗಳು ನಿಮ್ಮದರಂತೆ ಕೃತಕವಾಗಿರುವುದಿಲ್ಲ. ಅವು ಅವರ ಆತ್ಮಬಲದ ಪ್ರತೀಕವಾಗಿರುತ್ತವೆ, ಆತ್ಮದೌರ್ಬಲ್ಯದ್ದಲ್ಲ.

ಹುಟ್ಟಿಬರುವ ನಮ್ಮೆಲ್ಲರಲ್ಲೂ ಕೊರತೆ ದೋಷಗಳಿದ್ದೇ ಇರುತ್ತವೆ. ಆದರೆ ಅವುಗಳ ಪರಿಮಾರ್ಜನೆಗಾಗಿ ಏನಾದರೊಂದು ಒಳ್ಳೆಯ ಗುಣವೂ ನಮ್ಮೆಲ್ಲರಲ್ಲೂ ಇರುತ್ತದೆ. ಇತರರಲ್ಲಿ ತೋರುವ ಕ್ರೌರ್ಯ ಎಷ್ಟು ಕೆಟ್ಟದ್ದೋ ಅಷ್ಟೆ ನಮ್ಮಲ್ಲಿ ನಾವು ತೋರಿಕೊಳ್ಳುವ ಕ್ರೌರ್ಯವೂ ಕೆಟ್ಟದ್ದಾಗಿದೆ.

---

ವಿವಾಹನೀತಿಯು ವೈವಿಧ್ಯ
ಆಶ್ಚರ್ಯಕರವಾಗಿದೆ

# ಎಂಥೆಂಥಾ ಮದುವೆಗಳು!

ಎ. ಪಿ. ದೇಶಪಾಂಡೆ

ಬೇರೆ ಬೇರೆ ದೇಶಗಳಲ್ಲಿ ಗಂಡು ಹೆಣ್ಣಿನ ಜೋಡಣೆಯ ಸಂಬಂಧದಲ್ಲಿ ವಿಧವಿಧವಾದ ವಿಚಾರಗಳು ಕಂಡುಬರುತ್ತವೆ. ನಮ್ಮ ನಾಡಿನಲ್ಲಿಯೇ ಕೆಲ ಪಂಗಡದವರು ಅಣ್ಣನ ಮಕ್ಕ-ಳನ್ನು ಲಗ್ನವಾಡಿಕೊಳ್ಳುತ್ತಾರೆ. ಆದರೆ ಬಹುಶಃ ಅಣ್ಣನ ಮಕ್ಕಳನ್ನು ತಮ್ಮ, ಅಣ್ಣ ಅಥವಾ ಅಕ್ಕಂದಿರ ಸಮವಾಗಿ ಕಾಣುವುದೇ ಹೆಚ್ಚು. ಇದೇ ರೀತಿ ಅಕ್ಕನ ಮಗಳನ್ನು ಕೆಲವರು ಲಗ್ನ ಮಾಡಿಕೊಳ್ಳುವರು. ಆದರೆ ಕೆಲವರು ಮಾಡಿಕೊಳ್ಳುವುದಿಲ್ಲ. ನಾವು ಬೇರೆ ಬೇರೆ ದೇಶದ ಹಿಂದಿನ ಹಾಗೂ ಈಗಿನ ಜನರಲ್ಲಿ ಮದುವೆಯ ಸಂಬಂಧವಾಗಿ ನೋಡಲಾಗಿ ಕುತೂಹಲಕಾರಿ ಸಂಗತಿಗಳು ಕಂಡುಬರುತ್ತವೆ.

ಇಜಿಪ್ತಿನಲ್ಲಿ ಕೆಲವು ಕಾಲ ಹಿಂದಿನವರೆಗೂ ಅಣ್ಣ-ತಂಗಿಯರ ವಿವಾಹವು ಪೂರ್ಣ ಪ್ರಚಲಿತವಿತ್ತು. ಪ್ರಚಲಿತವಿದ್ದಿತಷ್ಟೇ ಅಲ್ಲ, ಅದು ಪರಂ-ಪರಾಗತವಾಗಿ ಬಂದ ರೂಢಿಯಾಗಿತ್ತು. ಮದುವೆಗೆ ಯೋಗ್ಯರಾದ ಅಣ್ಣ-ತಂಗಿಯರಿದ್ದರೆ ಅವರು ಇಚ್ಛಿಸದಿದ್ದರೂ ಮದುವೆ ಮಾಡಿಕೊಳ್ಳಲು ಒತ್ತಾಯಪಡಿಸಲಾಗುತ್ತಿತ್ತು. ಅವರ ಪ್ರೇಮ ಗೀತಗಳಲ್ಲಿ ಬರುವ 'ಭ್ರಾತೃ-ಭಗಿನಿ' ಎಂಬ ಶಬ್ದಗಳೆಲ್ಲ 'ಪ್ರಿಯ-ಪ್ರೇಯಸಿ' ಎಂಬ ಅರ್ಥಕೊಡುತ್ತವೆ. ಅರಸು ಮನೆತನದವರಲ್ಲಿಯೂ ಕೂಡ ರಾಜರಕ್ತ ಪರಂಪರಾಗತವಾಗಿ ಉಳಿಯಬೇಕಾದರೆ 'ಅಣ್ಣ-ತಂಗಿ'ಯರ ವಿವಾಹ ಅವಶ್ಯವೆಂದು ಗಣಿಸಿದ್ದರಿಂದ ರಾಜಕುವರರಲ್ಲಿಯೂ ಇಂಥವೇ ವಿವಾಹಗಳು ನಡೆಯುತ್ತಿದ್ದವು.

ನೀಲಗಿರಿಯ "ತೊದವ" ಜನರಲ್ಲಿ, ಒಬ್ಬಳು ಯಾವನನ್ನಾದರೂ ಲಗ್ನವಾದರೆ ಅವಳು ತನ್ನ ಗಂಡನ ಎಲ್ಲ ತಮ್ಮಂದಿರಿಗೂ ಹೆಂಡತಿಯಾಗುತ್ತಾಳೆ. ಅಷ್ಟೇ ಅಲ್ಲ, ಮುಂದೆ ಹುಟ್ಟಿದ ತಮ್ಮನು ಕೂಡ ಪ್ರಾಪ್ತವಯಸ್ಕನಾದಾಗ ತನ್ನ ಅಣ್ಣಂ-ದಿರ ಹಕ್ಕಿನಲ್ಲಿ ಪಾಲುಗೊಳ್ಳುತ್ತಾನೆ. ಬೇರೆ ಬೇರೆ ಕುಟುಂಬದ ಯುವಕರು ಕೂಡಿಕೊಂಡು ಒಬ್ಬಳನ್ನು ಲಗ್ನವಾದಾಗ ಮಾತ್ರ ಅವರ ತಮ್ಮಂದಿರಿಗೆ ಅವಳ ಮೇಲೆ ಯಾವ ಹಕ್ಕೂ ಇಲ್ಲ. ಎರಡನೆಯ ತಮ್ಮನು ಮದುವೆಯಾದರೆ ಅವನಿಗಿಂತ ಸಣ್ಣವರಿಗೆ ಹೆಂಡತಿಯ ಮೇಲೆ ಹಕ್ಕು ಬಂದರೂ ಹಿರಿಯವನಿಗೆ ಯಾವ ಅಧಿಕಾರವೂ ಬರಲಾರದು. ಹೆಂಡತಿ ಬಸುರಿಯಾದಾಗ ಯಾವನಲ್ಲಿ 'ಧನುರ್ಬಾಣ ಕೊಡುವ' ಸಮಾರಂಭ ಮಾಡುವ ಸಾಮರ್ಥ್ಯವಿದೆಯೋ ಅವನು ಸಮಾರಂಭ ಮಾಡುತ್ತಾನೆ. ಆಮೇಲೆ ಮುಂದೆ ಹುಟ್ಟುವ ಮಗು ಅವನದಾಗುತ್ತದೆ. ಇಲ್ಲದಿದ್ದರೆ ಮೊದಲು ಹುಟ್ಟುವ

ಮಗು ಮೊದಲನೆಯವನಿಗೂ ಆ ಮೇಲೆ ಮುಂದೆ ಹುಟ್ಟುವ ಮಕ್ಕಳು ಮುಂದಿನವರಿಗೂ ಬರುವ ಸಂಪ್ರದಾಯವಿದೆ. ಮುಂದೆ ಗಂಡಂದಿರು ಬೇರ್ಪಟ್ಟಾಗ ಅವರವರ ಪಾಲಿಗೆ ಬಂದ ಮಕ್ಕಳನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗುತ್ತಾರೆ. ಉಪಪತಿಯನ್ನು ಇಟ್ಟುಕೊಳ್ಳಲು ಯಾವಳಿಗೂ ನಿಷೇಧವಿಲ್ಲ. ಹೀಗಿರುವಾಗ ಅವರ ಭಾಷೆಯಲ್ಲಿ 'ಸೂಳೆ' ಎಂಬ ಶಬ್ದವೇ ಇರದಿದ್ದುದು ಆಶ್ಚರ್ಯವೇನಲ್ಲ.

ಪಶ್ಚಿಮ ಟಿಬೇಟಿನಲ್ಲಿ ಕೂಡ ಇದೇ ತೆರನಾದ ಸಂಪ್ರದಾಯ ಕಂಡು ಬಂದರೂ ಅದು ಕೇವಲ ಬಡವರಲ್ಲಿ ಮಾತ್ರ ಇರುವುದು. ಟಿಬೇಟಿನಲ್ಲಿ ಕನ್ಯಾಶುಲ್ಕ ಮಿತಿಮೀರಿ ಇದ್ದ ಕಾರಣ ಇಬ್ಬರು ಅಥವಾ ಮೂವರು ಕೂಡಿ ಕನ್ಯಾಶುಲ್ಕವನ್ನು ಕೊಡುವರು. ಅವಳು ಅವರೆಲ್ಲರಿಗೂ ಹೆಂಡತಿಯಾಗುತ್ತಾಳೆ. ಎಲ್ಲ ಅಣ್ಣತಮ್ಮಂದಿರಿಗೂ ಒಬ್ಬಳೇ ಹೆಂಡತಿ ಇರುವುದೂ ಉಂಟು. ಅದರಲ್ಲಿ ಯಾವನಾದರೊಬ್ಬನು ಬೇರೆಯವಳನ್ನು ಲಗ್ನವಾದರೂ ಮೊದಲಿನವಳ ಮೇಲಿನ ಹಕ್ಕು ಹೋಗುವುದಿಲ್ಲ. ಮಗ ಸತ್ತರೆ ಅವನ ಹೆಂಡತಿ ಅವನ ತಂದೆಯ ಸ್ವಾಧೀನವಾಗುತ್ತಾಳೆ.

ಲಡಖ ಪ್ರಾಂತದಲ್ಲಿ ಒಂದು ಕುತೂಹಲಕಾರಿಯಾದ ಮದುವೆಯ ಸಂಪ್ರದಾಯ ಕಂಡು ಬರುತ್ತದೆ. ಅಲ್ಲಿ ಒಂದು ಕುಟುಂಬದಲ್ಲಿ ಎಲ್ಲ ಮಕ್ಕಳ ಲಗ್ನವೂ ಒಂದೇ ವೇಳೆಗೆ ಬೇರೊಂದು ಒಂದೇ ಕುಟುಂಬದ ಎಲ್ಲ ಮಕ್ಕಳೊಂದಿಗೆ ಆಗಬೇಕೆಂದಿದೆ. ಒಂದು ಕುಟುಂಬದಲ್ಲಿ ಮೂರು ಜನ ಕನ್ಯೆಯರೂ ಇನ್ನೊಂದರಲ್ಲಿ ಒಬ್ಬನೇ ವರನೂ ಇದ್ದರೆ ಅವನು ಮೂರೂ ಜನ

ರನ್ನು ಮದುವೆಯಾಗಬೇಕು. ಇದರ ವಿರುದ್ಧ ವಾಗಿ ಮೂರು ಜನ ಅಣ್ಣತಮ್ಮಂದಿರು ಒಬ್ಬಳು ಕನ್ಯೆಯನ್ನೂ ಆಗಬಹುದಾಗಿದೆ. ಆದರೆ ಎರಡೂ ಕುಟುಂಬಗಳಲ್ಲಿಯೂ ಮೂರು ಜನ ಕನ್ಯೆಯರು ಹಾಗೂ ಮೂರು ಜನ ವರರು ಇದ್ದರೆ ಅವರಲ್ಲಿ ಒಬ್ಬ ಕನ್ಯೆಗೆ ಒಬ್ಬ ವರನೊಡನೆ ಮದುವೆಯಾಗದೇ ಮೂರೂ ಜನ ಕನ್ಯೆಯರಿಗೆ ಮೂರೂ ಜನ ವರರೊಂದಿಗೆ ವಿವಾಹವಾಗಿ ಅದಕ್ಕೆ ಸಮೂಹ ವಿವಾಹದ ರೂಪ ಬರುತ್ತದೆ.

ಐರ್ಲಂಡ್ ಹಾಗೂ ಸ್ಕಾಟ್‌ಲಂಡಿನ ಕೆಲವು ಜನಾಂಗಗಳಲ್ಲಿ ವಿವಾಹ ಪ್ರಯೋಗ (trial marriage) ವು ನಡೆಯುತ್ತದೆ. ವಯಸ್ಕರಾದ ಹುಡುಗ ಹಾಗೂ ಹುಡುಗಿಯರು ಕೆಲವು ತಿಂಗಳುಗಳ ವರೆಗೆ ಕೂಡಿ ಇರುತ್ತಾರೆ. ಈ ಮಿಲನವು ಮಗುವಿನಲ್ಲಿ ಪರಿಣಾಮಗೊಂಡರೆ ಮಾತ್ರ ಲಗ್ನವಾಗುತ್ತಾರೆ.

ನಿಗ್ರೋ ಜನರ ಒಂದು ಪಂಗಡದಲ್ಲಿ ಕೆಲವು ಸಲ ಗೆಳೆಯರು ತಮ್ಮ ಹೆಂಡಂದಿರನ್ನು ಕೆಲವು ವೇಳೆಯ ವರೆಗೆ ಅದಲುಬದಲು ಮಾಡಿಕೊಳ್ಳುತ್ತಾರೆ. "ಒಂದೇ ತೆರನಾದ ಅಡಿಗೆ ದಿನವೂ ರುಚಿಸದು" ಎಂದು. ಇದೇ ಬಗೆಯಾಗಿ ಆಚರಿಸುವ ಎಸ್ಕಿಮೋಗಳಲ್ಲಿ ತಮ್ಮ ಅನುಕೂಲಕ್ಕಾಗಿ ಹೀಗೆ ಮಾಡುತ್ತಾರೆ: ಸಣ್ಣ ಮಗುವಿದ್ದ ತಾಯಿಯನ್ನು ಬಹು ದೂರ ಪ್ರವಾಸ ಮಾಡಬೇಕಾದ ಎಸ್ಕಿಮೋಗೆ ಕರೆದುಕೊಂಡು ಹೋಗುವುದಾಗುವುದಿಲ್ಲ. ಆಗ ಒಬ್ಬ ಗೆಳೆಯನೊಂದಿಗೆ ಹೆಂಡತಿಯನ್ನು ಅದಲು-ಬದಲು ಮಾಡಿಕೊಳ್ಳುತ್ತಾನೆ. ತನ್ನ ಪ್ರವಾಸ ಮುಗಿಸಿ ಬಂದ ನಂತರ ತನ್ನ ಗೆಳೆಯನ ಹೆಂಡತಿಯನ್ನು ತಿರುಗಿಕೊಟ್ಟು ತನ್ನ ಪತ್ನಿಯನ್ನು ತಿರುಗಿ ಪಡೆಯುತ್ತಾನೆ. ✶



## ಇಂದಿನ ದಿನ ಸುದಿನ

ಮೊನ್ನೆ ೧೦೨ ವರ್ಷ ತುಂಬಿದವನೊಬ್ಬನನ್ನು ಕಂಡೆ. ಆತ ಆರೋಗ ದೃಢ ಕಾಯುದವನಂತೆ ಕಾಣುತ್ತಿದ್ದ. ಕಣ್ಣಲ್ಲಿ ಮಿನುಗೊಂದು ಇತ್ತು. ಆತ ಹೀಗಿರಲು ಕಾರಣವೇನೆಂದು ಕೇಳಿದೆ. ಉತ್ತರವಾಗಿ ಯಾವಾಗಲೂ ದೀರ್ಘಾಯುಷಿಗಳು ಹೇಳುವ ಹಾಗೆ, "ನಾನು ಯಾವಾಗಲೂ ಕಂಠಪೂರ್ಣ ಹೆಂಡ ಕುಡಿಯುತ್ತೇನೆ" ಎಂದಾಗಲಿ, "ನಾನು ಜೀವನದಲ್ಲಿ ಒಂದು ಹನಿ ಮದ್ಯವನ್ನು ಮುಟ್ಟಿಲ್ಲ" ಎಂದಾಗಲಿ, "ನಾನು ನಿತ್ಯ ವ್ಯಾಯಾಮ ಮಾಡುತ್ತೇನೆ" ಎಂದಾಗಲಿ ಆತ ಹೇಳಲಿಲ್ಲ.

ಆತ ಹೇಳಿದ: "ದಿನಾ ಬೆಳಗ್ಗೆ ಎದ್ದಕೂಡಲೆ ನಾನು ಕಿಡಿಕಿಯ ಕಡೆ ಹೋಗುತ್ತೇನೆ. ಆ ಮೇಲೆ ಹೊರಗೆ ಬಿಸಿಲಿರಲಿ ಮಳೆಯಿರಲಿ ಮಂಜಿರಲಿ ನನ್ನಷ್ಟಕ್ಕೇ 'ಆಹಾ ಎಂಥ ಬೆಳಗು! ಇದೇ ನನಗೆ ಬೇಕಾಗಿದ್ದ ಬೆಳಗು' ಎಂದುಕೊಳ್ಳುತ್ತೇನೆ."

—ತತ್ವಜ್ಞಾನಿ



ಪರಮಾಣು ಶಕ್ತಿಯು ಸುವರ್ಣಯುಗ ಬರಲಿದೆ;
ಆದರೆ ಅದು ಹೊಸ ಸಮಸ್ಯೆಯನ್ನು ತಂದಿದೆ

# ಪರಮಾಣು ಬೂದಿಯನ್ನೇನು ಮಾಡೋಣ?

ಎಂ. ವಿ. ನಾಗರಾಜ

ಪರಮಾಣುವಿನ ಗರ್ಭದಲ್ಲಿ ಹುದುಗಿರುವ ಶಕ್ತಿಯನ್ನು ಬಿಡುಗಡೆ ಮಾಡಲು ಕಲಿತ ಮನುಷ್ಯ ಈ ಶಕ್ತಿಯನ್ನು ಮಾನವ ಕುಲದ ಉಪಯೋಗಕ್ಕೆ ತಂದು ಸುಖ - ಸಮೃದ್ಧಿಯ ಒಂದು ಹೊಸ ಯುಗವನ್ನು ತೆರೆಯುವ ಕನಸಿನಲ್ಲಿ ಮಗ್ನನಾಗಿದ್ದಾನೆ. ಆದರೆ ವಿಜ್ಞಾನಿಗಳು ಪರಮಾಣು ಯುಗದ ನವೋದಯದ ಬೃಹತ್ ಸಮಸ್ಯೆಯೊಂದನ್ನು ಪರಿಹರಿಸಲು ಹೋರಾಡುತ್ತಿರುವ ಸಂಗತಿ ಮಾತ್ರ ಬಹು ಕಡಿಮೆ ಜನರಿಗೆ ತಿಳಿದಿದೆ. ಪರಮಾಣುಶಕ್ತಿ ಉತ್ಪಾದನೆಯಲ್ಲಿ ಯಂತ್ರಗಳಿಂದ ಹೊರಬೀಳುವ ಪ್ರಾಣನಾಶಕ ನಿಷ್ಪ್ರಯೋಜಕ ವಸ್ತುಗಳನ್ನು ಸುರಕ್ಷಿತವಾಗಿ ಹೇಗೆ ರವಾನಿಸಬೇಕೆಂಬುದೇ ಆ ಮಹಾಸಮಸ್ಯೆಯಾಗಿದೆ ಬೃಹತ್ ಪ್ರಮಾಣದ ಪರಮಾಣುಶಕ್ತಿಯನ್ನು ನಿರ್ಮಿಸುವಾಗ ಪರಮಾಣು "ರಿಯಾಕ್ಟರು"ಗಳಲ್ಲಿ ಉತ್ಪತ್ತಿಯಾಗುವ ಈ "ಬೂದಿ"ಯು ಮಾನವನಿಗೆ ಪ್ರಾಣಾಂತಕವಾದ, ಕೈಗಾರಿಕೆಗೆ ನಿಷ್ಪ್ರಯೋಜಕವಾದ ವಸ್ತುವಾಗಿದೆ.

ಅಮೇರಿಕದ ಸಂಯುಕ್ತ ಸಂಸ್ಥಾನದ ಪರಮಾಣು ಸಮಿತಿಯ ಶಸ್ತ್ರ ಕಾರಖಾನೆಯಲ್ಲಿ ಉತ್ಪತ್ತಿಯಾಗುವ ಲಕ್ಷಾಂತರ ಗ್ಯಾಲನ್ ಪರಮಾಣು "ಗೊಬ್ಬರ"ವನ್ನು ಅಧಿಕ ವೆಚ್ಚದಿಂದ ನಿರ್ಮೂಲಗೊಳಿಸಬೇಕಾಗಿರುವುದು ಅವರಿಗೆ ಆಗಲೆ ತಲೆನೋವನ್ನುಂಟುಮಾಡಿದೆ ಪರಮಾಣು ಶಕ್ತಿ ಸಮಿತಿಯವರು ಈ ಬೂದಿಯನ್ನು ನಿರ್ಜನವಾದ ಸುರಕ್ಷಿತ ಸ್ಥಳಗಳಲ್ಲಿ ಅತ್ಯಂತ ಜಾಗರೂಕ ಮೇಲ್ವಿಚಾರಣೆಯಲ್ಲಿ, ಉಕ್ಕಿನ ಕಡಾಯಿಗಳಲ್ಲಿ (ಒಂದು ಗ್ಯಾಲನ್ "ಬೂದಿ"ಗೆ ಎರಡು ಡಾಲರಿನಷ್ಟು ಅಧಿಕ ವೆಚ್ಚದಲ್ಲಿ) ಸಂಗ್ರಹಿಸುತ್ತಿದ್ದಾರೆ. ಈ ಉಕ್ಕಿನ ಕಡಾಯಿಗಳು ಬಿರುಕುಬಿಡಬಹುದೆಂಬ ಭಯವಿದೆ. ಆದ್ದರಿಂದ ಅದನ್ನು ಆಗಾಗ್ಗೆ ಪರೀಕ್ಷಿಸುತ್ತಿರುತ್ತಾರೆ. ಈ "ಬೂದಿ"ಯನ್ನು ಶೇಖರಿಸಿರುವ ಸುತ್ತಮುತ್ತಲ ಪ್ರದೇಶದ ಮಣ್ಣು, ನೀರು ಮತ್ತು ಗಾಳಿಯನು

ವಿವಿಧ ಮೂಲಗಳಿಂದ

ಅಲ್ಲಿ ವ್ಯಾಪಿಸಿರಬಹುದಾದ "ವಿದ್ಯುತ್ ವಿಕಿರಣ ಕ್ರಿಯಾ ಶಕ್ತಿ" (ರೇಡಿಯೊ ಆಕ್ಟಿವಿಟಿ) ಗಾಗಿ ಪರೀಕ್ಷಿಸಲಾಗುತ್ತಿದೆ. ಬೃಹತ್ ಪರಮಾಣು ಕೈಗಾರಿಕೆಯ ಉಜ್ವಲ ಭವಿತವ್ಯದ ಈ ಘಟ್ಟ ದಲ್ಲಿ ವರ್ಷಂಪ್ರತಿ ಅನೇಕ ಟನ್‌ಗಳಷ್ಟು ಬೂದಿ ಶೇಖರಣೆಗೊಳ್ಳುವುದು ಅಪಾಯಕಾರಿಯಾ-ದುದು.

ರೇಡಿಯಂ ಕಿರಣಗಳ ಮತ್ತು "ಕ್ಷ"-ಕಿರಣ ಗಳ ಪ್ರಸರಣಗಳಿಂದ ಹಾನಿಯಾಗುವಂತೆಯೇ ಈ ಪರಮಾಣು "ಗೊಬ್ಬರ"ದಿಂದ ಹೊಮ್ಮುವ ಪ್ರಸರಣಗಳ ಪ್ರಭಾವಕ್ಕೆ ಸಿಲುಕಿದರೆ, ಪ್ರಾಣಿ ಮತ್ತು ಸಸ್ಯ ಜೀವಗಳು ಊನಗೊಳ್ಳುತ್ತವೆ; ಬಂಜೆಯಾಗುತ್ತವೆ; ಸಂಪೂರ್ಣ ನಾಶವಾಗು ತ್ತವೆ. ಈ "ಬಿಸಿ" ಪರಮಾಣುಗಳನ್ನು ಸಾಮಾನ್ಯ ಭೌತಿಕ ಮತ್ತು ರಾಸಾಯನಿಕ ಕ್ರಿಯೆಗಳಿಂದಾ-ಗಲಿ, ಸಾಧನಗಳಿಂದಾಗಲಿ ನಾಶಪಡಿಸಲಾಗು ವುದಿಲ್ಲ. ಅವು ತಾವಾಗಿ ನಿಸರ್ಗ ನಿಯಮ ದಂತೆ ನಶಿಸಿ ಹೋಗಬೇಕಷ್ಟೇ. ಪ್ರತಿಯೊಂದು ಜಾತಿಯ ವಿಕಿರಣ ಕ್ರಿಯಾಶೀಲ ಪರಮಾಣು ಗಳ ರಾಶಿಯೂ ನಿರ್ದಿಷ್ಟ ಕಾಲಾವಧಿಯಲ್ಲಿ ತಾನಾಗಿ ಅರ್ಧದಷ್ಟು ನಶಿಸುತ್ತದೆ. ಇದನ್ನು "ಅರ್ಧಾಯುಷ್ಯ" ಎನ್ನುತ್ತಾರೆ. ಈ ಅರ್ಧಾ ಯುಷ್ಯ ಆಯಾ ಪರಮಾಣುವನ್ನನುಸರಿಸಿ ಕೆಲ ಕ್ಷಣಗಳಿಂದ ಲಕ್ಷಾಂತರ ವರ್ಷಗಳ ವರೆಗಿರ ಬಹುದು. ಅವುಗಳ ಹ್ರಾಸವನ್ನು ಮಾನವನು ಯಾವ ಉಪಾಯದಿಂದಲೂ ತ್ವರಿತಗೊಳಿಸ ಲಾರ.

ಈ ಪರಮಾಣುಗಳನ್ನು ಭೂಮಿಯಲ್ಲಿ ಜೋ-ಪಾನವಾಗಿ ಶೇಖರಿಸದಿದ್ದಲ್ಲಿ ಮಣ್ಣಿನ ತೇವದಲ್ಲಿ, ಮಾನವ-ಪ್ರಾಣಿ ಮತ್ತು ಸಸ್ಯಗಳ ದೇಹಗಳಲ್ಲಿ ಹರಡಿಕೊಳ್ಳುತ್ತವೆ. ಆದ್ದರಿಂದ ಇವುಗಳ ಶಕ್ತಿ ಶಿಥಿಲವಾಗುವ ವರೆಗೆ ಜಾಗರೂಕವಾಗಿ ಸಂಗ್ರ ಹಿಸಬೇಕು. ಈ ಸಂಗ್ರಹಗಳನ್ನು ಏಳೆಂಟು ಶತಮಾನಗಳ ವರೆಗೆ ರಕ್ಷಿಸಬೇಕು. ನ್ಯೂಯಾ-ರ್ಕಿನ ಬ್ರೂಕ್‌ಹೇವನ್ ನ್ಯಾಷನಲ್ ಲೆಬೊರೆ ಟರಿಯ ಡಾ॥ ಎಲ್. ಪಿ ಹ್ಯಾಚ್ ಭವಿಷ್ಯ ನುಡಿ ದಿರುವಂತೆ ಕ್ರಿ ಶ ೨೦೦೦ದ ಹೊತ್ತಿಗೆ ವಿದ್ಯುತ್ ವಿಕಿರಣ ಕ್ರಿಯಾಶಕ್ತಿ ಹೊಂದಿರುವ ೪,೦೦,೦೦೦ ಟನ್ ರೇಡಿಯಂನಷ್ಟು ವರ್ಷಂಪ್ರತಿ ಉತ್ಪತ್ತಿ ಯಾಗುತ್ತದೆ. ಇಂದು ಇಡೀ ವಿಶ್ವದಲ್ಲಿ ಬರಿ ಹತ್ತಾರು ಪೌಂಡ್ ರೇಡಿಯಂ ಉಪಯೋಗ ದಲ್ಲಿದೆ.

ಪರಮಾಣು ಬೂದಿಯನ್ನು ಸುರಕ್ಷಿತವಾಗಿ ವಿಸರ್ಜಿಸುವುದರ ಬಗ್ಗೆ ಎರಡು ಪ್ರಮುಖ ವಿಚಾರವಾಹಿನಿಗಳಿವೆ: (೧) ಭೂವಿಸರ್ಜನೆ (೨) ಸಮುದ್ರ ವಿಸರ್ಜನೆ. ಅಮೇರಿಕಾದ ಪರಮಾಣು ಶಕ್ತಿ ಸಮಿತಿಯ "ಬಯೋ-ಫಿಸಿಕ್ಸ್" ವಿಭಾ ಗದ ಮುಖ್ಯಾಧಿಕಾರಿ ಡಾ॥ ವಾಲ್ಟರ್, ಈ ಬೂದಿ ಯನ್ನು ಸಮುದ್ರದಲ್ಲಿ ವಿಸರ್ಜಿಸಬೇಕೆನ್ನುತ್ತಾರೆ: "ಸಮುದ್ರಾಂತರಾಳದ ಕಣಿವೆಗಳಲ್ಲಿ ಜಲಜಂತು ಗಳು ವಾಸಿಸದಿರುವ ಪ್ರದೇಶಕ್ಕಿಂತ ಕೆಲವು ಮೈಲಿ ದೂರ ಕೆಳಗೆ ಪರಮಾಣು ಬೂದಿಯನ್ನು ಶೇಖರಿಸುವ ಕ್ರಮವನ್ನು ಪರಿಪೂರ್ಣಗೊಳಿಸ ಬಹುದು. ಸಮುದ್ರಾಂತರಾಳದಲ್ಲಿ ೨,೦೦೦ ವರ್ಷದಷ್ಟು ಹಳೆಯದಾದ ನೀರಿದೆಯೆಂದು ಭಾವಿಸುತ್ತೇವೆ. ಅಂತರಾಳದ ಹಳೆಯ ನೀರು ಮೇಲು ಪದರದ ನೀರಿನೊಂದಿಗೆ ಮಿಶ್ರ ಗೊಂಡಿಲ್ಲ. ನಮ್ಮ ಸಿದ್ಧಾಂತಗಳು ಸರಿಯಾಗಿ ದ್ದಲ್ಲಿ ಸಮುದ್ರಾಂತರಾಳದ ಕಣಿವೆಗಳಲ್ಲಿ ಈ ಪರಮಾಣು ಬೂದಿಯನ್ನು, ಮೇಲ್ಪದರಗಳಿಗೆ ಪ್ರಸಾರಗೊಂಡು ಜಲಜೀವಿಗಳನ್ನೂ ವಾತಾ ವರಣವನ್ನೂ ಜಲ ಪ್ರಯಾಣಿಕರನ್ನೂ ಘಾಸಿ ಪಡಿಸದಿರುವಂತೆ, ಶೇಖರಿಸಿ ರಕ್ಷಿಸಬಹುದು."

ಸಮುದ್ರವನ್ನು ಪರಮಾಣು ಬೂದಿಯ ವಿಸ ರ್ಜನಾ ಕೇಂದ್ರವಾಗಿ ಉಪಯೋಗಿಸುವುದರ ಬಗ್ಗೆ ಇತರ ವಿಜ್ಞಾನಿಗಳು ತೀವ್ರ ಕಳವಳ ವ್ಯಕ್ತಪಡಿಸಿದ್ದಾರೆ. ಸಮುದ್ರದ ಜಲಪದರಗಳು ಎಷ್ಟು ಬಾರಿ ಮಿಶ್ರಗೊಳ್ಳುತ್ತವೆಂಬುದು

ಯಾರಿಗೂ ತಿಳಿಯದು. ಸಂಗ್ರಹ ಸಾಧನಗಳನ್ನು ಸಮುದ್ರದ ಗಭೀರ ಅಂತರಾಳಕ್ಕೆ ಬಿಟ್ಟು ಪರೀಕ್ಷಿಸಿದಾಗ ೧೮೧೦-೨೦ ರ ತೀವ್ರ ಶೈತ್ಯಕಾಲದಲ್ಲಿ ಸಮುದ್ರದ ಮೇಲು ಪದರದ ನೀರು ಭಾರಗೊಂಡು ಕೆಳಭಾಗಕ್ಕೆ ಕುಸಿಯಿತೆಂದು ತಿಳಿಯುತ್ತದೆ. ಮತ್ತೊಂದು ಜಲಪ್ರಳಯ ಉಂಟುಮಾಡುವಂತಹ ಭೀಕರ ಚಳಿಗಾಲವು ಸಮುದ್ರದ ಜಲಪದರುಗಳನ್ನು ಮತ್ತೆ ಅಲ್ಲೋಲಕಲ್ಲೋಲ ಮಾಡಿ ಅಂತರಾಳದಲ್ಲಿ ಸಂಗ್ರಹವಾಗಿರುವ ಬಿಸಿ ಪರಮಾಣು ಬೂದಿಯನ್ನು ಮೇಲುಭಾಗಕ್ಕೆ ಬರುವಂತೆ ಮಾಡಿದರೇನು ಗತಿ?

ಭೂಮಿಯಲ್ಲಿ ಪರಮಾಣು ಬೂದಿಯನ್ನು ವಿಸರ್ಜಿಸಬೇಕೆನ್ನುವವರು, ಈ ಬೂದಿಯನ್ನು ನಿಷ್ಪ್ರಯೋಜಕ ಗಣಿಗಳಲ್ಲಿ ಮತ್ತು ಭೂಮಿಯಲ್ಲಿ ತೋಡಿರುವ ಗುಂಡಿಗಳಲ್ಲಿ ಶೇಖರಿಸಬೇಕೆಂದು ಯೋಚಿಸಿದ್ದಾರೆ. ಅಮೇರಿಕದ ಅಣುಶಕ್ತಿ ರಾಜಧಾನಿಯಾದ ಟೆನಿಸ್ಸಿ ಪ್ರಾಂತದ ಓಕ್‌ರಿಡ್ಜ್‌ನ ಶಸ್ತ್ರ ಕಾರಖಾನೆಯಲ್ಲಿ ತಯಾರಾಗುವ ಅಧಿಕ ಪ್ರಮಾಣದ ಬಿಸಿ ಬೂದಿಯನ್ನು ಅನೇಕ ವರ್ಷಗಳಿಂದಲೂ ಪ್ರಯೋಗಾರ್ಥವಾಗಿ ತೆಗೆದಿರುವ ಗುಂಡಿಗಳಲ್ಲಿ ಸಂಗ್ರಹಿಸಿ ವಿದ್ಯುತ್ ವಿಕಿರಣ ಶಕ್ತಿಯ ಹ್ರಾಸವನ್ನು ಜಾಗರೂಕವಾಗಿ ಪರಿಶೀಲಿಸುತ್ತಿದ್ದಾರೆ. ಸುತ್ತಮುತ್ತಲ ಪ್ರದೇಶದಲ್ಲಿ ಹರಡಿರಬಹುದಾದ ವಿದ್ಯುತ್ ವಿಕಿರಣ ಪ್ರಸರಣವನ್ನು ಪರೀಕ್ಷಿಸಲು ಭೂಮಿಯನ್ನಗೆದು ಅಧ್ಯಯನ, ಪರಿಶೀಲನೆಗಳನ್ನು ಮಾಡುತ್ತಿದ್ದಾರೆ. ಈ ಪರಿಶೀಲನೆಯ ಪ್ರಕಾರ, ಭೂಮಿಯೊಳಗೆ ನೀರಿನ ಮಟ್ಟ ಬಹಳ ಕೆಳಗಿರುವ ಕಡೆ ಅಥವಾ ಮಣ್ಣು ಜಲಾಭೇದ್ಯವಾಗಿರುವ ಕಡೆ "ಬಿಸಿ" ಪರಮಾಣುಗಳ ವ್ಯಾಪಕ ಶಕ್ತಿ ಹರಡುವುದು ನಿಧಾನವಾಗುತ್ತದೆ. ಅವು ಪ್ರಸಾರಗೊಳ್ಳುವ ವೇಳೆಗೆ ಶಾಖಹೀನವಾಗಿ ಸುರಕ್ಷಿತ ವಸ್ತುಗಳಾಗುತ್ತವೆ.

ಕೈಗಾರಿಕೆಯಲ್ಲಿ ಉತ್ಪತ್ತಿಯಾಗುವ ಪರ-

ಮಾಣು ಬೂದಿಯನ್ನು ನಿರ್ಜನ ಪ್ರದೇಶಕ್ಕೆ ರವಾನಿಸುವ ಯೋಜನೆಯನ್ನು ಅಧಿಕ ವೆಚ್ಚದ ಅನಾನುಕೂಲತೆಯಿಂದಕ್ಕೈಬಿಡಬೇಕಾದೀತೆಂದು ಅನೇಕ ಇಂಜನಿಯರುಗಳು ಅಭಿಪ್ರಾಯಪಟ್ಟಿದ್ದಾರೆ. ಬೂದಿಯನ್ನು ರವಾನಿಸುವಾಗ ಜನತೆಯನ್ನು ಅದರ ಪ್ರಸರಣಶಕ್ತಿಯಿಂದ ರಕ್ಷಿಸಲು, ಬೂದಿಯ ತೂಕಕ್ಕಿಂತಲೂ ಅತ್ಯಧಿಕವಾದ ಸೀಸದ ರಕ್ಷಾಕವಚಗಳಲ್ಲಿ ಮುಚ್ಚಿಡಬೇಕಾಗುತ್ತದೆ. ಈಗಿರುವ ಪರಮಾಣು ಬೂದಿಯನ್ನು ರವಾನಿಸುವುದಕ್ಕೂ, ಸಾವಿರ ಗ್ಯಾಲನ್ನಿನ ಕಡಾಯಿಗಳನ್ನು ನಿರ್ಮಿಸುವುದಕ್ಕೂ ವಿದ್ಯುತ್ ಪ್ರಸರಣ ಶಕ್ತಿಯನ್ನು ಹಿಡಿದಿಡುವುದಕ್ಕೂ ಸುಮಾರು ೫೦ ಟನ್ ಸೀಸ ಬೇಕಾಗುತ್ತದೆ. "ವಿಭಾಜಕ ವಸ್ತು" (ಫಿಷನ್ ಪ್ರಾಡಕ್ಟ್ಸ್) ಗಳಿರುವ ಕಡಾಯಿಗಳು ಬಿರುಕು ಬಿಟ್ಟರೆ ಇಡೀ ನಗರದ ನೀರು ಸರಬರಾಜು ವಿಷಪೂರಿತವಾಗಬಹುದು.

ಕೆಲವರು ಪರಮಾಣು ಬೂದಿಯನ್ನು ಘನ ವಸ್ತುಗಳೊಳಗೆ ಬಂಧಿಸಿಡಲು ಯೋಚಿಸಿದ್ದಾರೆ. ಈ ಬೂದಿಯನ್ನು ಮಣ್ಣಿನಿಂದ ಮಾಡಿದ ವಸ್ತುಗಳ ಮೂಲಕ ಶೋಧಿಸುವ ಯೋಜನೆಯನ್ನು ಡಾ. ಹ್ಯಾಚ್ ಮಂಡಿಸಿದ್ದಾರೆ. ಅವರ ಅಭಿಪ್ರಾಯದಂತೆ, ಈ ಮಣ್ಣಿನ ವಸ್ತು ಬಿಸಿ ಪರಮಾಣಗಳನ್ನು ಹೀರಿಕೊಂಡು ಹೊರಗೆ ಪ್ರಸಾರಗೊಳ್ಳದಂತೆ ರಾಸಾಯನಿಕವಾಗಿ ಹಿಡಿದಿಟ್ಟುಕೊಂಡಿರುತ್ತದೆ. ಈ ರೂಪದಲ್ಲಿ ಪರಮಾಣು ಬೂದಿಯನ್ನು ಸುರಕ್ಷಿತವಾಗಿ ಅನೇಕ ಶತಮಾನಗಳ ಕಾಲ ಮಣ್ಣಿನ ಗುಂಡಿಗಳಲ್ಲಿ ಶೇಖರಿಸಬಹುದೆಂದು ಅವರ ನಂಬಿಕೆ.

ಪರಮಾಣು ಗೊಬ್ಬರವನ್ನು "ಕರಗಿದ ಲವಣ" ( ಮೋಲ್ಟನ್ ಸಾಲ್ಟ್ ) ವಾಗಿ ಪರಿವರ್ತಿಸುವುದರ ಬಗ್ಗೆಯೂ ವಿಜ್ಞಾನಿಗಳು ಕಾರ್ಯೋನ್ಮುಖರಾಗಿದ್ದಾರೆ. 'ಕರಗಿದ ಲವಣ' ವನ್ನು ಭೂಮಿಯಲ್ಲಿ ಹುದುಗಿಸಿರುವ ಕಡಾಯಿಗಳಿಗೆ ರವಾನಿಸಿದ ನಂತರ ಅವು ಘನೀಭೂತವಾಗುತ್ತವೆ; ಮತ್ತು ಅವು ಭೂಮಿಯ ತೇವದಿಂದ ಹೀರಲ್ಪಡುವುದಿಲ್ಲ. ಈ ಯೋಜನೆಯಂತೆ ಪರಮಾಣು ಬೂದಿಯನ್ನು ಸಂಗ್ರಹಿಸಲು ಸಾಧ್ಯವಾಗುವಂತಹ ಭೂಗತ ಉಕ್ಕಿನ ಕಡಾಯಿಗಳನ್ನು ಸಿದ್ಧಪಡಿಸಬೇಕಾಗುತ್ತದೆ.

ಪರಮಾಣು ಬೂದಿಯು ವಿದ್ಯುತ್ ವಿಕಿರಣ ಶಕ್ತಿ ಹೊಂದಿರುವುದು ಮಾತ್ರವಲ್ಲದೆ ಪ್ರಚಂಡ ಶಾಖವನ್ನು ಉತ್ಪತ್ತಿ ಮಾಡುತ್ತಿರುತ್ತದೆ. ಅವ್ಯಾಹತವಾಗಿ ಪರಮಾಣು ಬೂದಿಯನ್ನು ಶೇಖರಿಸುತ್ತಿರುವ ಕಡಾಯಿಗಳಲ್ಲಿ, ಉಕ್ಕನ್ನೇ ಕರಗಿಸಿ ಆಸ್ಫೋಟಕ ಅನಿಲವನ್ನು ಉತ್ಪತ್ತಿ ಮಾಡುವಂತಹ ಶಾಖ ಸಂಗ್ರಹವಾಗಬಹುದು. ಈ ಕಾರಣದಿಂದ, ಭೂಗರ್ಭದ ಕಡಾಯಿಗಳಿಗೆ ಅನಿಲದ ಮೂಲಕ ಅಥವಾ ಜಲದ ಮೂಲಕ ಶಾಖವನ್ನು ಕುಗ್ಗಿಸುವ ವ್ಯವಸ್ಥೆಯನ್ನೂ ಮಾಡಬೇಕಾಗುತ್ತದೆ.

ಭೂಮಿ ಮತ್ತು ಸಮುದ್ರವನ್ನು ಬಿಟ್ಟರೆ, ಈ ಸಮಸ್ಯೆಯ ಪರಿಹಾರಕ್ಕೆ ಬೇರೆ ಮಾರ್ಗಗಳಿವೆಯೇ ? ಈ ಗೊಬ್ಬರವನ್ನು ವ್ಯವಸ್ಥಿತ ಸಾಧನಗಳ ಸಹಾಯದಿಂದ ಆಕಾಶಕ್ಕೆ ಬಿಸಾಡಬಹುದೆಂಬ ಮತ್ತೊಂದು ಅಭಿಪ್ರಾಯ ಮಂಡಿಸಿದ್ದಾರೆ. ಆದರೆ ಅಮೇರಿಕಾದ ರಾಕೆಟ್ ತಜ್ಞರಾದ ಡಾ. ಸಿಂಗರ್ ವರದಿಮಾಡಿರುವಂತೆ, ನೂರು ಪೌಂಡು ಪರಮಾಣು ಬೂದಿಯನ್ನು ಆಕಾಶಕ್ಕೆ ರವಾನಿಸಲು ಹತ್ತು ಲಕ್ಷ ಡಾಲರ್ ವೆಚ್ಚಮಾಡಬೇಕಾಗುತ್ತದೆ ! ಬೂದಿಯ ವಿಸರ್ಜನಾ ಕಾರ್ಯಕ್ಕೆ ಇದು ಅತ್ಯಧಿಕ ವೆಚ್ಚವೇ ಸರಿ !

ಈ ಪರಮಾಣು ಬೂದಿಯನ್ನು ಉಪಕಾರಿ ವಸ್ತುವಾಗಿ ಉಪಯೋಗಿಸುವ ಮಾರ್ಗಗಳನ್ನು ಶೋಧಿಸುವುದರಲ್ಲಿ ಕೆಲ ತಜ್ಞರು ನಿರತರಾಗಿದ್ದಾರೆ. ಅತ್ಯಂತ ನಾಟಕೀಯ ಅಂಶವೆಂದರೆ ಈ "ವಿಭಾಜಕ ವಸ್ತು" ಗಳು ಆಹಾರವನ್ನು ಅನಿಯಮಿತ ಕಾಲದ ವರೆಗೆ ಕೆಡದಿರುವಂತೆ ರಕ್ಷಿಸ

ಬಲ್ಲವು. ಸ್ಟ್ಯಾಂಡರ್ಡ್ ಆಯಿಲ್ ಡೆವಲಪ್‌ಮೆಂಟ್ ಕಂಪನಿಯವರು ಪೆಟ್ರೋಲಿಯಂ ಪರಿಶುದ್ಧಗೊಳಿಸುವ ಕ್ರಿಯೆಯನ್ನು ತ್ವರಿತಗೊಳಿಸುವ ಕಾರ್ಯಕ್ಕೆ ಪರಮಾಣು ಬೂದಿಯ ಪ್ರಸರಣ ಶಕ್ತಿಯನ್ನು ಉಪಯೋಗಿಸಲು ಪ್ರಯೋಗ ಪರೀಕ್ಷೆ ನಡೆಸುತ್ತಿದ್ದಾರೆ.

ಇದು ವರೆಗೆ ಪರಮಾಣು ಬೂದಿಯನ್ನು ಅಲ್ಪ ಪ್ರಮಾಣದಲ್ಲಿ ಉಪಯೋಗಿಸಲಾಗುತ್ತಿದೆ. ಈ ಬೂದಿಯನ್ನು ಸುರಕ್ಷಿತವಾಗಿ ಉಪಯೋಗಿಸುವುದಕ್ಕೆ ಮೊದಲು ಪರಮಾಣುಶಕ್ತಿ ಉತ್ಪಾದಕ ಯಂತ್ರದಲ್ಲೇ ಅದನ್ನು ಕೆಲವು ವರ್ಷದ ವರೆಗೆ ಸಂಗ್ರಹಿಸಿಡಬೇಕು; ಏಕೆಂದರೆ ಅಲ್ಪಾಯುಗಳಾದ ಬಿಸಿ ಪರಮಾಣುಗಳು ಅಷ್ಟರಲ್ಲಿ ಅವಸಾನ ಹೊಂದುತ್ತವೆ. ಕಾಲಾಂತರದಲ್ಲಿ ಪರಮಾಣು ಬೂದಿಯು ಅತ್ಯಧಿಕ ಶಕ್ತಿಯನ್ನು ಕಳೆದುಕೊಳ್ಳುವುದರಿಂದ ಆ ಮೇಲೆ ಕೈಗಾರಿಕೆಗೆ ಅಲ್ಪವಾಲ್ಯದ ಪ್ರಯೋಜನವನ್ನು ನೀಡಬಹುದು.

ಈ ಪರಮಾಣುಬೂದಿಯ ಉಪಯೋಗಗಳೇನಿದ್ದರೂ ವಿಸರ್ಜನಾ ಸಮಸ್ಯೆ ಹಾಗೇ ಉಳಿಯುತ್ತದೆ; ಏಕೆಂದರೆ ವಿದ್ಯುತ್ ವಿಕಿರಣ ಶಕ್ತಿಯುಳ್ಳ ಪರಮಾಣುಗಳ ನೈಸರ್ಗಿಕ ಕಾಲಮಾನವನ್ನು ತ್ವರಿತಗೊಳಿಸಲಾಗುವುದಿಲ್ಲ. ಪರಮಾಣು ಬೂದಿಯ ವಿವಿಧ ಉಪಯೋಗಗಳಿಂದ ಬರುವ ಹಣವನ್ನು ಅದರ ಸುವ್ಯವಸ್ಥಿತ ಅಂತ್ಯಕ್ರಿಯೆಗೆ ಉಪಯೋಗಿಸಬಹುದೆಂದು ವಿಜ್ಞಾನಿಗಳು ನಂಬಿದ್ದಾರೆ. ಪರಮಾಣುಶಕ್ತಿಯ ಪೂರ್ಣ ಭವಿತವ್ಯವೇ ಇದನ್ನು ಅವಲಂಬಿಸಿದೆ. *



## ಆಳುವವರು

ರಾಜರೊಳಗುತ್ತಮರು
ಇದ್ದಾರು ಎಂದಷ್ಟೆ ಜನ ನಂಬುವುದು ;
ಮಧ್ಯಮರನ್ನಾದರೆ
ಜನ ಮೆಚ್ಚಿ ಹೊಗಳುವುದು ;
ಅಧಮರಾದವರಿಗೆ
ಬೆದರಿ ಅಳುಕುವುದು ;
ಅದಕು ಕಡೆಯಾದವರ
ಹೇಸಿ ತೆಗಳುವುದು.

ಪ್ರಜೆಯು ವಿಶ್ವಾಸ ಪಡೆಯಲಾರದವರು
ಪ್ರಜೆಯಲಿ ಅವಿಶ್ವಾಸ ತಾಳುವರು ;
ಬಳಿಕ ಆಣೆ ಮಾಡೆಂದು ಹೇಳುವರು.

ಆದರುತ್ತಮ ರಾಜರಾರೆಂಬೆಯ ?
ಯಾರು ಮಾಡಿ ಮುಗಿಸಿದ ಬಳಿಕ,
ಯಾರು ಸಾಧಿಸಿ ತೀರಿಸಿದ ಬಳಿಕ,
ಜನ ತಾವೆ ಇದನೆಲ್ಲ ಮಾಡಿದೆವೆಂದುಕೊಂಬುದೊ
ಆತನೆ ಉತ್ತಮ.

— ಲಾವೋ ತ್ಸೆ
ಚೀನಿ ತತ್ವಜ್ಞಾನಿ




# ಹೈಡ್ ಪಾರ್ಕಿನ "ಪಾರ್ಲಿಮೆಂಟು"

ಇಲ್ಲಿ ಬೇಕಾದವರು ಬೇಕಾದ್ದನ್ನು ಮಾತಾಡಬಹುದು!

ರಾ. ಕೃ. ನಾಯಕ

ನಿಮಗೆ ವಾಕ್-ಸ್ವಾತಂತ್ರ್ಯದ ಪರಮಾವಧಿಯನ್ನು ನೋಡಬೇಕೆಂದು ಅಥವಾ ಅನುಭವಿಸಬೇಕೆಂದು ಹಂಬಲವಿದ್ದಲ್ಲಿ ಲಂಡನ್ನಿನ ಹೈಡ್ ಪಾರ್ಕಿಗೆ ಹೋಗಿರಿ. ಅಲ್ಲಿ ನೀವು ಬ್ರಿಟಿಶ ಸರಕಾರವನ್ನು ಉರುಳಿಸಿರಿ ಎಂದು ಕೂಗಬಹುದು; ಕಲ್ಕಿಯ ಅವತಾರವಾಗಲಿದೆ, ಜಗತ್ತು ಅವಸಾನ ಹೊಂದಲಿದೆ ಎಂದು ಭವಿಷ್ಯ ಹೇಳಬಹುದು; ಬ್ರಿಟಿಶ ಸಾಮ್ರಾಜ್ಯವನ್ನು ಶಪಿಸಬಹುದು; ಯಾವನೇ ಮಂತ್ರಿಯ ಮೇಲೆ ಬೈಗಳ ಸುರಿಮಳೆಗರೆಯಬಹುದು; ಅಲ್ಲೇ ರಸ್ತೆಯಲ್ಲಿ ವಾಹನಗಳನ್ನು ನಿಯಂತ್ರಿಸುತ್ತಿರುವ ಪೋಲೀಸನಿಗೆ ಕೇಳಿಸುವ ಹಾಗೆ ಲಂಡನ್ ಪೋಲೀಸರು ಲಂಚಗುಳಿಗಳೆಂದೂ ದಬ್ಬಾಳಿಕೆಗಾರರೆಂದೂ ತೆಗಳಬಹುದು.

೧೮ ನೇ ಶತಮಾನದಲ್ಲಿ ನಿರ್ಮಿಸಿದ ಈ ವಿಸ್ತಾರವಾದ (೩೬೧ ಎಕರೆ) ಪಾರ್ಕಿನ ಮನೋಹರ ಅಮೃತಶಿಲೆಯ ಕಮಾನಿನ ಬಳಿ ಇರುವ ಇಕ್ಕಟ್ಟಾದ ಮೂಲೆಯನ್ನು ಕೆಲ ವೇಳೆ ಲಂಡನ್ನಿನ "ಆ ಇನ್ನೊಂದು ಪಾರ್ಲಿಮೆಂಟು" ಎಂದು ಕರೆಯುವುದುಂಟು. ಈ ಪಾರ್ಲಿಮೆಂಟಿನಲ್ಲಿ

ಮಾತಾಡಬೇಕಾದರೆ ಯಾವ ಚುನಾವಣೆಯ-ಲ್ಲಿಯೂ ಗೆಲ್ಲಬೇಕಾಗಿಲ್ಲ. ಅದಕ್ಕೆ "ಭಾಷಣಕಾರರ ಮೂಲೆ" ಎಂದೇ ಹೆಸರು ಬಿದ್ದಿದೆ. ಇಲ್ಲಿ ಭಾಷಣ ಮಾಡಬೇಕಾದರೆ ಅಗತ್ಯವಾದದ್ದು ಇಷ್ಟೇ—ಒಂದು ಎತ್ತರವಾದ ಸ್ಥಳ; ಅದು ಸಿಕ್ಕದಿದ್ದರೆ ನೀವೇ ಹೊತ್ತು ತಂದ ಒಂದು ಸಾಬೂನು ಪೆಟ್ಟಿಗೆ; ಒಂದು ಭಿತ್ತಿ ಪತ್ರ; ಏನಾದರೊಂದು ದೂರು ಇಲ್ಲವೇ ತಲೆಯಲ್ಲಿ ಏನಾದರೊಂದು ಉತ್ತೇಜನಕಾರಿ ವಿಚಾರ; ಮತ್ತು ಬಲವಾದ ಶ್ವಾಸಕೋಶಗಳು. ಈ ಕೊನೆಯದು ಎಲ್ಲಕ್ಕೂ ಮಿಗಿಲಾದ ಅವಶ್ಯಕತೆ. ಏಕೆಂದರೆ ಕೆಲವೇ ನೂರು ಚದರ ಗಜ ವಿಸ್ತಾರವಾದ ಈ "ಮೂಲೆ" ಯಲ್ಲಿ ಏಕಕಾಲದಲ್ಲಿ ಹತ್ತೋ ಅದಕ್ಕೂ ಹೆಚ್ಚೋ ಭಾಷಣಕಾರರು ಕೂಗುತ್ತಿರುವುದರಿಂದ ನಿಮ್ಮ ಕಡೆ ಶ್ರೋತೃಗಳನ್ನು ಆಕರ್ಷಿಸಲು ಗುಡುಗಿನಂಥ ದನಿಯೇ ನಿಮಗಿರಬೇಕು. ಅದರಿಂದಲೇ ಹಿರಿಯ ಪಿಟ್ ಇದನ್ನು "ಲಂಡನ್ನಿನ ಪುಪ್ಫುಸ" ಎಂದು ಕರೆದದ್ದು.

ಯಾವುದೇ ದಿನ ಸಂಜೆ ೫–೩೦ ರ ನಂತರ ಇಲ್ಲಿ ಮೂರು ನಾಲ್ಕು ಜನ ಭಾಷಣಕಾರರಾ-ದರೂ ತಮ್ಮ ನಾಲಗೆಯ ಕತ್ತಿ ಮಸೆಯುವುದನ್ನು ಕಾಣಬಹುದು. ಆದರೆ ಆದಿತ್ಯವಾರ ದಿನವೇ ಪುಪ್ಫುಸಗಳ ಸಂಪೂರ್ಣ ಶಕ್ತಿಯ ಪ್ರದರ್ಶನ ತೋರುವುದು.

ಹೈಡ್ ಪಾರ್ಕಿನ ಈ ಭಾಷಣಕಾರರನ್ನು ಆಲಿಸಲು ಕೂಡ ಜನರ ಕೊರತೆ ಇರುವುದಿಲ್ಲ. ಕೆಲ ವೇಳೆ ಮೂರು ಸಾವಿರ ಜನ ಶ್ರೋತೃಗಳು ಈ ಇಕ್ಕಟ್ಟಾದ ಸ್ಥಳದಲ್ಲಿ ಬೇರೆ ಬೇರೆ ಭಾಷಣಕಾರರ ಸುತ್ತ ಕಿಕ್ಕಿರಿದಿರುವುದುಂಟು. ಜನಜಂಗುಳಿಯನ್ನು ನೋಡಿದ ಭಾಷಣಕಾರರ ಸ್ಫೂರ್ತಿ ಉಕ್ಕೇರಿ ಅವರು ಭಯಂಕರ ಅಂಗಭಂಗಿಗಳಿಂದ, ಅಷ್ಟೇ ಉತ್ತೇಜಿತ ವಾಗ್ವೈಖರಿಯಿಂದ ತಮ್ಮ ವಾದಗಳನ್ನು ಮುಂದುವರಿಸುತ್ತಾರೆ.

ಇಲ್ಲಿ ಒಬ್ಬ ಕಂಠ ಪಂಡಿತ ಮಾನವನಿಗೆ ಭವಿಷ್ಯವೇ ಇಲ್ಲ, ಏನಾದರೂ ಉಳಿಯಬೇಕಾದರೆ ಅದು ಸ್ತ್ರೀಯರಿಂದ ಎಂದು ಶ್ರೋತೃಗಳಿಗೆ ತಿಳಿಹೇಳುತ್ತಿರುತ್ತಾನೆ.

ಅವನ ಹತ್ತಿರವೇ ಇನ್ನೊಬ್ಬ ಬಹುಶಃ ಅರಸೊತ್ತಿಗೆಯನ್ನು ಖಂಡಿಸುತ್ತ ನಿಂತಿರಬಹುದು. ಅವನ ಪಾಲಿಗೆ ಇಂಗ್ಲಂಡಿನ ಎಲ್ಲ ದುಃಖಗಳಿಗೂ ಅರಸೊತ್ತಿಗೆಯೇ ಮೂಲ. ವಿದೇಶಿ ಪ್ರವಾಸಿಕರು ಈ ಭಾಷಣ ಕೇಳಿ ದಂಗಾಗಿ ಹೋಗುತ್ತಾರೆ. ಅರಸೊತ್ತಿಗೆಯನ್ನು ಪವಿತ್ರವೆಂದೆಣಿಸುವ ಇಂಗ್ಲಂಡಿನಲ್ಲಿ ಹೀಗೆ ಮಾತಾಡುವ ಈತನ ಅವತಾರ ಇನ್ನೇನು ಸಮಾಪ್ತಿಯಾಯಿತೆಂದೇ ಆತ ಭಾವಿಸುತ್ತಾನೆ. ಪೋಲೀಸನೊಬ್ಬ ಜನಜಂಗುಳಿಯ ಅಂಚಿನಲ್ಲಿ ಕಾಣಸಿಕೊಂಡೊಡನೆ ತನ್ನ ಊಹೆ ನಿಜವಾಯಿತೆಂದು ಅವನಿಗೆ ಖಾತರಿಯಾಗುತ್ತದೆ. ಆದರೆ ಪೋಲೀಸ ಏನೂ ಮಾಡುವುದಿಲ್ಲ. ಈ ಉದ್ವೇಗಜನಕ ಭಾಷಣ ಕೇಳಿ ಜನರೇನಾದರೂ ಅವನ ಮೇಲೇರಿ ಹೋದಾರು, ಆಗ ಅವನ ನೆರವಿಗೆ ಬರಬೇಕು ಎಂಬ ಮುಂಜಾಗ್ರತೆಯಿಂದಲೇ ಆತ ಅಲ್ಲಿ ಸುಳಿದಿರುತ್ತಾನೆ. ಅದೂ ಅಗತ್ಯವಿಲ್ಲ. ಲಂಡನ್ ಜನ ಈ ತಮಾಷೆಯನ್ನು ತಮಾಷೆಯೆಂದೇ ನೋಡುತ್ತಾರೆ.

ಹೆಚ್ಚು ಕಡಿಮೆ ಯಾವ ದಿನವೂ ರಾಜಕಾರಣ ಹೈಡ್‌ಪಾರ್ಕಿನ ಈ ಮೂಲೆಯಲ್ಲಿ ಕೇಳಬರುತ್ತದೆ. ಇಂಗ್ಲಂಡಿನ ಕೆಲ ಅತಿ ಶ್ರೇಷ್ಠ ಭಾಷಣಕಾರರೂ ವಿಚಾರ ಪ್ರವರ್ತಕರೂ ನಾಲಿಗೆ ಓಡಿಸುವುದಕ್ಕೆ ಇಲ್ಲೇ ತರಬೇತಿ ಹೊಂದಿದವರಿದ್ದಾರೆ. ಬರ್ನಾರ್ಡ್‌ಶಾರಂಥ ವಾದವಿಶಾರದರಿಗೆ ಇಲ್ಲಿಯೇ ಶ್ರೀಗಣ ಆದದ್ದು. ಇಲ್ಲಿ ಕಂಠತ್ರಾಣ ಬೆಳೆಸಿಕೊಂಡವರಲ್ಲಿ ಕೆಲವರು ಇಂದು ಕಾರ್ಮಿಕ ಪಕ್ಷದ ಪಾರ್ಲಿಮೆಂಟ್ ಸದಸ್ಯರಾಗಿದ್ದಾರೆ

ರಾಜಕಾರಣವೊಂದೇ ಎಂದಲ್ಲ. ಯಾವತರದ ಬುದ್ಧಿಯುಕ್ತ ಅಥವಾ ಬುದ್ಧಿಹೀನ ವಿಚಾರ

ಗಳೂ ಇಲ್ಲಿ ಪ್ರತಿಪಾದಕರನ್ನೂ ಶ್ರೋತೃಗಳನ್ನೂ ಪಡೆಯಬಲ್ಲದು. ದೇವರ ಅಸ್ತಿತ್ವವನ್ನು ಸಾಧಿಸುವರೂ ನಿರಾಕರಿಸುವವರೂ ಅಕ್ಕಪಕ್ಕದಲ್ಲೇ ಮಾತಾಡುತ್ತಿರಬಹುದು. ಹೈಡ್ ಪಾರ್ಕಿನ ಒಂದು ಸಾಮಾನ್ಯ ದೃಶ್ಯವೆಂದರೆ ಪ್ರಳಯ ಬರಲಿದೆ ಎಂದು ಕೂಗುವವರದು. ಮಾನವ ಜೀವಿಗಳನ್ನು ಕೈಮೀರುವ ಮೊದಲೇ ಉದ್ಧರಿಸಬೇಕೆಂಬ ಹಂಬಲವನ್ನು ತಡೆಯಲಾರದ ಯಾರಾದರೊಬ್ಬ ಕುತ್ತಿಗೆಗೆ "ಪಶ್ಚಾತ್ತಾಪ ಪಡಿರಿ, ಏಕೆಂದರೆ ಪ್ರಳಯ ಸನ್ನಿಹಿತವಾಗಿದೆ" ಎಂದು ಹಲಗೆ ತೂಗಹಾಕಿಕೊಂಡು, ಈಗಲೇ ಪಾಪಗಳಿಗಾಗಿ ಪಶ್ಚಾತ್ತಾಪಪಡದಿದ್ದರೆ ಅನಂತವಾದ ನರಕ ವಾಸದಲ್ಲಿ ಎಂಥೆಂಥ ಶಿಕ್ಷೆಗಳನ್ನನುಭವಿಸಬೇಕಾಗುವುದೆಂದು ಮೈ ನವಿರೇಳುವಂತೆ ವರ್ಣಿಸುತ್ತಿರುತ್ತಾನೆ. ಹೈಡ್ ಪಾರ್ಕಿಗೆ ತಪ್ಪದೆ ಬರುತ್ತಿರುವವರು ಈತ ವರ್ಷಾನುವರ್ಷದಿಂದ ಇಲ್ಲಿ ಇದೇ ಘೋರ ಭವಿಷ್ಯವನ್ನುಚ್ಚರಿಸುತ್ತಿರುವುದನ್ನು ಕಂಡಿದ್ದಾರೆ. ಪ್ರಳಯ ದಿನವನ್ನು ನಿಗದಿಯಾಗಿ ಹೇಳದೆ ಇವನು ಬುದ್ಧಿವಂತಿಕೆಯನ್ನೇ ಪ್ರದರ್ಶಿಸುತ್ತಾನೆನ್ನಬಹುದು. ಅವನ ಸುತ್ತ ಕುತೂಹಲದಿಂದ ನೆರೆದ ಜನ, "ನಾವಿನ್ನೂ ಬದುಕಿದ್ದೇವಲ್ಲ!" ಎಂದೋ "ಕಡೆಗೆ ನಿನ್ನ ಪ್ರಳಯ ಯಾವಾಗಯ್ಯ ಬರೋದು? ಈ ವಾರ ಖಂಡಿತ ತಾನೆ?" ಎಂದೋ ಹೇಳುತ್ತಾರೆ. ಯಾರಾದರೊಬ್ಬ ಹರಿತ ನಾಲಗೆಯವ, "ಮಹಾರಾಯಾ, ಶುಕ್ರವಾರದ ವರೆಗೆ ಪ್ರಪಂಚವನ್ನುಳಿಸು. ಆವೊತ್ತು ನನ್ನ ಸಂಬಳದ ದಿನ!" ಎನ್ನುತ್ತಾನೆ. ನಗೆಯ ಕೋಲಾಹಲ ಏಳುತ್ತದೆ. ಆದರೆ ಭಾಷಣಕಾರ ತನ್ನ ರಕ್ತ ಹೆಪ್ಪುಗಟ್ಟಿಸುವ ಭವಿಷ್ಯವನ್ನು ಏನೂ ಆಗಿಲ್ಲೆಂಬಂತೆ ಮುಂದುವರಿಸುತ್ತಾನೆ.

ವಸಾಹತುಗಳು ಮತ್ತು ಕಾಮನ್‌ವೆಲ್ತ್ ರಾಷ್ಟ್ರಗಳೂ ಇಲ್ಲಿ ಕಿವಿಗೊಡುವವರಿಲ್ಲದೆ ನಿರಾಶರಾಗಬೇಕಿಲ್ಲ. ಯಾವನಾದರೊಬ್ಬ ನಿಗ್ರೋ ಭಾಷಣಕರ್ತ ಇಂಗ್ಲಂಡಿನ ಬಿಳಿಯರು ತನಗೆ ಮಾಡಿದ ಅವಮಾನಗಳನ್ನು ಆಕ್ರೋಶ ಪೂರ್ಣವಾಗಿ ವರ್ಣಿಸುತ್ತಾನೆ. "ಆಫ್ರಿಕ ತನ್ನತನವನ್ನು ಸಂಪಾದಿಸಿಕೊಂಡ ಮೇಲೆ ಇದರ ಪ್ರತೀಕಾರವನ್ನು ಬಿಳಿಯರು ಅನುಭವಿಸಲೇಬೇಕಾಗುವುದು" ಎಂದಾತ ನೋಟೀಸು ಕೂಡ ಕೊಡಬಹುದು. ಹಿಂದೂ ಯೋಗಿಗಳೂ ವೇದಾಂತಿಗಳೂ ತಮ್ಮ ಧರ್ಮದ ಮತ್ತು ವ್ಯಾಯಾಮದ ಹಿರಿಮೆಯನ್ನು ಉತ್ಪ್ರೇಕ್ಷಿಸಿ ಮಾತಾಡಬಹುದು. ನಿಜವಾಗಿ ಕರ್ನಾಟಕದಿಂದ ಹೋದ ಯೋಗಿ ಎಲ್.ಎಸ್. ರಾಯರು ಪ್ರಥಮತಃ ಲಂಡನ್ನನ್ನು ಆಕರ್ಷಿಸಿದ್ದು ಹೈಡ್ ಪಾರ್ಕಿನಲ್ಲಿಯೇ.

ಹೈಡ್‌ಪಾರ್ಕಿನಲ್ಲಿ ಭಾಷಣಗಳಷ್ಟೇ ಪರಿಚಿತವಾದ ಇನ್ನೊಂದು ಸಂಗತಿಯೆಂದರೆ ಅಡ್ಡ ಸವಾಲುಗಳು. ಕೆಲ ಭಾಷಣಕಾರರು (ಹೆಚ್ಚಾಗಿ ಪಾದ್ರಿಗಳು) ಹತ್ತಾರು ವರ್ಷಗಳಿಂದ ಇಲ್ಲಿ ತಮ್ಮ ಮತಗಳನ್ನು ಪ್ರತಿಪಾದಿಸುತ್ತಿರುವಂತೆ ಹತ್ತಾರು ವರ್ಷಗಳಿಂದ ಇಲ್ಲಿನ ಭಾಷಣಕಾರರಿಗೆ ಅಡ್ಡ ಸವಾಲು ಹಾಕಿ ಫಜೀತಿ ಗೊಳಿಸುವುದನ್ನೆ ಒಂದು ಉಪ ಉದ್ಯೋಗ ಮಾಡಿಕೊಂಡವರು ಇಲ್ಲಿದ್ದಾರೆ. ಮೆಥೋಡಿಸ್ಟ್ ಧರ್ಮೋಪದೇಶಕರಾದ ಡಾ. ಡೊನಾಲ್ಡ್ ಸೋಪರರು ಇಲ್ಲಿ ೨೦ ವರ್ಷಕ್ಕೂ ಮೇಲ್ಪಟ್ಟು ಪಾಪಿಗಳಿಗೆ ಕ್ರಿಸ್ತನ ಕರುಣೆಯನ್ನು ಬೋಧಿಸಿದ್ದಾರೆ; ಹಾಗೆಯೆ ನಿರೀಶ್ವರವಾದಿ ಕುಮಾರಿ ಬೆಟ್ಟಿ ಹಂಫ್ರೀಸ್ ಅನೇಕ ವರ್ಷಗಳಿಂದ ಧಾರ್ಮಿಕ ಭಾಷಣಕರ್ತರನ್ನು ಪ್ರಶ್ನೆಗಳಿಂದ ಪೀಡಿಸುತ್ತ ಸಭೆಯಿಂದ ಸಭೆಗೆ ಧಾವಿಸುತ್ತ ಬಂದಿದ್ದಾಳೆ.

"ದೇವರು ಕರುಣಾಳು" ಎಂದು ಒಬ್ಬ ಭಾಷಣ ಪ್ರಾರಂಭಿಸಿದರೆ ಯಾವನೋ ಒಬ್ಬ ಕೂಲಿಕಾರ "ಹಾಗಾದರೆ ಅವನು ಕಲ್ಲಿದ್ದಲನ್ನು ಭೂಮಿಯಲ್ಲಿ ಇಷ್ಟು ಆಳವಾಗಿ ಏಕೆ ಇಟ್ಟಿದ್ದಾನೆ?" ಎಂದು ಕೇಳುತ್ತಾನೆ. ಪ್ರತಿಯೊಬ್ಬ ಭಾಷಣಕಾರನೂ ಇದಕ್ಕೆ ಅಣಿಯಾಗಿರಬೇಕಾ-

ಕಾಗುತ್ತದೆ. ಪ್ರಭಾವಯುಕ್ತವಾಗಬೇಕೆಂದು ಒಬ್ಬಾತ, "ಕೆಲಕಾಲ ಹಿಂದೆ ನನ್ನ ತಂದೆಗೆ ವಿಚಿತ್ರ ಅನುಭವವೊಂದು ಬಂತು" ಎಂದು ಸುರು ಮಾಡುತ್ತಾನೆ. ಜನಜಂಗುಳಿಯಲ್ಲೊಬ್ಬ, "ನನ್ನ ಅಪ್ಪನಿಗೂ ಹಾಗೇ ಆಗಿತ್ತೋ ಮಹಾರಾಯಾ" ಎಂದು ಚಾಟೂಕ್ತಿಯನ್ನಾಡುತ್ತಾನೆ. ಆದರೆ ಭಾಷಣಕಾರ ಸೇರಿಗೆ ಸವ್ವಾಸೇರಾಗಿ, "ಬಹಳ ಸಂತೋಷ, ಅಂತೂ ನನ್ನ ತಂದೆಗೂ ನಿನ್ನ ತಂದೆಗೂ ಇದೊಂದಾದರೂ ಸಾಮ್ಯ ಇದೆಯೆಂದಾಯಿತು!" ಎನ್ನುತ್ತಾನೆ. ಜನ ಗೊಳ್ಳೆಂದು ನಗುತ್ತದೆ. ಕೆಲವೇಳೆ ಈ ವಾಗ್ಬಾಣ ಭಾಷಣಕಾರ ಶ್ರೋತೃಗಳ ನಡುವಣದಾಗುಳಿಯದೆ ಶ್ರೋತೃ-ಶ್ರೋತೃಗಳ ನಡುವಣ ತರ್ಕವಿತರ್ಕವಾಗಿ ರೂಪಾಂತರ ಹೊಂದುವುದುಂಟು. ಆಗ ತಲೆಗಳು ಬಿಸಿಯೇರುತ್ತವೆ. ಕಣ್ಣುಗಳು ಕೆಂಪಾಗುತ್ತವೆ. ಆದರೆ ತಲೆಗಳು ಒಡೆಯುವುದಿಲ್ಲ ಎಂಬುದು ಹೈಡ್‌ಪಾರ್ಕ್ ಪರಂಪರೆಯಿಂದ ಬ್ರಿಟಿಶರು ಬೆಳೆಸಿಕೊಂಡು ಬಂದ ಸಹನೆಯ ಪರಿಣಾಮ.

ಹೈಡ್ ಪಾರ್ಕಿನ ಈ ಮಾತಿನ ಮಂಟಪದಲ್ಲಿ ಶ್ರೋತೃಗಳಾದರೂ ಯಾರು? ಯಾವಾಗಲೂ ನಾನಾ ವರ್ಣವೈಶಿಷ್ಟ್ಯಗಳ ವಿದೇಶೀಯರಂತೂ ಇದ್ದೇ ಇರುತ್ತಾರೆ. ಗಾಂಧೀ ಟೊಪ್ಪಿಗೆಯ ಭಾರತೀಯ, ಸೀರೆಯುಟ್ಟ ಅವನ ಹೆಂಡತಿ, ಅಮೇರಿಕದ ತರುಣಿಯರು; ತಮಾಷೆ ನೋಡ ಬಂದ ನಿರುದ್ಯೋಗಿಗಳು. ವ್ಯಾಪಾರಿಗಳು, ಕಾರಕೂನರು, ಹೊಲಸಂಗಿಯಲ್ಲೆ ಇರುವ ಕೂಲಿಕಾರರು, ಪೇಟೆಯಿಂದ ಮರಳುತ್ತಿರುವ ಗೃಹಿಣಿಯರು; ತಮ್ಮ ನಾಲಿಗೆಯನ್ನು ಹರಿಬಿಡಲು ಮತ್ತು ತಮ್ಮ ವಾಗ್ಬಾಣಗಳ ಕೌಶಲ ತೋರಿಸಲು ಬರುವವರು; ಹೊಸ ವಿಚಾರಗಳನ್ನು ತಿಳಿದುಕೊಳ್ಳಲು ಬಯಸುವವರು ಮತ್ತು ತತ್ವಜ್ಞಾನದ ಪರುಷಶಿಲೆಯ ಆರಾಧಕರು.

ಇಂಥ ವಾಕ್‌ಸ್ವಾತಂತ್ರ್ಯ ಪ್ರದರ್ಶನದ ಫಲವಾದರೂ ಏನು? ಬಿಸಿ ವಿಚಾರಗಳಿಗೆ ತಮ್ಮ ಹೃದಯಗಳನ್ನು ಮದ್ದಿನ ಮನೆಯಾಗಿ ಮಾಡಿಕೊಂಡ ಕ್ರಾಂತಿಕಾರರು ಇಲ್ಲಿ ತಮ್ಮೊಡಲೊಳಗಿನ ಉರಿಯನ್ನು ಕಾರಿ ಹೈಡ್ ಪಾರ್ಕಿನ ಪ್ಲೇನ್ ವೃಕ್ಷಗಳ ಸಂಜೆಯ ಗಾಳಿಯಲ್ಲಿ ತಣ್ಣಗಾಗುತ್ತಾರೆ. ಕೇಳುವವರಿಗೆ ಮೋಜೆನಿಸುತ್ತದೆ; ಹಲ ಕೆಲವು ಹೊಸ ವಿಚಾರಗಳ ಕಿಡಿಗಳೂ ಸೌಮ್ಯರೂಪದಲ್ಲಿ ದೊರೆಯುತ್ತವೆ. ಭಾಷಣಕಲೆಗೆ ತರಬೇತಿಯಾಗುತ್ತದೆ. ಶುದ್ಧ ಅಶ್ಲೀಲ ಮಾತುಗಳನ್ನು ಬಿಟ್ಟು ಮತ್ತೆ ಏನನ್ನೂ ಇಲ್ಲಿ ಮಾತಾಡಬಹುದಾದ್ದರಿಂದ ಯಾರಿಗೂ ಉಗ್ರ ವಿಷಯಗಳನ್ನು ಪ್ರತಿಪಾದಿಸಲು ಗುಪ್ತ ಸಭೆಗಳನ್ನು ಸೇರಿಸಿ ಹಂಚಿಕೆಗಳನ್ನು ಮಾಡಬೇಕಾಗುವುದಿಲ್ಲ. ಇಂಗ್ಲಂಡಿನಲ್ಲಿ ಹಿಂಸಾತ್ಮಕ ಕ್ರಾಂತಿ ಏಕಾಗುವುದಿಲ್ಲವೆಂಬುದಕ್ಕೆ ಹೈಡ್ ಪಾರ್ಕೂ ಒಂದು ಕಾರಣವಾಗಿರಬಹುದು.

ಇದು ೧೮೬೬ ರಿಂದಲೂ ನಡೆದುಬಂದಿದೆ. ಆ ವರ್ಷ ಸುಧಾರಣಾ ಪಕ್ಷದವರು ಭಾಷಣ ಮಾಡಲು ಇಲ್ಲಿ ಸಭೆ ಸೇರಿಸಬೇಕೆಂದಾಗ ಪೋಲೀಸರು ಪ್ರತಿಬಂಧ ಮಾಡಿದರು. ಭಾಷಣಕಾರರು ತೆಪ್ಪಗೆ ಬೇರೆಡೆ ಹೊರಟು ಹೋದರೂ ರೊಚ್ಚಿಗೆದ್ದ ಜನಜಂಗುಳಿ ಎರಡು ದಿನ ಬಿಟ್ಟೂ ಬಿಡದೆ ಇಲ್ಲಿ ಹಿಂಸಾಮಯ ಗಲಭೆ ನಡೆಸಿತು. ಫಲವಾಗಿ ಸರಕಾರ ಇಲ್ಲಿ ೪೦ ಗಜದೊಳಗೆ ಭಾಷಣ ಸ್ವಾತಂತ್ರ್ಯವನ್ನು ಸಾರಿತು. ವರ್ಷ ಕಳೆದಂತೆ ಆ ಸ್ವಾತಂತ್ರ್ಯ ವಿಸ್ತರಿಸುತ್ತಲೇ ಇದೆ.

ಹೀಗಾಗಿ ಹೈಡ್ ಪಾರ್ಕಿನ ಭಾಷಣಕಾರರ ಮೂಲೆ "ನೀನು ಹೇಳುವುದನ್ನು ನಾನು ನಿರಾಕರಿಸುತ್ತೇನೆ. ಆದರೆ ಅದನ್ನು ಹೇಳುವ ನಿನ್ನ ಹಕ್ಕನ್ನು ರಕ್ಷಿಸಲು ಪ್ರಾಣಪಣದಿಂದ ಹೋರಾಡುತ್ತೇನೆ" ಎಂಬ ಆದರ್ಶದ ಗುಡಿಯಾಗಿದೆ. *



ಆ ನದಿಯ ದಡದಲ್ಲಿ, ನೀರಲ ಪೇರಲ ಮರಗಳ ನೆರಳಿನಲ್ಲಿ ಒಬ್ಬ ಒಕ್ಕಲಿಗ ಯುವಕ ಕುಳಿತುಕೊಂಡು, ಮೌನದಿಂದ ಹರಿವ ನೀರನ್ನೇ ನಿಟ್ಟಿಸುತ್ತಿದ್ದ. ಪ್ರೇಮದುಸಿರೇ ಕುಸುರುತ್ತಲಿರುವ ನೆಲ ಹೊಲಗಳ ಮಧ್ಯೆ ಬೆಳೆದು ಬಂದ ಹರೆಯದ ಯುವಕನವ. ಅಲ್ಲಿ ಟೊಂಗೆಗಳು ಒಂದನ್ನೊಂದು ಅಪ್ಪಿಕೊಳ್ಳುತ್ತಿದ್ದವು; ಹೂಗಳು ಒಂದಕ್ಕೊಂದು ಮುದ್ದಿಡುತ್ತಿದ್ದವು. ಹಕ್ಕಿಗಳು ರಮಿಸುತ್ತಿದ್ದವು ; ಅಲ್ಲಿ ನಿಸರ್ಗವೇ ಪ್ರತಿಯೊಂದರಲ್ಲಿಯೂ ಚೈತನ್ಯಗೀತವನ್ನು ಉಲಿದು-ಹೃದಯಗಳ ಮಧ್ಯೆ ತೂಗುತ್ತಿರುತ್ತಾನೆ.

ಆ ಯುವಕ ಕಣ್ಣೆತ್ತಿ ನೋಡಿದ. ಸುರೇಪಾನದಾಚೆಗೆ ಘನ ನೀಲವು ಹಬ್ಬುತ್ತಿರುವುದನ್ನು ಕಂಡ; ಮಯೂರ ಮಯೂರಿಯನ್ನು ಕೂಗುತ್ತಿರುವುದನ್ನು ಕೇಳಿದ. ತನ್ನ ಒಂಟಿತನ, ಏಕಾಂತಗಳನ್ನು ನೆನಸಿ ಅತ್ತ. ತನ್ನ ನಲ್ಮೆಯ ಆ ಗಳಿಗೆಗಳೆಲ್ಲ, ನಿಶಾಚರ ರೂಪ ಧರಿಸಿ, ಮೆರವಣಿಗೆಯಂತೆ ತನ್ನೆದುರು ಹಾದು ಹೋಗುತ್ತಿರುವುದನ್ನು ಈಕ್ಷಿಸಿದ. ಬಳಿಕ ಪ್ರೇಮಭರದಿಂದ ಕಂಬನಿದುಂಬಿ ಗದ್ಗದ ಸ್ವರದಿಂದ ನುಡಿದ:

ಒಂದು ಮೋಹಕ ಭಾವಕಥೆ

# ಪ್ರೇಮ — ಮರಣ

( ಖಲೀಲ್ ಜಿಬ್ರಾನನನ್ನನುಸರಿಸಿ )

ಬರೆದವರು : **ದೇವದತ್ತ**

ಲಿದು ಕಲಿಸುತ್ತಿತ್ತು.

ಇಪ್ಪತ್ತರ ಯುವಕನವ. ಮುನ್ನಾದಿನದ ಸಂಜೆ, ಆ ಬುಗ್ಗೆಯ ಬಳಿ ಹಲವು ಹೆಂಗಳೆಯರೊಡನೆ ಕುಳಿತ 'ಆಕೆ'ಯನ್ನು ನೋಡಿದ್ದ. ಆಕೆಯನ್ನು ಪ್ರೇಮಿಸಿದ್ದ. ಆದರೆ ಆಕೆ ರಾಜಪುತ್ರಿ ಎಂಬುದನ್ನು ಕೇಳಿ ತಿಳಿದು ತನ್ನನ್ನೇ ತಾನು ದೂಷಿಸಿಕೊಂಡ; ಶಪಿಸಿಕೊಂಡ. ಆದರೂ ಆ ದೂಷಣೆ ಅವನ ಹೃದಯದಾಳದ ಪ್ರೇಮವನ್ನು ಹೊರದೂಡಲಿಲ್ಲ ; ನಿಜದಿಂದ ಚೇತನವನ್ನು ಹೊರಹೊರಡಿಸಲಿಲ್ಲ. ಏಕೆನೆ, ತೆಂಕಣ-ಬಡಗಣ ಗಾಳಿಗಳ ನಡುವೆ ತೂಗಾಡುತ್ತಿರುವ ಕೋಮಲ ಟೊಂಗೆಯಂತೆ ಮಾನವನು ತನ್ನ ಆತ್ಮ ಮತ್ತು

"ಹೀಗೇ ಪ್ರೇಮವು ನನ್ನನ್ನು ಅಣಕಿಸಿ, ಚೇಷ್ಟೆ ಮಾಡಿ ಆಶೆಯು ತಪ್ಪನ್ನೆಣಿಸುವಲ್ಲಿಗೊಯ್ದು, ನನ್ನ ಆಕಾಂಕ್ಷೆಯನ್ನು ಹೀಗಳೆಯುತ್ತದೆ. ನಾನು ಭಜಿಸಿದ ಪ್ರೇಮವು ನನ್ನ ಹೃದಯವನ್ನು ಒಬ್ಬ ರಾಜಪುತ್ರನ ಅರಮನೆಗೇರಿಸಿ ನನ್ನನ್ನು ಮಾತ್ರ ಒಬ್ಬ ಒಕ್ಕಲಿಗನ ಗುಡಿಸಲಿನಲ್ಲಿಳಿಸಿದೆ. ನನ್ನ ಆತ್ಮವನ್ನು ಮಾನವರು ಕಾವಲಿದ್ದ ಹಾಗೂ ಮಾನದಿಂದ ರಕ್ಷಿಸಲ್ಪಟ್ಟ ಸ್ವರ್ಗೀಯ ಸುರ ಸುಂದರಿಯೆಡೆಗೆ ಕರೆದೊಯ್ದಿದೆ.

"ಓ ನಲ್ಲೇ, ನಾನು ಆಜ್ಞಾಧಾರಕನಾಗಿದ್ದೇನೆ; ಬಳಿಕ ನಿನಗಿನ್ನೇನು ಬೇಕು? ನಾನು ನಿನ್ನ ಅಗ್ನಿ ಪಥವನ್ನು ತುಳಿದಿದ್ದೇನೆ; ಅಂತೇ ನಾನು ಉರಿ

ಯಲ್ಲಿ ಕರಗಿ ಹೋಗಿದ್ದೇನೆ. ನಾನು ಕಣ್ದೆರೆದಿದ್ದೇನೆ; ಆದರೆ ಕಗ್ಗತ್ತಲನ್ನುಳಿದು ಏನೂ ಕಾಣಿಸದು. ಬಾಯಿ ತೆರೆದು ಬಿಟ್ಟಿದ್ದೇನೆ; ಆದರೆ ದುಃಖೋದ್ಗಾರಗಳ ಹೊರತು ಮಾತೇ ಬಾರದು. ಓ ನಲ್ಲೆ, ಲವಲವಿಕೆ ನನ್ನನ್ನು ಆತ್ಮದಾಹದಿಂದ ಮುತ್ತಿಬಿಟ್ಟಿದೆ. ನಲ್ಲೆಯ ಮುತ್ತೊಂದನ್ನುಳಿದು ಏತರಿಂದಲೂ ಈ ದಾಹವಡಗದು. ನಲ್ಲೇ, ನಾನು ಹತಬಲನಾಗಿ ಬಿಟ್ಟಿರುವೆ; ಬಲವಂತಳಾದ ನೀನು ಎಲ್ಲಿಯತನ ನನ್ನೊಡನೆ ಈ ಸೆಣೆಸಾಟ ನಡೆಸುವಿ? ನ್ಯಾಯವಂತಳಾದ ನೀನು ಎಲ್ಲಿಯತನ ನನ್ನನ್ನು ಹತ್ತಿಕ್ಕಿಡುವಿ? ನೀನೇ ನನ್ನ ಅಸ್ತಿತ್ವವಾಗಿದ್ದೂ ಎಲ್ಲಿಯತನ ನನ್ನನ್ನು ತ್ಯಜಿಸುವಿ?

"ನಿನ್ನ ಬಯಕೆಯೊಂದನ್ನುಳಿದು ನನ್ನ ನೆತ್ತರವೇನಾದರೂ ಚಲಿಸುತ್ತಿದ್ದರೆ, ಅದನ್ನು ಹೊರಹರಿಯಬಿಡು. ನಿನ್ನ ಪಥವನ್ನುಳಿದು, ನನ್ನ ಚರಣಗಳೇನಾದರೂ ಹೆಜ್ಜೆಯಿಟ್ಟಿದ್ದರೆ, ಅವನ್ನು ಉಡುಗಿಸಿ ಬಿಡು. ಈ ಮೈಯಲ್ಲಿ ನೀನು ಮನಬಂದುದೆಲ್ಲವನ್ನೂ ಗೈ. ಆದರೆ ನನ್ನಾತ್ಮವು ಈ ಹೊಲ-ಗದ್ದೆ ಬಯಲಲ್ಲಿ, ನಿನ್ನ ರೆಕ್ಕೆ ನೆರಳಿನಲ್ಲಿ ಸುರಕ್ಷಿತವಾಗಿರಲಿ.

"ಸವಿತೆಯು ತನ್ನ ಪ್ರಿಯತಮನಾದ ಸಾಗರದೆಡೆಗೆ ನಡೆದಿದೆ. ಅದರ ಲಜ್ಜೆಗೆಂಪನ್ನು ಕಂಡು, ಹೂ ನಗುತಲಿದೆ. ಅದು ಬಯಸಿದ ಮುಗಿಲು ಅದರ ಕೊಳ್ಳದಲ್ಲಿ ಇಳಿದು ಬರುತ್ತಿದೆ. ಆದರೆ ಈ ಸವಿತೆಗೂ ಗೊತ್ತಿರದ, ಈ ಹೂವೆಂದೂ ಕೇಳದ, ಈ ಮುಗಿಲೆಂದೂ ತಿಳಿಯದ, ಒಂದು ನನ್ನಲ್ಲಿದೆ. ಓ ಪ್ರೇಮವೇ ಅವಳ ಅರಮನೆಯಲ್ಲಿ ಆಳಾಗದೆ, ಅವಳ ತಂದೆಯ ಸೈನ್ಯದಲ್ಲಿ ಸಿಪಾಯಿಯಾಗದೆ, ದೂರವೇ ಉಳಿದ, ಅನುರಾಗ ವಿರಹಿ, ಪ್ರೇಮದೇಕಾಕಿ ಆದ ನನ್ನನ್ನು ಕಣ್ಣೆತ್ತಿ ನೋಡು."

ಹೊಳೆ ಹಳ್ಳಗಳ ಜುಳು ಜುಳು ನಿನದದಿಂದ, ಟೊಂಗೆ, ಎಲೆಗಳ ಮರ್ಮರ ನಿನಾದದಿಂದ, ಮಾತು ಕಲಿಯಲೇನೋ ಎಂಬಂತೆ ಕೆಲ ವೇಳೆ ಸ್ತಬ್ಧನಾಗಿದ್ದು ಬಳಿಕ ಆ ಯುವಕ ನುಡಿದ :

"ಓ ನೀನೇ, ನಿನ್ನ ಹೆಸರುಸಿರಲು ನಾನು ಹೆದರುವೆ, ಸಾಮ್ರಾಟ ಭಿತ್ತಿಗಳ ಅಧಿಕಾರ ಹೊದಿಕೆಗಳ ಹಿಂದೆ, ನನಗೆ ಕಾಣದಂತೆ ಅಡಗಿಕೊಂಡವಳೇ ನೀನು! ಎಲ್ಲಿ ಎಲ್ಲರೂ ಸರಿಸಮರೋ, ಅಂಥ ನಿತ್ಯಲೋಕವನ್ನುಳಿದು ನಿನ್ನಲ್ಲಿ ಲೋಲುಪ್ತನಾಗಲು ನನಗೆ ಭಯ ಬರುವಂಥ ಪರಲೋಕದ ಪ್ರಾಣವೇ ನೀನು. ಯಾರೆದುರು ಅಧಿಕಾರವೇ ಆಜ್ಞಾಧಾರಕವಾಗಿರುವುದೋ, ಮುಖ್ಯಸ್ಥರೇ ತಲೆವಾಗಿಸುತ್ತಿರುವರೋ ಅರ್ಥಾಗಾರವೇ ತೆರೆದಿರುವುದೋ ಅಂಥವಳೇ ನೀನು.

"ಪ್ರೇಮದಿಂದ ಪರಿಶುದ್ಧವಾದ ಹೃದಯವನ್ನು ಪಡೆದವಳೇ ನೀನು. ದೇವ ದೇವನಿಂದ ಪುನೀತವಾದ ಆತ್ಮವನ್ನು ಪಡೆದಿರುವವಳೇ ನೀನು. ನಿಸರ್ಗದತ್ತ ಸ್ವಚ್ಛಂದದೊಡನೆ ಸ್ವತಂತ್ರವಾದ ಮನವನ್ನು ಸೆರೆಗೊಳಿಸಿದವಳೇ ನೀನು. ಇಂದು ಆ ಮನವೇ ಅವಿಃಷದ ಸೆರೆಯಾಳಾಗಿದೆ.

"ಓ ಚೆಲುವಿನ ಚೆಲುವೆಯೇ, ನಿನ್ನನ್ನು ನಾನು ಕಂಡಿರುವೆ. ಅಂತೇ ನಾನೀ ಜಗತ್ತಿನಲ್ಲಿ ಬಂದುದರ ಕಾರಣವನ್ನೂ ಕಂಡಿರುವೆ. ನಿನ್ನ ಉನ್ನತೋನ್ನತ ಸ್ಥಿತಿಯನ್ನೂ, ನನ್ನ ದೀನದೈನ್ಯತೆಯನ್ನೂ ಕಂಡಾಗ, ಮಾನವನಿಗೆ ಗೊತ್ತಿರದ ಗುಪಿತವನ್ನು ದೇವರು ಧರಿಸಿರುವನೆಂಬದನ್ನೂ ಮಾನವೀ ಕಟ್ಟುನಿಟ್ಟುಗಳನ್ನುಳಿದು ಪ್ರೇಮದ ದಾರಿಯಲ್ಲಿ ಆತ್ಮಗಳನ್ನು ಅವನು ನಡೆಸುತ್ತಿರುವ ರೀತಿಯನ್ನೂ ನಾನು ತಿಳಿದುಕೊಂಡೆ. ನಾನು ನಿನ್ನ ಕಣ್ಣುಗಳಲ್ಲಿ ಕಣ್ಣಿಟ್ಟು ನಿಟ್ಟಿಸಿದಾಗ ಮಾನವೀ ಹೃದಯವೇ ಯಾರ ದ್ವಾರವಾಗಿರುವುದೋ ಅಂಥವರಿಗೆ ಈ ಜೀವನವೇ ಒಂದು ಸ್ವರ್ಗತುಲ್ಯವೆಂದು ನಿಃಸಂಶಯವಾಗಿ ಕಂಡು ಬಂತು.

"ನಿನ್ನ ಮಹೋನ್ನತಿಯನ್ನೂ ಹೋರಾಟದಲ್ಲಿ

ಸಿಕ್ಕು ಬಿದ್ದ ನನ್ನ ನಿಮ್ನತೆಯನ್ನೂ ನಾನು ನೋಡಿರುವೆ. ಅಂತೇ ಈ ಜಗತ್ತಿನಲ್ಲಿ ನನಗೆ ವಿಶ್ರಾಂತಿ ಸ್ಥಾನವಿಲ್ಲವೆಂಬುದನ್ನು ನಾನು ಕಂಡು ಕೊಂಡಿರುವೆ. ವಿಧ ವಿಧದ ಹೂಗಳ ರಾಶಿಯಲ್ಲಿಯ ಗುಲಾಬಿಯಂತೆ ನೀನು, ನಿನ್ನ ವನಿತಾ ವಿತಾನದೊಡನೆ ಕುಳಿತಿರುವುದನ್ನು ಕಂಡಾಗ, ನನ್ನ ಕನಸಿನ ಕನ್ಯೆಯೇ ಮೈವೆತ್ತು ನನ್ನಂತೆಯೇ ದೇಹಧಾರಿಯಾಗಿರುವಳೆಂದು ನನಗನಿಸಿತು. ಆದರೆ ನಿನ್ನ ತಂದೆಯ ಭವ್ಯ ವೈಭವಗಳನ್ನು ನೆನೆದಾಗ ಈ ಗುಲಾಬಿಯ ಹಿಂದೆ ಬೆರಳುಗಳನ್ನು ತರಿದುಕೊಳ್ಳುವ ಮುಳ್ಳುಗಳಿರುವವೆಂಬದನ್ನು ತಿಳಿದುಕೊಂಡೆ. ಕನಸಿನಲ್ಲಿ ಕೂಡಿದ್ದನ್ನು ಎಚ್ಚರವು ಅಗಲಿಸಿತು . . . . "

ಹೀಗೆನ್ನುತ್ತ, ಆತ್ಮಹತನಾಗಿ, ಭಗ್ನ ಹೃದಯಿಯಾಗಿ, ಆ ಯುವಕ ಎದ್ದು ಬುಗ್ಗೆಯೆಡೆಗೆ ನಡೆದ. ಅವನಲ್ಲಿ ತುಂಬಿಕೊಂಡ ದುಃಖ ನಿರಾಶೆಗಳು ಹೀಗೆ ನುಡಿದವು :

" ಬಂದು ಬಿಡು, ಓ ಮರಣವೇ, ಬಂದೆನ್ನ ಮುಕ್ತಗೊಳಿಸು. ಎಲ್ಲಿ ಮುಳ್ಳುಗಳೇ ಹೂವನ್ನು ಹಿಸಿಕಿ ಬಿಡುತ್ತಿರುವವೋ ಅಂಥ ಈ ಭೂಮಿ ವಾಸಯೋಗ್ಯವಾಗಿಲ್ಲ. ಪ್ರೇಮವನ್ನು ಅದರ ವೈಭವದಾಣದಿಂದ ಬಲಾತ್ಕಾರ ಮಾಡಿ ಇಳಿಸಿ ಐಹಿಕ ಅಧಿಕಾರವನ್ನು ಅದರ ತಾಣದಲ್ಲಿ ಕೂರಿಸುವ ಈ ದಿನ ಮಾನದಿಂದ ಮುಕ್ತಗೊಳಿಸೆನ್ನ, ಓ ಮೃತ್ಯುವೇ ಎದ್ದು ಬಾ ; ಮುಕ್ತಿಗೊಳಿಸೆನ್ನ ಓ ಮೃತ್ಯುವೇ ! ಪ್ರೇಮಿಗಳ ಅಗ್ನಿ ದಿವ್ಯದಂತಿದ್ದ ಲೋಕಕ್ಕಿಂತ ಪರಲೋಕವೇ ಮಧುರತರವಾಗಿದೆ. ಅಲ್ಲಿ ನಾನು ನನ್ನ ಪ್ರಿಯತಮೆಗಾಗಿ ಕಾಯುವೆ; ಅಲ್ಲಿ ನಾನು ಅವಳೊಡನೆ ಕೂಡುವೆ, ಸಮರಸನಾಗುವೆ."

ಈಗವನು ಬುಗ್ಗೆಯೆಡೆಗೆ ಬಂದು ತಲುಪಿದ. ಸಂಜೆ ಸಮೀಪಿಸಿತ್ತು. ರವಿಯ ಹೊಂಗಿರಣಗಳು ಅಲ್ಲಿಯ ನೆಲಹೊಲಗಳಿಗೆಲ್ಲ ಹೊನ್ನುಡಿಗೆ ತೊಡಿಸಿದ್ದವು. ರಾಜಕುಮಾರಿಯ ಹೆಜ್ಜೆಯ ಜಾಡಿದ್ದ ಆ ತಾಣದಲ್ಲಿ ಕುಳಿತು ಅವನು ಕಂಬನಿ ಸುರಿಸಿದ. ಪ್ರಾಣೋತ್ಕ್ರಮಣವನ್ನು ತಡೆಯ ಬಯಸಿದೆಯೇನೋ ಎಂಬಂತೆ ಅವನ ತಲೆ ಅವನ ಎದೆಯ ಮೇಲೆ ಮುಂಬಾಗಿ ವಾಲಿತು.

ಅದೇ ಕ್ಷಣಕ್ಕೆ, ತನ್ನ ಉಡುಪನ್ನು ಹುಲ್ಲು ನೆಲದಮೇಲೆ ಎಳೆದುಕೊಳ್ಳುತ್ತ ಒಬ್ಬ ವನಿತೆ ಮರವ ಮರೆಯಿಂದ ಬರುತ್ತಿರುವುದು ಕಾಣಿಸಿತು ಅವಳು ಆ ಯುವಕನೆಡೆಗೆ ಬಂದು ತಲೆಯ ಮೇಲೆ ಮೃದುವಾಗಿ ಕೈಯಾಡಿಸಿದಳು. ಸೂರ್ಯೋದಯ ಸಮಯದಲ್ಲಿ ನಿದ್ದೆ ತಿಳಿದೆದ್ದವರಂತೆ ಅವನು ಆಕೆಯೆಡೆಗೆ ನೋಡಿದ. ಆ, ಆ ರಾಜಪುತ್ರಿಯೇ ತನ್ನೆದುರು ನಿಂತಿರುವುದನ್ನು ಕಂಡ ; ಕೂಡಲೆ ದೇವಿಗೆ ತಲೆವಾಗುವ ಭಕ್ತನಂತೆ ಅವಳೆದುರು ಮೊಳಕಾಲೂರಿ ಮಣಿದು ತಲೆವಾಗಿದ. ಅವನು ಮಾತನಾಡಲೆಂದು ಬಾಯ್ದೆರೆದ; ಆದರೆ ಬಾಯಿಯಿಂದ ಶಬ್ದಗಳೇ ಬಾರದಾದವು. ಅವನ ಕಂಬನಿದುಂಬಿದ ಕಂಗಳೇ ಅವನ ನಾಲಗೆಯ ಕಾರ್ಯ ಮಾಡಿದವು. ಕೂಡಲೆ ಆ ಹುಡುಗಿ ಅವನನ್ನು ಭರದಿಂದ ಅಪ್ಪಿದಳು, ಅವನ ಮುಖವನ್ನು ಮುದ್ದಿಸಿದಳು, ಬಿಸಿ ಬಿಸಿ ಕಂಬನಿದುಂಬಿದ ಕಂಗಳನ್ನು ಮುದ್ದಿಸಿದಳು. ಆ ಬಳಿಕ ಆಕೆ ತನ್ನ ಕೊಳಲಿನಿಂಚರದ ಸವಿದನಿಯಿಂದ ಹೀಗೆ ಉಲಿದಳು :

" ಓ ನನ್ನ ಪ್ರಿಯತಮಾ. ನನ್ನ ಕನಸಿನಲ್ಲಿ ನಾ ನಿನ್ನ ನೋಡಿರುವೆ. ನನ್ನ ಏಕಾಕಿತೆಯಲ್ಲಿ ನಿನ್ನ ಮುಖವನ್ನೂ ಕಂಡಿರುವೆ. ನಾನು ಕಳೆದುಕೊಂಡಿದ್ದ ನನ್ನ ಆತ್ಮಸಂಗಾತಿಯೇ ನೀನು. ನಾನೀ ಲೋಕಕ್ಕೆ ಬರುವಾಗ ನನ್ನಿಂದ ಅಗಲಿಸಲಾದ ನನ್ನ ಸರ್ವಾಂಗ ಸುಂದರ ಅರ್ಧಾಂಗವೇ ನೀನು ! ನಿನ್ನನ್ನು ಕಾಣಲೆಂದೇ ನಾನೀಗ ಮುಚ್ಚುಮರೆಯಿಂದ ಕದ್ದು ಬಂದಿರುವೆ. ನನ್ನ ಪ್ರಿಯತಮಾ ! ಈಗ ನನ್ನ ತೋಳುಗಳಲ್ಲಿ ನಿನ್ನನ್ನು ಕೊಳ್ಳುವೆ. ಭಯಪಡದಿರು. ಏಕೆನೆ ಈ ಲೋಕದ ಕೊನೆಯಂಚಿನ ವರೆಗೂ ನಿನ್ನೊ

ಡನೆ ಅನುಸರಿಸಲೆಂದು, ಜನ್ಮ ಮರಣಗಳ ಪಾತ್ರೆಯಿಂದ ಜೀವನ ಪೇಯವನ್ನು ನಿನ್ನೊಡನೆ ಕುಡಿಯಲೆಂದು, ನಾನು ನನ್ನ ತಂದೆಯ ಘನತೆ ಗೌರವಗಳನ್ನೆಲ್ಲ ತೊರೆದು ಬಂದುಬಿಟ್ಟಿರುವೆ.

"ಎದ್ದೇಳು ನನ್ನ ನಲ್ಲ, ನನ್ನ ಜೀವ ಜೀವವೇ, ನಡೆ; ನಾವೀ ಮಾನವ ಲೋಕವನ್ನೇ ತ್ಯಜಿಸಿ, ದೂರದ ದೇವಲೋಕಕ್ಕೆ ಹೊರಟು ಬಿಡೋಣ . . . ."

* * *

ಆ ರಾಜ್ಯದ ಕಡೆಯುಕ್ಕಡದಲ್ಲಿ, ರಾಜದೂತರು, ಎರಡು ಮೃತ ಶರೀರಗಳು ಬಿದ್ದಿರುವುದನ್ನು ಕಂಡರು. ಅವುಗಳಲ್ಲಿಯ ಒಂದರ ಕೊರಳಲ್ಲಿ ಚಿನ್ನದ ಪದಕದ ರತ್ನಹಾರವಿತ್ತು. ಆ ದೇಹಗಳ ಬಳಿಯೇ ಒಂದು ಅಗಲವಾದ ಕಲ್ಲು ಇದ್ದು ಅದರ ಮೇಲೆ ಹೀಗೆ ಬರೆದಿತ್ತು:—

" ಪ್ರೇಮವೇ ನಮ್ಮನ್ನು ಕೂಡಿಸಿದೆ; ಅಂದ
ಬಳಿಕ ನಮ್ಮನ್ನು ಬೇರ್ಪಡಿಸುವರಾರು ?
ಮರಣವೇ ನಮ್ಮನ್ನೊಯ್ದಿದೆ; ಈಗ
ನಮ್ಮನ್ನು ಮರಳಿ ಕರೆತರುವವರಾರು ? "*



ನಮ್ಮ ಊರಿನ ಪ್ರಸಿದ್ಧ ಕ್ರೀಡಾಪಟುಗಳಾದ ಗೋವಿಂದರಾಜರು ಒಂದು ದಿನ ತಮ್ಮ ಮಿತ್ರರುಗಳೊಡನೆ ಮಾತನಾಡುತ್ತಿರುವ ಸಮಯದಲ್ಲಿ ತಮ್ಮ ಮಗನಿಗೆ ತಾವು ಕುಸ್ತಿ ಕಲಿಸುತ್ತಿರುವ ವಿಷಯವನ್ನು ಬಹಿರಂಗ ಪಡಿಸಿದರು. "ಇಂದು ಜಗತ್ತು ತುಂಬಾ ಕಳ್ಳ-ಕಾಕರುಗಳಿಂದ ತುಂಬಿಕೊಂಡಿರುವುದರಿಂದ ಪ್ರತಿಯೊಬ್ಬನೂ ಅವಶ್ಯವಾಗಿ ಹೋರಾಡಲು ಕಲಿತುಕೊಳ್ಳಬೇಕೆಂದು" ಒಂದು ಸರಿಯಾದ ಭಾಷಣವನ್ನೇ ಕುಟ್ಟಿದರು.

ಇದನ್ನು ಕೇಳುತ್ತಾ ಇದ್ದ ಮಿತ್ರರೊಬ್ಬರು ತಮ್ಮ ಸಂದೇಹವನ್ನು ವ್ಯಕ್ತಪಡಿಸಿದರು. "ಒಂದು ವೇಳೆ ನಿಮ್ಮ ಮಗನಿಗಿಂತ ಬಲಶಾಲಿಯಾದ ವ್ಯಕ್ತಿಯೊಬ್ಬ ಎದುರಾಗಿ ಹೋರಾಟಕ್ಕೆ ನಿಂತರೆ ನಿಮ್ಮ ಮಗ ಆಗ ಏನು ಮಾಡಲು ಸಾಧ್ಯ ? "

"ಹುಂ! ಹೌದು! ಆದರೆ ನಾನು ನನ್ನ ಮಗನಿಗೆ ವೇಗವಾಗಿ ಓಡಲೂ ಕಲಿಸಿದ್ದೇನೆ" ಎಂದು ಗೋವಿಂದರಾಜ್ ಉದ್ಗರಿಸಿದರು.

—ಬಿ. ಸಚ್ಚಿದಾನಂದ ಹೆಗಡೆ

ಲೋಕವಿಖ್ಯಾತವಾದ

# ಲೊಮಾ

ಮಾರಾಟ[illegible] ಏರುತ್ತಾ
ಹೊಸ ಶಿಖರವನ್ನು ಮುಟ್ಟಿದೆ!





ಉತ್ಕೃಷ್ಟ ತಯಾರಿಕೆಯನ್ನು ಬಯಸುವ ಪ್ರತಿಯೊಬ್ಬರೂ 'ಲೊಮಾ'ವನ್ನೇ ಕೊಂಡು ಕೊಳ್ಳುತ್ತಾರೆ. ದಿನದಿಂದ ದಿನಕ್ಕೆ ಏರುತ್ತಿರುವ 'ಲೊಮಾ'ದ ಮಾರಾಟವೇ ಇದರ ನಿದರ್ಶನವಾಗಿರುತ್ತದೆ. ಇದೀಗ ಅಂತರ್ರಾಷ್ಟ್ರೀಯ ತಯಾರಿಕೆಯಾಗಿ ಪರಿಗಣಿಸಲ್ಪಟ್ಟು ಜಗತ್ತಿನ ಎಲ್ಲಾ ಭಾಗಗಳಿಗೂ ರಫ್ತುಗೈಯ್ಯಲ್ಪಡುತ್ತದೆ. ಈ ರೀತಿ 'ಲೊಮಾ' ಅಮೂಲ್ಯವಾದ ವಿದೇಶೀ ಹಣವನ್ನು ಸಂಪಾದಿಸುತ್ತದೆ ಮಾತ್ರವಲ್ಲದೆ ಅಂತರ್ರಾಷ್ಟ್ರೀಯ ವ್ಯಾಪಾರ ಕ್ಷೇತ್ರದಲ್ಲಿ ಭಾರತದ ಉತ್ಕೃಷ್ಟ ತಯಾರಿಕೆಯ ಒಂದು ನಿದರ್ಶನವಾಗಿ ಪರಿಣಮಿಸಲ್ಪಟ್ಟಿರುತ್ತದೆ. ಆದರ್ಶವಾದ ಕೂದಲೆಣ್ಣೆ ಹಾಗೂ ಕೂದಲನ್ನು ಕಪ್ಪುಗೊಳಿಸುವ ಸಾಧನ—'ಲೊಮಾ'ವನ್ನು ಲಕ್ಷೋಪ ಲಕ್ಷ ಮಂದಿ ದಿನಾಲೂ ಉಪಯೋಗಿಸಿ ಇದು ಎಲ್ಲರ ವಿಶ್ವಾಸಕ್ಕೆ ಪಾತ್ರವಾದ ತಯಾರಿಕೆಯೆಂದು ಸಿದ್ಧಗೊಳಿಸಿರುವರು.

ಸೋಲ್ ಏಜೆಂಟ್ಸ್:
**ಎಮ್.ಎಮ್. ಖಂಬಾಟ್‌ವಾಲಾ,**
ಅಹಮ್ಮದಾಬಾದ್ 1.

ಏಜೆಂಟ್ಸ್:
**ಸಿ. ನರೋತ್ತಮ್ ಅಂಡ್ ಕಂಪೆನಿ,**
ಬೊಂಬಾಯಿ 2.




ಲೋಕವಿಖ್ಯಾತವಾದ
ಕೂದಲೆಣ್ಣೆ ಹಾಗೂ
ಕೂದಲನ್ನು
ಕಪ್ಪುಗೊಳಿಸುವ
ಸಾಧನ.

ಅದು ಈಗ ಮೊದಲಿನಷ್ಟು
ಪ್ರಾಣಘಾತಕವಾಗಿಲ್ಲ, ಆದರೂ
ಸಕಾಲದಲ್ಲಿ ಎಚ್ಚರ ವಹಿಸಬೇಕು




# ಮಕ್ಕಳ ಮೆನಿಂಜೈಟಿಸ್

"ಅಮೃತ"ದ ಆಧಾರದಿಂದ

ಮಕ್ಕಳ ಅಪಾಯಕರ ಕಾಯಿಲೆಗಳಲ್ಲಿ ಮೆನಿಂಜೈಟಿಸ್ ಒಂದು. ಅದು ಪ್ರಾರಂಭವಾದದ್ದು ತಿಳಿಯುವುದೇ ಇಲ್ಲ. ಆದರೆ ಮುಂಜಾಗ್ರತೆ ತೆಗೆದುಕೊಳ್ಳಲು ತಪ್ಪಿದರೆ ಒಮ್ಮೊಂದೊಮ್ಮೆ ಉಲ್ಬಣಾವಸ್ಥೆಗೆ ಮುಟ್ಟಿಬಿಡುತ್ತದೆ. ಏನೋ ನೆಗಡಿ ಇರಬೇಕು ಎಂದು ಭಾವಿಸಿಕೊಂಡಿದ್ದ ರೋಗ ರೌದ್ರರೂಪ ತೋರಿಸಿ ಭೀಕರ ಸೆಳವು, ವಿಪರೀತ ಜ್ವರ, ಮೂರ್ಛೆಗಳಲ್ಲಿ ಪರಿಣಮಿಸುತ್ತದೆ. ಹಾಹಾ ಎನ್ನುವುದರಲ್ಲಿ ಮಗು ಕೈಬಿಟ್ಟು ಹೋಗುತ್ತದೆ.

ಮೆನಿಂಜೆಟಿಸ್ ಎಂದರೆ ಮಿದುಳಿನ ಹೊರ ಆವರಣದ ಬಾವು (ಮೆನಿಂಜಿಸ್ = ಮಸ್ತಿಷ್ಕಾವರಣ ಎಂಬುದರಿಂದ). ತಲೆಬುರುಡೆಯೊಳಗೆ ಮಿದುಳನ್ನು ಆವರಿಸಿರುವ ಈ ಆವರಣವು, ಬುರುಡೆಗೆ ಬಂದ ಧಕ್ಕೆಗಳು ಮಿದುಳಿಗೆ ತಗಲದಂತೆ ರಕ್ಷಿಸುತ್ತದೆ. ಮಿದುಳಿನ ಒಳಭಾಗಕ್ಕೆ ರಕ್ತವನ್ನು ಒದಗಿಸುವ ದಟ್ಟವಾದ ರಕ್ತನಾಳಗಳೂ ಮಸ್ತಿಷ್ಕಾವರಣದಲ್ಲೇ ಹೆಣೆದಿರುತ್ತವೆ. ಆದ್ದರಿಂದ ಇದು ಚೆನ್ನಾಗಿ ಕೆಲಸ ಮಾಡುತ್ತಿದ್ದರೆ ಮಾತ್ರ ಮಿದುಳಿಗೆ ಬೇಕಾದ ರಕ್ತ ಕ್ಲುಪ್ತವಾಗಿ ದೊರೆಯಬಲ್ಲದು.

ಮಸ್ತಿಷ್ಕಾವರಣವನ್ನು ರೋಗಾಣುಗಳು ಮುತ್ತಿದರೆ ಮೆನಿಂಜೈಟಿಸ್ ಉತ್ಪನ್ನವಾಗುತ್ತದೆ. ನೇರವಾಗಿ ಮಸ್ತಿಷ್ಕಾವರಣವನ್ನೇ ಆಕ್ರಮಿಸುವ ಮೆನಿಂಗೊಕೋಕ್ಕೈ ಎಂಬ ರೋಗಾಣುಗಳೂ ಉಂಟು. ಇದು ಸಾಮಾನ್ಯವಾಗಿ ಪಿಡುಗಿನ ರೂಪದಲ್ಲಿ ಹಬ್ಬುವ ಸಾಂಕ್ರಾಮಿಕ ರೋಗ— ಮತ್ತು ಚಿಕ್ಕ ದೊಡ್ಡವರೆನ್ನದೆ ಯಾರನ್ನೂ ಆಕ್ರಮಿಸಬಹುದಾದ ರೋಗ. ಆದರೆ ಮಕ್ಕಳನ್ನೇ ಪೀಡಿಸುವ ಮೆನಿಂಜೈಟಿಸ್‌ನ ರೋಗಾಣುಗಳು ಹೆಚ್ಚಾಗಿ ದೇಹದ ಬೇರಾವುದಾದರೂ ಸ್ಥಳದಲ್ಲಿ ಮೊದಲು ಬೆಳೆದು ಆ ಮೇಲೆ ಮಿದುಳನ್ನು ಆಕ್ರಮಿಸುತ್ತವೆ. ಹೀಗೆ ರೋಗಾಣುಗಳು ಮೊದಲು ಬೆಳೆಯುವ ಸ್ಥಾನಕ್ಕೆ "ಸೆಪ್ಟಿಕ್ ಫೋಕಸ್" ಅಥವಾ ನಂಜಿನ ಕೇಂದ್ರ ಎಂದು ಹೆಸರು.

ಮಗುವಿಗೆ ಟಾನ್ಸಿಲ್ (ಗಂಟಲ ಗ್ರಂಥಿ) ದೂಷಿತವಾಗಿರಬಹುದು; ಅಥವಾ ಅದರ ಶ್ವಾಸಕೋಶದಲ್ಲಿ ಕ್ಷಯರೋಗದ ಅಣುಗಳು ಕೇಂದ್ರಿತವಾಗಿರಬಹುದು; ಅಥವಾ ಎಲುಬಿನ ಕುಳಿಗಳಲ್ಲಿ ರೋಗಾಣುಗಳು ಬೆಳೆಯುತ್ತಿರಬಹುದು. ತಲೆಗೆ, ಬೆನ್ನು ಹುರಿಗೆ ಬಿದ್ದ ಹೊಡೆತದ ಸ್ಥಳದಲ್ಲಿ, ಬೊಕ್ಕೆಯಲ್ಲಿ, ಕಿವಿಯ ರೋಗದ ಸ್ಥಾನದಲ್ಲಿ ಕೂಡ ಅವು ಆಶ್ರಯಪಡೆದಿರಬಹುದು. ಅವು ಅದೇ ಸ್ಥಾನದಲ್ಲಿ ಉಳಿದುಕೊಂಡಷ್ಟು ಕಾಲ ಉಪದ್ರವವು ಅಲ್ಲಿ ಮಾತ್ರ ಉಳಿಯುತ್ತದೆ. ಆದರೆ ಒಮ್ಮೊಮ್ಮೆ ರೋಗಾಣುಗಳು ರಕ್ತ ಪ್ರವಾಹದಲ್ಲಿ ಸೇರಿಕೊಂಡುಬಿಡುತ್ತವೆ. ರಕ್ತವು ಅತ್ಯಂತ ಪೋಷಕ ಪದಾರ್ಥಗಳಿಂದ ಕೂಡಿರುವುದರಿಂದ ಅವು ಅಲ್ಲಿ ವೇಗವಾಗಿ ವೃದ್ಧಿಂಗತವಾಗಿ ಇತರ ನಿರೋಗಿ ಅಂಗಗಳನ್ನು, ಕೆಲ ವೇಳೆ ಮಿದುಳಿನ ಆವರಣವನ್ನು ಕೂಡ ತಲುಪಿ ಗಡಿಬಿಡಿಯುಂಟುಮಾಡುತ್ತವೆ.

ಅನುಕೂಲ ಪರಿಸ್ಥಿತಿ ಲಭ್ಯವಾದರೆ ಈ ರೋಗಾಣುಗಳು ಪ್ರಚಂಡವಾಗಿ ವೃದ್ಧಿಂಗತವಾಗಬಲ್ಲವು. ಒಂದು ರೋಗಾಣುವು ಅರ್ಧ ತಾಸಿನಲ್ಲಿ ಇಬ್ಭಾಗ ಹೊಂದಿ ಎರಡು ರೋಗಾಣುಗಳಾಗುತ್ತದೆ. ಆ ಎರಡು ಮತ್ತರ್ಧ ಗಂಟೆಯಲ್ಲಿ ವಿಭಜನೆ ಹೊಂದಿ ನಾಲ್ಕಾಗುವವು. ಹೀಗೆ ಅರ್ಧರ್ಧ ತಾಸಿಗೆ ಅವುಗಳ ಸಂಖ್ಯೆ ಇಮ್ಮಡಿಸುತ್ತ ಹೋಗಿ ೧೨ ಗಂಟೆಗಳಲ್ಲಿ ೧,೬೭,೭೭,೨೧೬ (೨$^{೨೪}$) ರಷ್ಟಾಗಿ ಬಿಡುವವು. ೨೪ ತಾಸುಗಳಲ್ಲಿ ಅವು ಕೋಟಿ ಕೋಟಿ ಸಂಖ್ಯೆಯನ್ನು ತಲುಪುವವು. ಒಂದು ರೋಗಾಣುವೇ ಇಷ್ಟು ಅಭಿವೃದ್ಧಿ ಹೊಂದುವುದಾದರೆ ಮಿದುಳಿನ ಆವರಣವನ್ನು ಸಾವಿರಾರು ರೋಗಾಣುಗಳು ಸೇರಿಕೊಂಡಿದ್ದರೆ ಕೇಳುವುದೇ ಬೇಡ.

ಮೆನಿಂಜಿಸ್ ಅಥವಾ ಮಸ್ತಿಷ್ಕಾವರಣದಲ್ಲಿ ಹೀಗೆ ವೃದ್ಧಿಂಗತವಾದ ರೋಗಾಣುಗಳು ಇಡೀ ಪ್ರದೇಶವನ್ನು ಆಕ್ರಮಿಸಿಕೊಂಡು ದಟ್ಟವಾದ ವಸತಿಗಳನ್ನು ಸ್ಥಾಪಿಸಿಕೊಂಡು ಬಿಡುತ್ತವೆ. ಮಸ್ತಿಷ್ಕಾವರಣ ಊದಿಕೊಳ್ಳುತ್ತದೆ. ಅದರಿಂದ ಅಂಟಾದ ರಸ ಒಸರತೊಡಗಿ ಮಿದುಳಿಗೂ ಆವರಣಕ್ಕೂ ನಡುವಿನ ಸ್ಥಳದಲ್ಲೆಲ್ಲ ತುಂಬಿಕೊಳ್ಳುತ್ತದೆ. ರಕ್ತಪ್ರವಾಹಕ್ಕೆ ತಡೆಯುಂಟಾಗಿ ಮಿದುಳಿಗೆ ಪ್ರಾಣವಾಯು (ಆಮ್ಲ ಜನಕ) ಪೂರೈಕೆ ಕಡಿಮೆಯಾಗುವುದರಿಂದ ಅದು ಸರಿಯಾಗಿ ಕೆಲಸ ಮಾಡಲಾರದೇ ಹೋಗುತ್ತದೆ. ಮಿದುಳೇ ಸರಿಯಾಗಿ ಕೆಲಸ ಮಾಡದಿರುವಾಗ ಮಗು ಸುಂದಾಗಿ ಮಲಗಿ ಬಿಡುತ್ತದೆ. ರೋಗಾಣುಗಳ ವಿರುದ್ಧ ಹೋರಾಡಲು ದೇಹವು ಉತ್ತೇಜಿತವಾಗುವುದರಿಂದ ಜ್ವರವೇರಿ ಮಗು ನೋಡನೋಡುತ್ತ ಅಪಾಯಾವಸ್ಥೆಯನ್ನು ಸೇರುತ್ತದೆ.

ಮೆನಿಂಜೈಟಿಸ್ ರೋಗವನ್ನು ಹೆಚ್ಚು ಭಯಾವಹವಾಗಿ ಮಾಡುವುದು ಅದರ ಪ್ರಾಥಮಿಕ ಅವಸ್ಥೆ ಬಲು ಸೌಮ್ಯವಾಗಿರುವುದು. ಗೊಬ್ಬರ, ಗಣಜಿಲ, ನಾಯಿ ಕೆಮ್ಮು ಮೊದಲಾದ ರೋಗಗಳಿಂದ ಗುಣ ಹೊಂದಿದ ಮೇಲೆ ಮಗು ದುರ್ಬಲವಾಗಿರುವ ಸಮಯದಲ್ಲೇ ಈ ರೋಗ ಅಲಕ್ಷಿತವಾಗಿ ತನ್ನ ವ್ಯಾಪಾರವನ್ನು ಪ್ರಾರಂಭಿಸುವುದು ಹೆಚ್ಚು. ಆಗ ಶರೀರದಲ್ಲಿ ರೋಗಪ್ರತೀಕಾರಕ ಶಕ್ತಿ ಕಡಿಮೆಯಾಗಿರುವುದರಿಂದ ಅದಕ್ಕೆ ವೃದ್ಧಿ ಹೊಂದಲುಸುಲಭವಾಗುತ್ತದೆ. ರೋಗಾಣುಗ[illegible] ಮಿದುಳನ್ನು ಆಕ್ರಮಿಸಿ ಬೆಳೆಯತೊಡಗಿದಾಗ ಮೊದಲು ಮಗು ಕೇವಲ ಸಿಡುಕು, ರಂಬಾಟಗಳನ್ನು ತೋರಿಸುತ್ತದೆ ಮಾತ್ರ. ಅದರ ಮನಸ್ಸು ಯಾವುದರಲ್ಲೂ ಸಮಾಧಾನ ತಾಳುವುದಿಲ್ಲ. ಹಸಿವು ಕುಗ್ಗುತ್ತದೆ. ಆ ಮೇಲೆ ಮೆಲ್ಲಗೆ ಜ್ವರ ಸುರುವಾಗುತ್ತದೆ. ಕಣ್ಣು ನೋವು ಕೂಡ ಕಾಣಿಸಿಕೊಳ್ಳುತ್ತದೆ. ಏನೋ ಮಾಮೂಲಿ ನೆಗಡಿ ಎಂದು ನಾಲ್ಕು ದಿನ ಅಲಕ್ಷ್ಯ ಮಾಡಿದರೆ ಮಗುವಿಗೆ ವಿಪರೀತ ಜ್ವರ ಏರುತ್ತದೆ; ಅದು ಸದಾ ನಿರ್ವಿಣ್ಣಾವಸ್ಥೆಯಲ್ಲಿ ಬಿದ್ದಿರುತ್ತದೆ ಮತ್ತು

ಅದರ ಮೈಯಲ್ಲಿ ಒಮ್ಮೆಲೇ ಎಳೆದ ಹಾಗೆ ಸೆಳೆತಗಳು ಪ್ರಾರಂಭವಾಗುತ್ತದೆ.

ಇತರ ಲಕ್ಷಣಗಳೂ ಕಾಣಿಸಿಕೊಳ್ಳುತ್ತವೆ. ಮಗು ಬೆಳಕು ಕಂಡರೆ ಹಿಂಜರಿಯುವುದು, ಒಂದೇ ಮಗ್ಗುಲಿಗೆ, ಕಾಲುಗಳನ್ನು ಹಿಂದೆಳೆದು ಹೊಟ್ಟೆಗೆ ತಗಲಿಸಿಕೊಂಡು ಮುದುಡಿ ಬಿದ್ದುಕೊಂಡಿರುವುದು, ಅದರ ಕೈಕಾಲು ಮುಖಗಳ ಸ್ನಾಯುಗಳು ಕಂಡೂ ಕಾಣದಂತೆ ನಡು ನಡುವೆ ಕಂಪಿಸುವುದು — ಇವನ್ನು ನೋಡಿ ವೈದ್ಯರು ಇದು ಮೆನಿಂಜೈಟಿಸ್ ಇರಬೇಕೆಂದು ಹೆಚ್ಚು ಕಡಿಮೆ ಖಂಡಿತವಾಗಿಯೆ ಊಹಿಸುತ್ತಾರೆ.

ಬರಬರುತ್ತ ರೋಗ ಲಕ್ಷಣಗಳು ಸ್ಪಷ್ಟವಾಗುತ್ತ ಹೋಗುವವು. ಜ್ವರ ೧೦೧ ರಿಂದ ೧೦೩ ಡಿಗ್ರಿ ವರೆಗೆ ಏರುತ್ತದೆ. ಮಿದುಳಿನ ಮೇಲೆ ಬಿದ್ದ ಒತ್ತಡದಿಂದ ಕೊರಳ ಹಿಂಭಾಗ ಮತ್ತು ಬೆನ್ನಿನ ಸ್ನಾಯುಗಳು ಹೆಚ್ಚು ಹೆಚ್ಚು ಕುಗ್ಗುತ್ತ ಕೊರಡಿನಂತೆ ಗಟ್ಟಿಯಾಗುವವು. ಕಣ್ಣುಗಳನ್ನು ನಿಯಂತ್ರಿಸುವ ಸ್ನಾಯುಗಳ ಮೇಲೆ ಪರಿಣಾಮವಾಗುವುದರಿಂದ ಮಗುವಿನ ಕಣ್ಣು ಮೆಳ್ಳೆಗಣ್ಣಿನಂತಾಗುತ್ತದೆ. ಈ ಸ್ಥಿತಿಯಲ್ಲೂ ಯೋಗ್ಯ ಚಿಕಿತ್ಸೆಯಾಗದಿದ್ದರೆ ಜ್ವರ ೧೦೫-೧೦೬ ಡಿಗ್ರಿ ವರೆಗೂ ಏರಬಹುದು. ಆ ಮೇಲೆ ಮಗುವನ್ನು ಉಳಿಸುವುದು ಅಸಾಧ್ಯಪ್ರಾಯವೇ.

ಮೆನಿಂಜೈಟಿಸ್ ರೋಗ ಒದಗದಂತೆಯೆ ಮುಂಜಾಗ್ರತೆ ವಹಿಸುವುದು ಅತ್ಯುತ್ತಮ ಉಪಾಯ. ಮೊದಲೇ ಹೇಳಿದಂತೆ ಮಕ್ಕಳ ಮೆನಿಂಜೈಟಿಸ್ ಬಹುತರವಾಗಿ ಮಿದುಳಿನಲ್ಲಲ್ಲ, ಇತರ ಭಾಗಗಳಲ್ಲಿ ಆಶ್ರಯ ಹೊಂದಿ ಬೆಳೆದ ರೋಗಾಣುಗಳು ಮಿದುಳನ್ನು ಆ ಮೇಲೆ ಆಕ್ರಮಿಸುವುದರಿಂದಾಗುತ್ತದೆ. ಆದ್ದರಿಂದ ಶ್ವಾಸಕೋಶದಲ್ಲಿ ರೋಗಾಣುಗಳ ವಸತಿ, ಎಲುಬಿನ ಹೊರಳೆಗಳ ವಿಕಾರ, ಕಿವಿ ಸೋರುವುದು, ಟಾನ್ಸಿಲ್ ರೋಗ, ಕೆಟ್ಟು ಕೀವು ತುಂಬಿದ ಹಲ್ಲುಗಳು— ಇಂಥವುಗಳನ್ನು ಅಲಕ್ಷ್ಯ ಮಾಡದೆ ಕೂಡಲೆ ಯೋಗ್ಯ ಚಿಕಿತ್ಸೆ ಮಾಡಿಸಿದರೆ ಮೆನಿಂಜೈಟಿಸ್ ಆಗುವ ಸಂಭವವನ್ನು ಕಡಿಮೆ ಮಾಡಿಕೊಳ್ಳಬಹುದು.

ಶರೀರದಲ್ಲಿ ಅಶಕ್ತಿಯಿದ್ದಾಗಲೇ ರೋಗಾಣುಗಳ ಪ್ರತಾಪ ಹೆಚ್ಚಾಗುತ್ತದೆ. ಶರೀರ ಸದೃಢವಾಗಿರುವಾಗ ರಕ್ತದಲ್ಲಿ ರೋಗಾಣುಗಳು ಸೇರಿದೊಡನೆ ಪ್ರತಿಅಣುಗಳು ಉತ್ಪತ್ತಿಯಾಗಿ ಅವುಗಳನ್ನು ನಾಶಮಾಡಿಬಿಡುತ್ತವೆ. ರಕ್ತದ ರೋಗ ಪ್ರತಿಬಂಧ ಶಕ್ತಿಯನ್ನು ಕಾಪುಟೀಪಾಗಿಡುವುದಕ್ಕೆ "ಅ" ಮತ್ತು "ಡ" ಜೀವನ ಸತ್ವಗಳು ( ವಿಟಾಮಿನ್ ) ನೆರವಾಗುವುದರಿಂದ ಅಶಕ್ತ ಮತ್ತು ರುಗ್ಣಾವಸ್ಥೆಯಿಂದ ಅದೇ ಎದ್ದ ಮಕ್ಕಳಿಗೆ ಹಾಲು, ಗಜ್ಜರಿ, ಬೀಟ್, ಟೊಮ್ಯಾಟೊ, ತತ್ತಿ ಮೊದಲಾದ "ಅ" ಜೀವನ ಸತ್ವಯುಕ್ತ ಪದಾರ್ಥಗಳನ್ನು ಸಾಕಷ್ಟು ತಿನ್ನಿಸುವುದೊಳಿತು. ಇಲ್ಲದಿದ್ದರೆ "ಅ" ಮತ್ತು "ಡ" ಜೀವನ ಸತ್ವದ ಗುಳಿಗೆಗಳನ್ನಾದರೂ ಕೊಡಬೇಕು.

ಅರ್ಧ ಶತಮಾನದ ಹಿಂದೆ ಒಮ್ಮೆ ಮೆನಿಂಜೈಟಿಸ್ ಆಯಿತೆಂದರೆ ಮಗು ಬದುಕುವುದು ಹೆಚ್ಚು ಕಡಿಮೆ ಅಸಾಧ್ಯವೆಂಬಂತೆಯೆ ಇತ್ತು. ಇಂದು ಆ ಸ್ಥಿತಿ ಉಳಿದಿಲ್ಲ. ಮೆನಿಂಜೈಟಿಸ್ ಕಾರಕವಾದ ಕೆಲ ರೋಗಾಣುಗಳ ವಿರುದ್ಧ ಪ್ರಥಮತಃ ಪರಿಣಾಮಕರ ಅಸ್ತ್ರ ಲಭಿಸಿದ್ದು ೧೯೩೩ ರಲ್ಲಿ ಸಲ್ಫಾ ಔಷಧಗಳು ಕಂಡುಹಿಡಿಯಲ್ಪಟ್ಟಾಗ. ಸಲ್ಫಾನಮೈಡ್ ವರ್ಗದ ಔಷಧಗಳು ಅನೇಕ ಪ್ರಕಾರದ ಮೆನಿಂಜೈಟಿಸ್ ರೋಗಿಗಳಿಗೆ ಬದುಕಿಕೊಳ್ಳಲು ಸಾಧ್ಯವಾಗುವಂತೆ ಮಾಡಿದವು.

ಅನಂತರ ಪೆನಿಸಿಲಿನ್ ಮತ್ತು ಇತರ ಆಂಟಿ-ಬಾಯಾಟಿಕ್ ಔಷಧಗಳು ಮೆನಿಂಜೈಟಿಸ್ ರೋಗಿಗಳಿಗೆ ಮತ್ತಷ್ಟು ಧೈರ್ಯವನ್ನು ತಂದುಕೊಟ್ಟಿವೆ. ವಿಶೇಷವಾಗಿ ೧೯೪೪ ರಲ್ಲಿ ಅಮೇರಿಕದಲ್ಲಿ

ಡಾ. ಯಲ್ಲಪ್ರಗಡ ಸುಬ್ಬರಾಯರು ಕಂಡುಹಿಡಿದ ಒರಿಯೋಮೈಸಿನ್ ಎಂಬ ಅರಿಸಿನ ಬಣ್ಣದ ಆಂಟಿ–ಬಾಯಾಟಿಕ್ ಔಷಧ ಇಂದು ಮೆನಿಂಜೈಟಿಸ್ ಮೇಲೆ ವಿಪುಲವಾಗಿ ಪ್ರಯೋಗಿಸಲ್ಪಡುತ್ತದೆ. ಆದರೆ ಇದೂ ಸಕಾಲದಲ್ಲಿ ಸಿಗುವುದು ಅವಶ್ಯವೆಂಬುದನ್ನು ಮರೆಯಬಾರದು.

ಆದರೆ ಮೆನಿಂಜೈಟಿಸ್ ಆದ ಮಗುವನ್ನು ಕೂಡಲೆ ಸುಸಜ್ಜಿತ ಆಸ್ಪತ್ರೆಗೆ ಸೇರಿಸುವುದೇ ಒಳಿತು. ಮೆನಿಂಜೈಟಿಸ್ ಪ್ರಕರಣಗಳಲ್ಲಿ ಬರಿ ಔಷಧಪ್ರಯೋಗವಲ್ಲದೆ ಇತರ ಚಿಕಿತ್ಸೆಗಳೂ ಅವಶ್ಯವಾಗಿವೆ. ಮಿದುಳಿನ ಸಂದಿಯಲ್ಲಿ ತುಂಬಿಕೊಂಡು ಮಿದುಳಿಗೆ ಒತ್ತಡ ತರುವ ದ್ರವವನ್ನು ಆಗಾಗ್ಗೆ "ಲಂಬರ್ ಪಂಕ್ಚರ್" ಪದ್ಧತಿಯಿಂದ (ಬೆನ್ನು ಹುರಿಯ ಮಣಿಗಳ ಸಂದಿಯಲ್ಲಿ ಸೂಜಿ ಚುಚ್ಚಿ ಒಳಗಿನ ದ್ರವವನ್ನು ಹೀರಿಕೊಳ್ಳುವುದು) ಹೊರ ತೆಗೆಯಬೇಕಾಗುತ್ತದೆ. ಬೇಗನೆ ಮಿದುಳಿನಲ್ಲಿ ಪ್ರವೇಶವಾಗುವಂತೆ ಒರಿಯೋಮೈಸಿನ್ ಮೊದಲಾದ ಆಂಟಿ ಬಾಯಾಟಿಕ್‌ಗಳನ್ನು ಬೆನ್ನು ಹುರಿಯ ಮಣಿಯೊಳಗೆ ಚುಚ್ಚಬೇಕಾಗುತ್ತದೆ. ಪ್ರಾಣವಾಯು ಕೊಡುವ ಅವಶ್ಯಕತೆಯೂ ಉಂಟಾಗುತ್ತದೆ. ಎಲ್ಲ ಉಪಚಾರಗಳೂ ಸಕಾಲದಲ್ಲೇ ಆಗಬೇಕು. ಇದು ಆಸ್ಪತ್ರೆಯಲ್ಲಿ ಮಾತ್ರವೇ ಸಾಧ್ಯವಾಗತಕ್ಕ ಮಾತು. ★



## ಪುಕ್ಕಟೆ–ಸಲಹೆ

ಬಣ್ಣದ ಕರವಸ್ತ್ರಗಳನ್ನು ಒಗೆಯಬೇಕಾದರೆ ಒಗೆಯುವುದಕ್ಕೆ ಮುಂಚೆ ಸ್ವಲ್ಪ ಕಾಲ ಆ ಬಟ್ಟೆಯನ್ನು ತಣ್ಣಗಿರುವ ಉಪ್ಪಿನ ನೀರಿನಲ್ಲಿ ಇಟ್ಟಿದ್ದು ಅನಂತರ ಒಗೆದರೆ ಬಣ್ಣಕ್ಕೆ ಧಕ್ಕೆ ಉಂಟಾಗುವುದಿಲ್ಲ.

ಅಂಚೆ ಚೀಟಿಗಳು ಮತ್ತು ಬೇರೆ ಯಾವ ವಿಧವಾದ ಕಾಗದಗಳೇ ಆಗಲಿ ಬಿಡಿಸಲಿಕ್ಕೆ ಬಾರದಂತೆ ಅಂಟಿಕೊಂಡಿದ್ದರೆ, ಅದರ ಮೇಲೆ ಒಂದು ಕಾಗದವನ್ನು ಇಟ್ಟು ಬಿಸಿಯಾಗಿರುವ ಕಬ್ಬಿಣದ ತುಂಡಿನಿಂದ ಬಲವಾಗಿ ಒತ್ತಿದರೆ ಕಾಗದ ಬಿಟ್ಟುಕೊಳ್ಳುತ್ತದೆ.

—ಎಸ್. ಎನ್. ಅಶೋಕ್ ಕುಮಾರ್



# ನಾವು, ಜಪಾನೀಯರು

ಜಪಾನ್ ಒಂದು ರೀತಿಯಿಂದ ಜಗತ್ತಿನಲ್ಲೇ ಅಪ್ರತಿಮವಾಗಿದೆ. ೨೫ ಶತಮಾನಗಳಿಂದ ಅನೂಚಾನವಾಗಿ ನಡೆದುಬಂದ ಅದರ ರಾಜಸತ್ತೆ, ಅದರ ಕಲಾಪ್ರೇಮ, ಅದರ ಉದ್ಯಮಶೀಲತೆ, ಅದರ ವೀರ ಪರಂಪರೆ ಇವೆಲ್ಲ ಅದರ ಆತ್ಮಕ್ಕೆ ತನ್ನದೇ ಒಂದು ಮೆರುಗು ಕೊಟ್ಟಿವೆ. ಇಲ್ಲಿ ಆ ಆತ್ಮದ ಕೆಲ ಮುಖಗಳ ಪರಿಚಯ ಮಾಡಿಕೊಡಲಾಗಿದೆ.

## ದೇವತೆಗಳು ಕಳಿಸಿದ ಅರಸ

ಸ್ವರ್ಗದ ಅಧಿದೇವತೆ ಅಮಾ ತೇರಾಸು-ಓ-ಮಿ-ಕಾಮಿ (ಸೂರ್ಯದೇವಿ) ಒಂದು ದಿನ ತನ್ನ ಪ್ರೀತಿಯ ಮೊಮ್ಮಗನಾದ ನಿನಿಗಿ-ನೋ-ಮಿಕೋಟೊನನ್ನು ಕರೆದು ಹೇಳಿದಳು : "ವತ್ಸಾ, ನೀನು ಭೂಲೋಕಕ್ಕೆ ಹೋಗು. ಅಲ್ಲಿ ಬೆತ್ತದ ದಟ್ಟವಾದ ಮೆಳೆಗಳಿಂದ ಕೂಡಿರುವ 'ಓಯಾಶಿಮಾ (ಅಷ್ಟದ್ವೀಪ) ದಲ್ಲಿ ರಾಜ್ಯವನ್ನು ಸ್ಥಾಪಿಸಿ ನಮ್ಮ ಪರವಾಗಿ ಭೂಮಿಯನ್ನಾಳು. ಹಿಡಿ, ನಿನ್ನ ರಾಜಚಿಹ್ನಗಳನ್ನು." ಇಷ್ಟೆಂದು ಅಮಾ-ತೇರಾಸು ಒಂದು ಖಡ್ಗ, ಕಂಠಹಾರ ಮತ್ತು ಕನ್ನಡಿಯನ್ನು ನಿನಿಗಿಯ ಕೈಗಿತ್ತು "ಈ ರಾಜಚಿಹ್ನಗಳು ಎಲ್ಲಿಯವರೆಗೆ ನಿನ್ನ ವಂಶಜರಲ್ಲಿ ಸುರಕ್ಷಿತವಾಗಿರುವವೊ ಅಲ್ಲಿಯವರೆಗೆ ಭೂಮಿಯ ಮೇಲೆ ಅವರ ಶಾಸನ ಅಬಾಧಿತವಾಗಿರುವುದು. ಮತ್ತು ಎಂದು ನಿಮಗೆ ನನ್ನ ಮುಖವನ್ನು ನೋಡಬೇಕೆಂಬ ಅಪೇಕ್ಷೆಯಾಗುವುದೊ ಆಗ ಈ ಕನ್ನಡಿಯಲ್ಲಿ ನೋಡಬೇಕು" ಎಂದು ಹೇಳಿದಳು.



ರಾಜಚಿಹ್ನಗಳನ್ನು ತೆಗೆದುಕೊಂಡು ನಿನಿಗಿ ತನ್ನ ಅನುಚರರನ್ನು ಕೂಡಿಕೊಂಡು "ಓಯಾ-ಶಿಮಾ" ದ ಕಿರಿಶಿಮಾ ಪರ್ವತ ಶಿಖರಕ್ಕೆ ಬಂದಿಳಿದ. ಸುತ್ತಮುತ್ತಲಿನ ಪ್ರದೇಶವನ್ನಾತ ಸ್ವಾಧೀನಪಡಿಸಿಕೊಂಡನು. ನಿನಿಗಿಯ ಮರಿಮಗ ಜಿಮ್ಮು ಕ್ರಿ. ಶ. ಪೂ. ೬೬೦ ರಲ್ಲಿ ಅಲ್ಲಿ ಒಂದು ಸಾಮ್ರಾಜ್ಯದ ತಳಹದಿಯನ್ನು ಹಾಕಿದ.

"ಓಯಾಶಿಮಾ"ಕ್ಕೆ ಇಂದು "ನಿಹೋನ್" "ನಿಪ್ಪೋನ್" ಅಥವಾ ಜಪಾನ್ ಎಂದು ಕರೆಯುತ್ತಾರೆ. ನಿನಿಗಿ-ನೋ-ಮಿಕೋಟೊನ ವಂಶಜರು "ಮಿಕಾಡೊ" ಎಂಬ ಹೆಸರಿನಿಂದ ಇಂದಿಗೂ ಜಪಾನಿನಲ್ಲಿ ಪ್ರಭುತ್ವ ನಡೆಸುತ್ತಿದ್ದಾರೆ. ಅವರ ಬಳಿ ಇಂದಿಗೂ ಅಮಾ-ತೇರಾಸು ಅಂದು ಕೊಟ್ಟಿದ್ದ ಆ ಕಂಠಹಾರ, ಖಡ್ಗ ಮತ್ತು ಕನ್ನಡಿಗಳು ಸುರಕ್ಷಿತವಾಗಿವೆ. ಇಂದಿಗೂ ಅಮಾ-ತೇರಾಸುವಿನ ನೆನಪಿಗಾಗಿ ಜಪಾನಿ ರಾಜಧ್ವಜದ ಮೇಲೆ ಉದಯಿಸುವ ಸೂರ್ಯನ ಚಿತ್ರ ಮೆರೆಯುತ್ತಿದೆ.

ಭೌಗೋಲಿಕವಾಗಿ ಜಪಾನು ಅನೇಕ ಚಿಕ್ಕ ದೊಡ್ಡ ದ್ವೀಪಗಳ ಸಮೂಹವಾಗಿದೆ. ಅದರಂತೆ ಜಪಾನಿ ಸಂಸ್ಕೃತಿಯೂ ನಾನಾ ಧರ್ಮಗಳ, ಜಾತಿ ಕುಲಗಳ ರೀತಿ-ನೀತಿಗಳ ಮತ್ತು ಸಂಪ್ರ

ಇಲ್ಲಿ "ನವನೀತ" ದಿಂದ ಸಂಗ್ರಹಿಸಲ್ಪಟ್ಟ ಅಂಶಗಳು ಫ್ರೆಡ್ರಿಕ್ ಗೇರಿಸರ ಗ್ರಂಥದಿಂದ ಆಯ್ದುವಾಗಿವೆ.

ದಾಯಗಳ ಅದ್ಭುತ ಮಿಶ್ರಣವಾಗಿದೆ. ಅದೊಂದು ಬೆಲೆಯುಳ್ಳ ಬಹುಬಣ್ಣಗಳ ರೇಶಿಮೆಯ ಶಾಲಿನಂತಿದೆ. ಅದು ಆಕರ್ಷಕವಾಗಿರುವಂತೆ ವಿಚಿತ್ರವೂ ಆಗಿದೆ.

## ಯುಗಗಳ ಲೆಕ್ಕ

ತನ್ನ ಇತಿಹಾಸವನ್ನು ಬಹು ಪ್ರಾಚೀನ ಕಾಲದಿಂದ ಬರೆದಿಡುತ್ತ ಬಂದಿರುವ ಜಗತ್ತಿನ ಕೆಲವೇ ದೇಶಗಳಲ್ಲಿ ಜಪಾನು ಒಂದಾಗಿದೆ. ಆದರೆ ವಿದೇಶೀಯರಿಗೆ ಈ ಇತಿಹಾಸವನ್ನು ತಿಳಿದುಕೊಳ್ಳುವುದು ಬಹು ಕಠಿನವಾಗಿದೆ. ಜಪಾನಿನ ಕಾಲಗಣನಾ ರೀತಿ ಬಲು ವಿಚಿತ್ರವಾಗಿದ್ದು ಅಲ್ಲಿ ಇತಿಹಾಸವನ್ನು ವರ್ಷಗಳ ಲೆಕ್ಕದಲ್ಲಿ ಅಲ್ಲ, ಬೇರೆ ಬೇರೆ ಯುಗಗಳ ಲೆಕ್ಕದಲ್ಲಿ ಬರೆಯಲಾಗುತ್ತಿದೆ. ಪ್ರತಿಯೋರ್ವ ಹೊಸ ಸಮ್ರಾಟ ಸಿಂಹಾಸನವನ್ನೇರಿದೊಡನೆ ಅಂದಿನಿಂದ ಹೊಸ ಯುಗ ಆರಂಭವಾಗುತ್ತದೆ. ಪ್ರತಿಯೊಂದು ಯುಗಕ್ಕೂ ಒಂದು ಹೆಸರಿರುತ್ತದೆ. "ಮೆಇಜಿ" ಅಂದರೆ ಸ್ವರ್ಗಪಥ ಪ್ರಬುದ್ಧಯುಗ (೧೮೬೮-೧೯೧೨), "ತೆಇಶೊ" ಅಂದರೆ ಸ್ವರ್ಗಪಥ ಯುಗ (೧೯೧೨-೨೬) ಇತ್ಯಾದಿ. ಪ್ರತಿಯುಗದಲ್ಲಿ ಒಂದು, ಎರಡು, ಮೂರರ ಕ್ರಮದಂತೆ ವರ್ಷಗಳ ಗಣನೆಯಾಗುತ್ತದೆ. ಉದಾಹರಣಾರ್ಥವಾಗಿ ಇಂಥದೊಂದು ಘಟನೆ ಮೆಇಜಿ ಯುಗದ ಮೂರನೆಯ ವರ್ಷದಲ್ಲಿ ನಡೆಯಿತು ಎಂದು ಜಪಾನಿಗಳು ಹೇಳುತ್ತಾರೆ.

ಈ ಕ್ರಮದಿಂದ ಎಷ್ಟೋ ಸಲ ಒಂದೇ ವರ್ಷದಲ್ಲಿ ಮೂರು ಮೂರು ವರ್ಷಗಳು ಬರುತ್ತವೆ. ೧೯೨೬ ಡಿಸೆಂಬರ್ ೨೫ ರಂದು ರಾತ್ರಿ ೧.೨೫ ಕ್ಕೆ ಸಮ್ರಾಟ್ ತೆಇಶೊ ನಿಧನ ಹೊಂದಿದ. ಆಗ "ತೆಇಶೊ" ಯುಗದ ಹದಿನೈದನೆಯ ವರ್ಷ ಸಮಾಪ್ತವಾಯಿತು. ಆರುದಿನಗಳ ನಂತರ ಡಿಸೆಂಬರ ೩೧ ರಂದು ಮಧ್ಯರಾತ್ರಿಗೆ ೧೯೨೬ ನೇ ವರ್ಷ ಮುಗಿದು ೧೯೨೭ ಪ್ರಾರಂಭವಾದಾಗ 'ಶೋವಾ' ಯುಗದ ಮೊದಲನೆಯ ವರ್ಷವೂ ಮುಗಿದು ಹೋಯಿತು.

ಜಪಾನಿ ವರ್ಷಗಣನೆಯ ಈ ವಿಚಿತ್ರವನ್ನು ಜನರ ವಯಸ್ಸಿನ ಲೆಕ್ಕದಲ್ಲೂ ಕಾಣಬಹುದು. ಯಾವನಾದರೊಬ್ಬ ಬಾಲಕ ೧೯೬೦, ಡಿಸೆಂಬರ ೨೫ ರಂದು ಹುಟ್ಟಿದರೆ ಡಿಸೆಂಬರ್ ೩೧ ರಂದು ೧೯೬೦ ನೇ ವರ್ಷ ಮುಗಿದಾಗ ಆ ಬಾಲಕನ ಜೀವನದ ಮೊದಲನೆಯ ವರ್ಷವೂ ಮುಗಿಯಿತು ಎಂದು ತಿಳಿಯುತ್ತಾರೆ. ೧೯೬೧ ರ ಜನವರಿ ೧ ರಂದು ಹುಡುಗನಿಗೆ ಆತ ಹುಟ್ಟಿ ಕೇವಲ ಏಳೇ ದಿನಗಳಾಗಿದ್ದರೂ, ಎರಡನೆಯ ವರ್ಷ ಆರಂಭವಾಯಿತು ಎನ್ನುತ್ತಾರೆ.

ಆದರೂ ಸರಕಾರೀ ಮತ್ತು ವ್ಯಾಪಾರ ವ್ಯವಹಾರ ಕಾರ್ಯಗಳ ಸುಗಮತೆಗಾಗಿ ಜಪಾನಿನಲ್ಲಿ ಇನ್ನೊಂದು ಶಕವೂ ರೂಢಿಯಲ್ಲಿದೆ. ಕ್ರಿ. ಶ. ಪೂ ೬೬೦ ರಲ್ಲಿ ಸಮ್ರಾಟ್ ಜಿಮ್ಮು ಸಿಂಹಾಸನವನ್ನೇರಿದ ದಿನದಿಂದ ಇದು ಪ್ರಾರಂಭವಾಗುತ್ತವೆ. ಆ ಲೆಕ್ಕದಿಂದ ಈಗ ಜಪಾನಿನಲ್ಲಿ ೨೬೨೦ ನೇ ವರ್ಷ ನಡೆಯುತ್ತಿದೆ.

## ಜಪಾನಿನ ಉಗಾದಿ

ಇತರ ದೇಶಗಳಂತೆ ಜಪಾನಿನಲ್ಲಿಯೂ ನೂತನ ವರ್ಷದ ಮೊದಲನೆಯ ದಿನ ನವವರ್ಷಾರಂಭ ಹಬ್ಬವನ್ನು ಆಚರಿಸುತ್ತಾರೆ. ಅಂದು ಗೃಹಿಣಿಯರು ಮನೆಗಳನ್ನು ಅಲಂಕರಿಸುತ್ತಾರೆ. ಮನೆಯ ಬಾಗಿಲುಗಳಿಗೆ ಹಸುರು ಗಳಗಳ ತುಂಡುಗಳು ಮತ್ತು ಪೀತದಾರು ಮರದ ಟೊಂಗೆಗಳ ತೋರಣ ಕಟ್ಟುತ್ತಾರೆ. ಪೀತದಾರುವು ದೀರ್ಘ ಜೀವನದ ಪ್ರತೀಕವೆಂದೂ ಗಳವು ಸಚ್ಚಾ-



ಯುಗಾದಿಯ "ಮೋಚಿ"



ನವವರ್ಷದ ಕಾರ್ಡ್

ರಿತ್ರ್ಯದ ಅರ್ಥಾತ್ ದೃಢತೆಯ ಪ್ರತೀಕವೆಂದೂ ಜಪಾನೀಯರು ತಿಳಿಯುತ್ತಾರೆ. ಇವುಗಳ ಜೊತೆಗೆ ತ್ರಿಕೋಣಾಕಾರದ ಕಾಗದದ ತುಂಡು ಪೋಣಿಸಿ ಬಾಗಿಲಿಗೆ ಕಟ್ಟುತ್ತಾರೆ.

ಅಂದು ನಸುಕಿನಲ್ಲಿ ಬಾವಿ ಅಥವಾ ನದಿಯಿಂದ ನೀರನ್ನು ತರುತ್ತಾರೆ. ಇದಕ್ಕೆ "ನವಜಾತ ಜಲ" ವೆನ್ನುತ್ತಾರೆ. ಈ "ನವಜಾತಜಲ"ದ ಸೇವನೆಯಿಂದ ಆಯುಷ್ಯ ಹೆಚ್ಚುತ್ತದೆ ಎಂದು ಜಪಾನೀಯರು ನಂಬುತ್ತಾರೆ. ಅಂದು ಅಗ್ನಿಯಿಂದ ತಯಾರಿಸಿದ "ಮೋಚಿ" ಎಂಬ ಕಜ್ಜಾಯವನ್ನೂ ಕಮಲ ಪುಷ್ಪದ ಬೇರಿನ ಗಡ್ಡೆಯನ್ನೂ ತಿನ್ನುತ್ತಾರೆ.

ನವವರ್ಷಾರಂಭದ ದಿನ ಹಿಂದಿನ ಸಾಲವನ್ನೆಲ್ಲ ತೀರಿಸುವುದು ತನ್ನ ಪರಮ ಕರ್ತವ್ಯ ಎಂದು ಪ್ರತಿಯೊಬ್ಬ ಜಪಾನಿಯೂ ತಿಳಿಯುತ್ತಾನೆ. ಅಂದು ಸಾಲ ತೀರಿಸಲಾಗದ ಎಷ್ಟೋ ಜನ ಆತ್ಮಗ್ಲಾನಿಯಿಂದ ಆತ್ಮಹತ್ಯವನ್ನು ಕೂಡ ಮಾಡಿಕೊಳ್ಳುತ್ತಾರೆ. ನವವರ್ಷಾರಂಭದ ದಿನ ನಂಟರಿಷ್ಟರು ಮತ್ತು ಮಿತ್ರರ ಮನೆಗೆ ಹೋಗಿ ಅವರನ್ನಭಿವಂದಿಸಿ ಶುಭವನ್ನು ಕೋರಿ ಬರುವ ಸಂಪ್ರದಾಯವೂ ಇದೆ. ಆದರೆ ಎಲ್ಲರನ್ನೂ



ಭೆಟ್ಟಿಯಾಗಿ ಮಾತಾಡುವುದು ಸಾಧ್ಯವಿರುವುದಿಲ್ಲವಾದ್ದರಿಂದ ಇಷ್ಟ ಮಿತ್ರರ ಮನೆಯ ಬಾಗಿಲ ಬಳಿ ತಮ್ಮ ವಿಜಿಟಿಂಗ್ ಕಾರ್ಡನ್ನು ಜಪಾನೀಯರು ಇಟ್ಟು ಬರುತ್ತಾರೆ.

ಜಪಾನೀಯರ "ಕಾನಮೇರಿ" ಅಥವಾ "ಕಾನಪೂಜಾ" ಎಂಬ ವ್ರತವು ಭಾರತೀಯರ "ಮಾಘಸ್ನಾನ" ದ ಮಾದರಿಯದೇ ಆಗಿದೆ. "ಕಾನ" ತಿಂಗಳಲ್ಲಿ ಜಪಾನಿನಲ್ಲಿ ಅತಿಶಯ ಚಳಿ ಇರುವುದು. ಶ್ರದ್ಧಾವಂತರಾದ ಬೌದ್ಧರು ಆ ತಿಂಗಳಲ್ಲಿ ರಾತ್ರಿಕಾಲದಲ್ಲಿ ಒಂದು ಬಿಳಿ ನಿಲುವಂಗಿ ತೊಟ್ಟು ಕೈಯಲ್ಲಿ ಕಾಗದದ ಕಂದೀಲನ್ನು ಹಿಡಿದುಕೊಂಡು ಭಗವಂತನ ದರ್ಶನಕ್ಕಾಗಿ ಬೌದ್ಧ ಮಂದಿರಗಳಿಗೆ ಹೋಗುತ್ತಾರೆ. ಪ್ರತಿಯೊಂದು ಮಂದಿರದಲ್ಲಿಯೂ ಅವರು ತಣ್ಣೀರು ಸ್ನಾನ ಮಾಡಬೇಕಾಗುತ್ತದೆ. ಹಿಂದಿನ ಕಾಲದಲ್ಲಿ ಭಕ್ತರು ಕೇವಲ ಕೌಪೀನವೊಂದನ್ನು ಧರಿಸಿ ಮಂದಿರಗಳಿಗೆ ಹೋಗುತ್ತಿದ್ದರು.

ಎಪ್ರಿಲ್ [illegible] ರಂದು ಬುದ್ಧ ಭಗವಂತನ ಜಯಂತಿಯನ್ನಾಚರಿಸುತ್ತಾರೆ. ಅಂದು ಶ್ರದ್ಧಾವಂತರಾದ ಬೌದ್ಧರು ಶಿಶು ಬುದ್ಧನ ಪ್ರತಿಮೆಗೆ ಸಿಹಿ ಚಹದಿಂದ ಅಭಿಷೇಕ ಮಾಡುತ್ತಾರೆ. ಈ ದಿವಸವನ್ನು "ಚೆರಿ ಹೂವಿನ ದಿನ" ವೆಂದು ಕರೆಯುತ್ತಾರೆ. ಏಕೆಂದರೆ ಚೆರಿ ಹೂವಿನ ಸುಗ್ಗಿ ಈ ದಿನವೇ ಆರಂಭವಾಗುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಕಮಲ ಪುಷ್ಪಕ್ಕಿರುವ ಸ್ಥಾನವೇ ಜಪಾನೀ ಸಂಸ್ಕೃತಿಯಲ್ಲಿ ಚೆರಿ ಹೂವಿಗಿದೆ. ಹಾಲೆಂಡಿನ ಪ್ರಸಿದ್ಧ ಟ್ಯೂಲಿಪ್ ಹೂಗಳಂತೆ ಚೆರಿ ಹೂಗಳ ಸಾಮ್ರಾಜ್ಯ ಕೇವಲ ಎರಡು ವಾರಗಳ ವರೆಗೆ ಮಾತ್ರ ಇರುವುದು. ಆದ್ದರಿಂದ ಈ ಹದಿನೈದು ದಿನ ಜಪಾನಿನಲ್ಲಿ ಒಂದು ಹಬ್ಬದ ಸಂಭ್ರಮವಿರುತ್ತದೆ. ನಗರಗಳ ಹೊರಗಿರುವ ಚೆರಿ ಉದ್ಯಾನವನಗಳಿಗೆ ಚೆರಿ ಹೂಗಳನ್ನು ನೋಡಲೆಂದು ಜನ ಗುಂಪು ಗುಂಪಾಗಿ ಹೋಗುತ್ತಾರೆ. ಭಾವುಕ ಕವಿ ಹೃದಯದವರಂತೂ ಕವಿತೆಗಳನ್ನು ಬರೆದು ಚೆರಿ ಗಿಡದ ಟೊಂಗೆಗಳಿಗೆ ಅಂಟಿಸುತ್ತಾರೆ.

ಪ್ರತಿವರ್ಷವೂ ಮೇ ೫ ರಂದು ತುಂಬ ವೈಭವದಿಂದ ಆಚರಿಸಲ್ಪಡುವ "ಟಾಂಗೊ-ನೊ-ಸೇಕು" ಪ್ರಾಮುಖ್ಯವಾಗಿ ಹುಡುಗರ ಹಬ್ಬ. ಅಂದು ಪೂರ್ವಜರ ಖಡ್ಗಾದಿಗಳನ್ನು ಪೂಜಿಸುತ್ತಾರೆ. ಕಾಗದದ ಮೀನುಗಳನ್ನು ತಯಾರಿಸಿ ಮನೆಯ ಎದುರಿಗೆ ಒಂದು ಕಂಬಕ್ಕೆ ಅವು ಗಾಳಿಯಲ್ಲಿ ಸದಾ ಹಾರಾಡುತ್ತಿರುವಂತೆ ಕಟ್ಟುತ್ತಾರೆ. ಮನೆಯಲ್ಲಿ ಎಷ್ಟು ಹುಡುಗರಿರುವರೊ ಅಷ್ಟು ಮೀನುಗಳನ್ನು ಕಟ್ಟುತ್ತಾರೆ.

ಮಕ್ಕಳಿಗೇ ಸಂಬಂಧಪಟ್ಟ ಇನ್ನೊಂದು ಹಬ್ಬವಿದೆ. "ಏಳು-ಐದು-ಮೂರು ಹಬ್ಬ" (ಶಿಚಿ ಗೋಸಾನ್) ಎಂಬ ಈ ಹಬ್ಬದಲ್ಲಿ ತಂದೆ ತಾಯಿಗಳು ತಮ್ಮ ಏಳು, ಐದು ಮತ್ತು ಮೂರು ವರ್ಷ ವಯಸ್ಸಿನ ಮಕ್ಕಳನ್ನು ಮಂದಿರಗಳಿಗೆ ಕರೆದೊಯ್ದು ಅಲ್ಲಿ ಅವರ ಕಲ್ಯಾಣಕ್ಕಾಗಿ ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ.

ಆದರೆ ಜಪಾನಿ ಮಕ್ಕಳು ಹೆಚ್ಚಾಗಿ ಪ್ರೀತಿಸುವ ಹಬ್ಬವೆಂದರೆ "ಗೊಂಬೆ ಹಬ್ಬ". ಇದು ಮಾರ್ಚ್ ೩ ರಂದು ಬರುತ್ತದೆ. ಅಂದು ಮನೆಯಲ್ಲಿರುವ ಗೊಂಬೆಗಳನ್ನೆಲ್ಲ ಅಲಂಕರಿಸಿ ಒಂದು ವೇದಿಕೆಯ ಮೇಲಿಡುತ್ತಾರೆ. ವೇದಿಕೆಗೆ ಐದು ಮೆಟ್ಟಲುಗಳಿದ್ದು ತೀರ ಮೇಲಿನ ಮೆಟ್ಟಲಿನ ಮೇಲೆ ಸುಂದರ ಉಡುಪಿನ ರಾಜ-ರಾಣಿಯರ ಗೊಂಬೆಗಳನ್ನು ಇಡುತ್ತಾರೆ. ಮತ್ತೆ ಈ ಗೊಂಬೆಗಳೂ ಸಾಮಾನ್ಯವೇನಲ್ಲ. ಇವು ಬಹುಶಃ ಪೈತೃಕ ಸಂಪತ್ತಾಗಿದ್ದು ಇವನ್ನು ತುಂಬ ಕಾಳಜಿಯಿಂದ ಸುರಕ್ಷಿತವಾಗಿಟ್ಟಿರುತ್ತಾರೆ. ತಮ್ಮ ಮನೆಯ ಗೊಂಬೆಗಳ ಸೊಬಗನ್ನು ನೋಡಲು ಮಕ್ಕಳು ತಮ್ಮ ಮಿತ್ರರನ್ನು ಆಮಂತ್ರಿಸುತ್ತಾರೆ. ದಕ್ಷಿಣ ಭಾರತದಲ್ಲಿ ನವರಾತ್ರಿಯ ಹಬ್ಬದಲ್ಲಿ ಜರುಗುವ ಗೊಂಬೆ ಹಬ್ಬವನ್ನು ಜಪಾನೀಯರ ಈ ಗೊಂಬೆ ಹಬ್ಬ ಹೋಲುತ್ತದೆ.



## ಮೈಲುಗಲ್ಲುಗಳು

ಜಪಾನಿನಲ್ಲಿ ಮಕ್ಕಳು ಹುಟ್ಟಿದ ಏಳನೇ ದಿನ ನಾಮಕರಣ ಮಾಡುತ್ತಾರೆ. ಅಂದೇ ಮುಂಡನವನ್ನೂ ಮಾಡುತ್ತಾರೆ. ಅಂದು ಕೂಸನ್ನು ಮಂದಿರಕ್ಕೆ ಕರೆದೊಯ್ಯುತ್ತಾರೆ. ೧೨೦ ದಿನಗಳ ನಂತರ ಮಗುವಿಗೆ ಒಂದೆರಡು ಹಲ್ಲು ಬಂದ ನಂತರ ಅನ್ನಪ್ರಾಶನ ಮಾಡಿಸುತ್ತಾರೆ. ಮಗುವಿನ ಮೊದಲನೆಯ ಹುಟ್ಟುಹಬ್ಬವನ್ನೂ ಆಚರಿಸುತ್ತಾರೆ. ಆದರೆ ಪ್ರತಿ ವರ್ಷವೂ ಹುಟ್ಟುಹಬ್ಬವನ್ನಾಚರಿಸುವ ರೂಢಿ ಅಲ್ಲಿ ಇಲ್ಲ.

ಜಪಾನಿಗಳ ಜೀವನದಲ್ಲಿ ೬೧ ನೆಯ ವರ್ಷಕ್ಕೆ ಬಹು ಮಹತ್ವವಿದೆ. ೬೦ ವರ್ಷ ಪೂರ್ಣವಾದ ದಿನ ಜಪಾನಿ ಸ್ತ್ರೀ-ಪುರುಷರು ಕೆಂಪು ಟೊಪ್ಪಿಗೆಯನ್ನು ಧರಿಸುತ್ತಾರೆ. ದೂರದೂರದ ನೆಂಟರು, ಮಿತ್ರರು, ಅಂದು ಅವರ ಮನೆಗೆ ಬರುತ್ತಾರೆ. ೭೦, ೭೭ ಮತ್ತು ೮೮ ವರ್ಷಗಳು ಪೂರ್ಣವಾದಾಗಲೂ ಇದೇ ಬಗೆಯ ಸಮಾರಂಭವನ್ನಾಚರಿಸುವರು.

ಪುರುಷರ ಜೀವನದಲ್ಲಿ ೨೫, ೪೨ ಮತ್ತು ಸ್ತ್ರೀಯರ ಜೀವನದಲ್ಲಿ ೧೯ ಮತ್ತು ೩೩ನೇ ವರ್ಷ





" ಸುಕಿಯಾಕಿ " ( ಏಕಪಾತ್ರ ) ಭೋಜನ ಕೂಟ

ಗಳು ತುಂಬ ದುರ್ಭಾಗ್ಯದ ವರ್ಷಗಳು ಎಂದು ಜಪಾನಿಗಳು ತಿಳಿಯುತ್ತಾರೆ. ದುರ್ಭಾಗ್ಯ ನಿವಾರಣೆಗಾಗಿ ಆ ವರ್ಷಗಳಲ್ಲಿ ವಿಶೇಷ ಬಗೆಯ ವ್ರತ–ಪೂಜಾದಿಗಳನ್ನು ನೆರವೇರಿಸುತ್ತಾರೆ.

## ಸಾಮುದ್ರಿಕ ಎಲ್ಲವನ್ನೂ ನಿರ್ಧರಿಸುತ್ತದೆ

ಮುಖ ಸಾಮುದ್ರಿಕ ಶಾಸ್ತ್ರದಲ್ಲಿ ಇವರಿಗೆ ಅಚಲ ಶ್ರದ್ಧೆಯಿದೆ. ಮಕ್ಕಳ ಜೀವನೋದ್ಯೋಗವನ್ನು ನಿಶ್ಚಯಿಸುವಾಗ ಜಪಾನಿ ತಂದೆ ಮಗನ ಅಭಿರುಚಿಯನ್ನು ಗಮನಿಸುವ ಬದಲು ಅವನನ್ನು ಮುಖಸಾಮುದ್ರಿಕ ಪಂಡಿತನಲ್ಲಿಗೆ ಕರೆದೊಯ್ಯುತ್ತಾನೆ. ಹುಡುಗನ ಮುಖಲಕ್ಷಣಗಳನ್ನು ನಿರೀಕ್ಷಿಸಿ ಪಂಡಿತನು ಅವನು ಯಾವ ಉದ್ಯೋಗವನ್ನು ಸ್ವೀಕರಿಸಬೇಕು ಎಂದು ಹೇಳುತ್ತಾನೆ. ಇದರಂತೆ ಮದುವೆಯ ಮೊದಲು ಜಪಾನಿ ಯುವಕನು ತನ್ನ ಭಾವಿ ವಧುವಿನ ಚಿತ್ರವನ್ನು ಮುಖ ಸಾಮುದ್ರಿಕ ಪಂಡಿತನಿಗೆ ತೋರಿಸಿ ಆ ಮುಖ ಲಕ್ಷಣದ ಕನ್ಯೆಯನ್ನು ಲಗ್ನವಾದರೆ ತನ್ನ ಭಾವೀ ಜೀವನ ಸುಖಮಯವಾದೀತೇ ಎಂದು ಕೇಳುತ್ತಾನೆ.

ಜ್ಯೋತಿಷಿಗಳ ಉದ್ಯೋಗವೂ ಜಪಾನಿನಲ್ಲಿ ಚೆನ್ನಾಗಿ ನಡೆಯುತ್ತದೆ. ಗೃಹಪ್ರವೇಶ, ವ್ಯಾಪಾರದ ಆರಂಭ, ಯಾತ್ರೆ ಮುಂತಾದವುಗಳ ಶುಭ ಮುಹೂರ್ತ ತಿಳಿದುಕೊಳ್ಳಲು, ಕಾಣೆಯಾದ ವ್ಯಕ್ತಿಗಳ ಪತ್ತೆ ಹಚ್ಚಲು, ಧನ ಲಾಭ, ಪುತ್ರ ಲಾಭಾದಿಗಳ ಯೋಗವನ್ನು ಅರಿತುಕೊಳ್ಳಲು ಜಪಾನಿಗಳು ಜ್ಯೋತಿಷಿಗಳ ಬಳಿಗೆ ಹೋಗುತ್ತಾರೆ. ಪ್ರತಿಯೊಂದು ಕಾರ್ಯಕ್ಕೂ ಶುಭ-ಅಶುಭ ಕಾಲವಿರುತ್ತದೆಂದು ಜಪಾನಿಗಳು ದೃಢವಾಗಿ ನಂಬುತ್ತಾರೆ.

ಜಪಾನಿ ಜ್ಯೋತಿಷ್ಯದಲ್ಲಿ ಹನ್ನೆರಡು ವರ್ಷಗಳ ಚಕ್ರವಿದ್ದು ಪ್ರತಿ ವರ್ಷಕ್ಕೂ ಒಂದೊಂದು ಪ್ರಾಣಿ ಅಧಿದೇವತೆಯಾಗಿದೆ: ೧) ನೇ [ಇಲಿ], ೨) ಉಶಿ [ಎತ್ತು], ೩) ತೋರಾ [ಹುಲಿ], ೪) ಊ [ಮೊಲ], ೫) ತಾತ್ಸು [ಸರ್ಪದೈತ್ಯ], ೬) ಮೀ [ಸರ್ಪ], ೭) ಊಮಾ [ಕುದುರೆ], ೮) ಹಿತ್ಸುಜಿ [ಕುರಿ], ೯) ಸಾರು [ಮಂಗ], ೧೦) ತೋರಿ [ಹುಂಜ], ೧೧) ಇನ [ನಾಯಿ], ಮತ್ತು ೧೨) ಈ [ಕಾಡುಹಂದಿ].



ಜ್ಯೋತಿಷಿ

ಜಪಾನಿ ಜ್ಯೋತಿಷಿಗಳು ದಿನದ ೨೪ ತಾಸುಗಳನ್ನು ಎರಡೆರಡರಂತೆ ಈ ಹನ್ನೆರಡು ಪ್ರಾಣಿಗಳಲ್ಲಿ ಹಂಚಿದ್ದಾರೆ ರಾತ್ರಿ ೧೨ ರಿಂದ ೨ ರವರೆಗೆ ಇಲಿಯ ಕಾಲ. ಆ ಮೇಲೆ ಎರಡು ತಾಸು ಎತ್ತಿನದು. ಹೀಗೆ ಕ್ರಮಪ್ರಕಾರ ಈ ಕಾಲವಿಭಜನೆಯಿದೆ.

ಪ್ರಾಚೀನ ಕಾಲದಲ್ಲಿ ಎತ್ತಿನ ಕಾಲ ತಿರಸ್ಕೃತ ಪ್ರೇಮಿಗಳಿಗೆ ಅತ್ಯಂತ ಶುಭವೆಂದು ತಿಳಿಯಲ್ಪಡುತ್ತಿತ್ತು. ಪ್ರೇಮ ತಿರಸ್ಕೃತರಾದ ಹುಡುಗಿಯರು ತಮ್ಮ ಪ್ರಿಯಕರನ ಮೇಲಿನ

ಕೇಡು ತೀರಿಸಿಕೊಳ್ಳಲು ಈ ಕಾಲದಲ್ಲಿ ಮಂತ್ರ ಮಾಟ ಮಾಡಿಸುತ್ತಿದ್ದರು. ಹುಲ್ಲಿನ ಗಂಡು ಪ್ರತಿಮೆಯೊಂದನ್ನು ತಯಾರಿಸಿ ರಾತ್ರಿನ ಕಾಲದಲ್ಲಿ (ರಾತ್ರಿ ೩ ರಿಂದ ೫ ರೊಳಗೆ) ಅದನ್ನು ಪ್ಯಾದೊನ ಮಂದಿರಕ್ಕೊಯ್ಯುತ್ತಿದ್ದರು. ಅವರ ಕೈಯಲ್ಲಿ ಒಂದು ಸುತ್ತಿಗೆ, ಹಲ್ಲುಗಳ ನಡುವೆ ಮೊಳೆಗಳು, ತಲೆಯ ಮೇಲೆ ಕಾಲುಮೇಲಾಗಿಟ್ಟ ಒಂದು ಟೀಪಾಯಿ ಇರುತ್ತಿತ್ತು. ಈ ಟೀಪಾಯಿಯ ಮೇಲೆ ಉರಿಯುವ ಮೂರು ಮೇಣ ಬತ್ತಿಗಳನ್ನಿಡುತ್ತಿದ್ದರು. ತಲೆಗೂದಲನ್ನು ಮುಡಿ ಕಟ್ಟದೆ ಬಿಚ್ಚಿಟ್ಟು ಎದೆಯ ಬಳಿ ಒಂದು ಕನ್ನಡಿಯನ್ನು ಅವರು ಇಟ್ಟುಕೊಳ್ಳುತ್ತಿದ್ದರು. ಮಂದಿರಕ್ಕೆ ಹೋದ ಮೇಲೆ ಪ್ರತಿಮೆಯನ್ನು ಒಂದು ಗಿಡದ ಮೇಲಿಟ್ಟು ಮೊಳೆ ಹೊಡೆದು ಭದ್ರವಾಗಿಸುತ್ತಿದ್ದರು. "ಉಶಿ ತೋಕಿ—ಮಾಯಿರಿ" ಎಂಬ ಈ ಮೋಡಿಯನ್ನು ಪುನಃ ಪುನಃ ಅವರು ಮಾಡುತ್ತಿದ್ದರು. ಅವರ ಪ್ರೇಮವನ್ನು ಧಿಕ್ಕರಿಸಿದಾತ ರೋಗಗ್ರಸ್ತನಾಗಿ ಸತ್ತು ಹೋಗುತ್ತಿದ್ದ!

ಹುಲಿ ದಿನ ಕಾರ್ಯಾರಂಭಕ್ಕೆ ಅಶುಭ. ಮಂಗ ವರ್ಷವು ಜನ್ಮಕ್ಕೆ ಶುಭ ದಿನ, ಆದರೆ ವಿವಾಹಕ್ಕೆ ಅಶುಭ. ಕೋಳಿ ವರ್ಷವನ್ನು ಜಪಾನಿಗಳು ಶುಭವೆಂದು ತಿಳಿಯುತ್ತಾರೆ. ಕೋಳಿಯಲ್ಲಿ ಐದು ಸದ್ಗುಣಗಳಿವೆಯೆಂದು ಅವರ ಭಾವನೆಯಿದೆ. ಅದರ ತುರಾಯಿ ಸಭ್ಯತೆಗೆ ಪ್ರತೀಕವಾಗಿದೆ. ಕೋಳಿ ಶತ್ರುವಿನೊಡನೆ ಎದೆಗಾರಿಕೆಯಿಂದ ಕಾದುವುದು ಸಾಹಸದ ಗುರುತಾಗಿದೆ. ತಿನ್ನಲು ಏನಾದರೂ ಸಿಕ್ಕರೆ ಕೂಗಿ ಇತರ ಕೋಳಿಗಳನ್ನು ಕರೆಯುವುದು ಅದರ ಔದಾರ್ಯದ ಲಕ್ಷಣವಾಗಿದೆ. ಅದರ ಬಲವಾದ ಉಗುರುಗಳು ಸೈನಿಕ ಶಕ್ತಿಯ ದ್ಯೋತಕವಾಗಿವೆ. ಮುಂಜಾವಿನ ಸೂಚನೆಯನ್ನು ಸರಿಯಾಗಿ ಅದು ಕೊಡುವುದು ಪ್ರಾಮಾಣಿಕತೆಯ ನಿದರ್ಶನವಾಗಿದೆ.

ಶಿಂತೋ ಪುರಾಣದಲ್ಲಿ ಕೋಳಿಗಳಿಗೆ ತುಂಬ ಮಹತ್ವವಿದೆ. ಅವರಲ್ಲೊಂದು ಕಥೆಯಿದೆ. ಒಮ್ಮೆ ಸೂರ್ಯದೇವಿ ತನ್ನ ಬಂಧು ಸುಸಾನೊ-ಓನೊಡನೆ ಜಗಳಾಡಿ ಬೇಸರದಿಂದ ಒಂದು ಗವಿಯಲ್ಲಿ ಹೋಗಿ ಅಡಗಿಕೊಂಡಳು. ಆಗ ಜಗತ್ತಿನಲ್ಲೆಲ್ಲ ಕತ್ತಲೆ ವ್ಯಾಪಿಸಿತು. ಆದರೆ ಕೋಳಿ ನಿತ್ಯ ಕ್ರಮದಂತೆ ಮುಂಜಾವಿನ ಸೂಚನೆ ಕೊಟ್ಟಿತು. ತಾನಿಲ್ಲದಿದ್ದರೂ ಬೆಳಗಾಗುವುದೆಂದು ಆಗ ಸೂರ್ಯದೇವಿಗೆ ಅನಿಸಲು ಅವಳು ಕೋಪವನ್ನು ತ್ಯಜಿಸಿ ಗುಹೆಯಿಂದ ಹೊರಗೆ ಬಂದಳು.

## ಶುನಕನ ಹಿರಿಮೆ

ನಾಯಿ ಅಶುಭ ನಿವಾರಕ ಪ್ರಾಣಿಯೆಂದು ಜಪಾನಿಗಳು ತಿಳಿಯುತ್ತಾರೆ. ನಾಯಿಗಾಗಿ ಚೀನೀ ಚಿತ್ರ ಲಿಪಿಯಲ್ಲಿ ಇರುವ ಸಂಕೇತವನ್ನು ತಮ್ಮ ಮಕ್ಕಳ ತಲೆಯ ಮೇಲೆ ಬರೆದು ತಾಯಂದಿರು ನಿಶ್ಚಿಂತರಾಗುತ್ತಾರೆ. ಅದರಿಂದ ಮಕ್ಕಳನ್ನು ರೋಗಾದಿಗಳು ಪೀಡಿಸುವುದಿಲ್ಲ. ಅವು ಮಕ್ಕಳ ಸಮೀಪಕ್ಕೆ ಬಂದರೆ ನಾಯಿ ಬೊಗಳಿ ಅವನ್ನು ಓಡಿಸುವುದೆಂದು ಅವರು ತಿಳಿಯುತ್ತಾರೆ.

ಪ್ರತಿ ಆರನೆಯ ದಿನವು "ತೋಮೊಬಿಕಿ" ದಿನವಾಗಿರುತ್ತದೆ. ಆ ದಿನ ಜಪಾನಿನಲ್ಲಿ ಹೆಣಗಳನ್ನು ಹೂಳುವುದಿಲ್ಲ. ಏಕೆಂದರೆ ಆ ದಿನ



ಶಿಂಟೋ ದೇಗುಲದ ದ್ವಾರಪಾಲಕರು

ಹೆಣವನ್ನು ಹುಗಿದಲ್ಲಿ ಮೃತವ್ಯಕ್ತಿಯ ಆರು ಸ್ವಜನರು ಮೃತ್ಯುವಿನ ಬಾಯಿಗೆ ಬೀಳುತ್ತಾರೆಂದು ಅವರು ನಂಬುತ್ತಾರೆ. "ತೋವೊ ಬಿಕಿ" ದಿನ ಹೆಣವನ್ನು ಹೂಳುವುದು ಅನಿವಾರ್ಯವೇ ಆದಲ್ಲಿ ಮೃತ್ಯುದೇವತೆ ವಂಚಿತಳಾಗಲೆಂದು ಹಣದ ಜೊತೆಗೆ ಆರು ಮಣ್ಣಿನ ಗೊಂಬೆಗಳನ್ನು ಹೂಳುತ್ತಾರೆ.

"ಮನೆ ಬಾಡಿಗೆಗೆ ಕೊಡುವುದಿದೆ" ಎಂಬ ಹಲಗೆಯನ್ನು ಜಪಾನಿಗಳು ನೆಟ್ಟಗೆ ತೂಗ ಹಾಕದೆ ಡೊಂಕಾಗಿ ತೂಗಹಾಕುತ್ತಾರೆ. ಅದರಿಂದ ಬೇಗನೆ ಬಾಡಿಗೆದಾರರು ಸಿಗುತ್ತಾರಂತೆ. ಇದರಂತೆಯೆ ಯಾವನಿಗಾದರೂ 'ಓಕೋರಿ' ಜ್ವರ ಬಂದರೆ ಹುಲ್ಲಿನ ಗೊಂಬೆಯೊಂದನ್ನು ತಯಾರಿಸಿ ಅದನ್ನು ರೋಗಿಯ ಶರೀರಕ್ಕೆ ಮುಟ್ಟಿಸಿ ನದಿಯಲ್ಲಿ ಚೆಲ್ಲಿಕೊಡುತ್ತಾರೆ. ಈ ಗೊಂಬೆ ರೋಗಿಯ ಜ್ವರವನ್ನೆಲ್ಲ ಹೀರಿಕೊಂಡು ಬಿಡುತ್ತದಂತೆ. ಚರ್ಮರೋಗಗ್ರಸ್ತನು ಹುಲ್ಲಿನ ದೊಡ್ಡ ಬುಟ್ಟಿಯನ್ನು ತಲೆಗೆ ಹಾಕಿಕೊಂಡು ಅದು ತೇಲಿ ಹೋಗುವಂತೆ ನದಿಯಲ್ಲಿ ಮುಳುಗು ಹಾಕುತ್ತಾನೆ. ಬುಟ್ಟಿಯ ಜೊತೆ ಚರ್ಮರೋಗವೂ ತೇಲಿಹೋಗುವುದಂತೆ.

ಜಪಾನಿಗಳು ಹೆಣಗಳನ್ನು ಉತ್ತರಕ್ಕೆ ತಲೆ ಮಾಡಿ ಮಲಗಿಸುತ್ತಾರೆ. ರಾತ್ರಿ ಮಲಗಿದಾಗಲೆ ಪ್ರಾಣಹೋದೀತೆಂಬ ಭಯದಿಂದ ಜಪಾನಿಗಳು ಉತ್ತರಕ್ಕೆ ತಲೆ ಹಾಕಿ ಮಲಗುವುದಿಲ್ಲ. ಈಶಾನ್ಯ ದಿಕ್ಕೂ ಅಶುಭವೆಂದು ಇವರು ತಿಳಿಯುತ್ತಾರೆ.

ದಿಕ್ಕುಗಳಂತೆ ಅಂಕಿಗಳೂ ಶುಭ-ಅಶುಭವಾಗಿರುತ್ತವೆ. ಏಳು ಮತ್ತು ಕೊನೆ ಏಳಾಗಿರುವ ಎಲ್ಲ ಅಂಕೆಗಳೂ– ೭, ೧೭, ೨೭, ೩೭ ಇತ್ಯಾದಿ ಅಶುಭವಾಗಿವೆ. ೩ ಮತ್ತು ೫ ಶುಭಸಂಖ್ಯೆಗಳು. ಆದ್ದರಿಂದ ಜಪಾನಿಗಳು ವಾಸಕ್ಕಾಗಿ ಹೊಸ ಮನೆಗೆ ಹೋದಾಗ ಆ ಮನೆಯ ಎಡಬಲದಲ್ಲಿರುವ ಎರಡು ಮನೆಗಳು ಮತ್ತು ಮುಂದಿರುವ ಮೂರು ಮನೆಗಳು– ಹೀಗೆ ಕೇವಲ ಐದು ಮನೆ



ಗಳಿಗೆ ಮಾತ್ರ "ಸೋಬಾ" (ಅಕ್ಕಿ ಹಿಟ್ಟಿನ ಶೇವು) ವನ್ನು ಕಾಣಿಕೆಯಾಗಿ ಕೊಡುತ್ತಾರೆ.

## ಶಕುನ

ಉಪ್ಪು ಎಂದರೆ ಜಪಾನಿಗಳಿಗೆ ಸರ್ವಪಾಪ ಹಾರಿಯಾದ ವಸ್ತು. ಅದು ದುರ್ಭಾಗ್ಯವನ್ನು ದೂರ ಓಡಿಸುತ್ತದೆ. ಉಪಹಾರಗೃಹ, ಗೈಷಾ ಗೃಹ, ಮತ್ತು ಅಂಗಡಿಗಳ ಪ್ರವೇಶದ್ವಾರದಲ್ಲಿ ಉಪ್ಪಿನ ಚಿಕ್ಕ ರಾಶಿಯನ್ನು ಒಟ್ಟಿರುತ್ತಾರೆ. ಇದರಿಂದ ದುರದೃಷ್ಟಗಳು ಒಳಗೆ ಪ್ರವೇಶಿಸುವುದಿಲ್ಲ, ಗಿರಾಕಿಗಳು ಹೆಚ್ಚುತ್ತಾರೆ ಎಂದು ಅವರು ಅನ್ನುತ್ತಾರೆ. ಒಳಗೆ ಬರುವಾಗ ಯಾರದಾದರೂ ಕಾಲು ತಗಲಿ ಒಂದಿಷ್ಟು ಉಪ್ಪು ಮನೆಯೊಳಗೆ ಚೆಲ್ಲಿತಾದರೆ ಅದು ಅತ್ಯಂತ ಶುಭ ಶಕುನ ಎಂದು ತಿಳಿಯುತ್ತಾರೆ. ಕುಸ್ತಿಯ ಕಣಗಳಲ್ಲಿ ಕೂಡ ಜಟ್ಟಿಗಳು ಮುಷ್ಟಿಗಟ್ಟಲೆ ಉಪ್ಪನ್ನು ನಾಲ್ಕೂ ದಿಕ್ಕುಗಳಿಗೆ ತೂರುತ್ತಾರೆ. ಇದರಿಂದ ಯಾವ ಭೂತ-ಪಿಶಾಚಿಯೂ ಕಣವನ್ನು ಪ್ರವೇಶಿಸಲು ಸಮರ್ಥವಾಗುವುದಿಲ್ಲವೆಂದು ಇವರ ತಿಳಿವಳಿಕೆಯಿದೆ.

ಚಕಮಕಿ ಕಲ್ಲಿನಲ್ಲೆಯೂ ಇಂಥ ದುರ್ಭಾಗ್ಯ ನಿವಾರಣ ಶಕ್ತಿಯಿದೆಯೆಂದು ಜಪಾನಿಗಳು ತಿಳಿಯುತ್ತಾರೆ. ಪ್ರತಿನಿತ್ಯವೂ ಕತ್ತಲಾದೊಡನೆ ನಿಷ್ಠಾವಂತ ಜಪಾನಿಯು ಮನೆಯ ಪ್ರತಿಯೊಂದು ಕೋಣೆಗೂ ಹೋಗಿ ಚಕಮಕಿ ಕಲ್ಲು ಕಟಿದು ಮೂರು ಮೂರು, ನಾಲ್ಕು ನಾಲ್ಕು ಕಿಡಿಗಳನ್ನು ಹೊತ್ತಿಸುತ್ತಾನೆ. ಅದರಂತೆ ಗೈಷಾ ಬಾಲಿಕೆಯರು ಗ್ರಾಹಕರ ಮನೆಗಳಿಗೆ ತೆರಳಲೆಂದು ಮನೆಯಿಂದ ಹೊರಡುವಾಗ, ಗೈಷಾ ಗೃಹದ ಯಜಮಾನತಿಯರು ಹುಡುಗಿಯರ ಬೆನ್ನಿನ ಕಡೆ ಹಾರುವಂತೆ ಚಕಮಕಿ ಕಲ್ಲಿನಿಂದ ಕಿಡಿ ಹಾರಿಸುತ್ತಾರೆ. ಹೀಗೆ ಮಾಡುವುದರಿಂದ ಗೈಷಾ ಹುಡುಗಿಯರಿಗೆ ಯಾರ ದೃಷ್ಟಿಯೂ ತಾಗುವುದಿಲ್ಲ.

ಟೋಕಿಯೋದ ಯುತನಜಿ ಮಂದಿರದ ಪ್ರವೇಶದ್ವಾರದಲ್ಲಿ "ಶೀತಲಾ ದೇವಿಯ ಕಲ್ಲು" ಎಂಬ ಕಲ್ಲಿದೆ. ಮಕ್ಕಳಿಗೆ ಈ ಕಲ್ಲಿನ ಸ್ಪರ್ಶ ಮಾಡಿಸಿದರೆ ಅವರಿಗೆ ಮೈಲಿ ಬೇನೆ ಬರುವುದಿಲ್ಲವೆಂದೂ ಬಂದರೂ ಬಹು ಸೌಮ್ಯವಾಗಿರುವುದೆಂದೂ ಜಪಾನಿಗಳು ತಿಳಿಯುತ್ತಾರೆ. ಟೋಕಿಯೋದಲ್ಲಿ ಸಿಡುಬು- ಮೈಲಿಗಳ ಹಾವಳಿಯೆದ್ದಾಗ ಯುತನಜಿ ಮಂದಿರದಲ್ಲಿ ಜನರ ಗದ್ದಲವೊ ಗದ್ದಲವಿರುತ್ತದೆ.

ಪ್ರತಿವರ್ಷ ಮಳೆಗಾಲದಲ್ಲಿ ಜಪಾನಿ ಮಾತೆಯರು ನದಿ ಮತ್ತು ಕೆರೆಗಳಲ್ಲಿ ಸವತೆಕಾಯಿಗಳನ್ನು ತೇಲಿಬಿಡುತ್ತಾರೆ. ಇದರಿಂದ ನೀರಿನಲ್ಲಿರುವ "ಕಪ್ಪಾ" ಸವತೇಕಾಯಿಯನ್ನು ತಿಂದು ಸಂತುಷ್ಟವಾಗಿ ಮಕ್ಕಳನ್ನು ನೀರಲ್ಲಿ ಮುಳುಗಿಸಿ ಕೊಲ್ಲುವುದಿಲ್ಲ ಎಂದು ಅವರ ಭಾವನೆಯಿದೆ. "ಕಪ್ಪಾ" ಒಂದು ಅದ್ಭುತವಾದ ಕಾಲ್ಪನಿಕ ಪ್ರಾಣಿ. ಅದರ ತಲೆ ಮಂಗನಂತೆ, ಮುಂಡ ಆಮೆಯಂತೆ, ಕಾಲು ಕಪ್ಪೆಯಂತೆ ಇದ್ದು ಅದು ೪ ಅಡಿ ಉದ್ದ, ೯ ಇಂಚು ಎತ್ತರವಾಗಿರುವುದು. ಅದರ ತಲೆಯ ಮಧ್ಯ ಒಂದು ಪೇಲಿಯಂತಿದ್ದು ಅದರಲ್ಲಿ ಅಮೃತ



ಚಕಮಕಿ

ಜಲ ತುಂಬಿರುತ್ತದೆ. ಈ "ಜಲ"ದ ಮಹಿಮೆಯಿಂದಲೇ "ಕಪ್ಪಾ" ಬಹು ಶಕ್ತಿಶಾಲಿಯಾಗಿರುತ್ತದೆ. ಆಕಸ್ಮಾತ್ತಾಗಿಯೇನಾದರೂ "ಕಪ್ಪಾ" ದೊಡನೆ ಹೋರಾಟವೇ ಒದಗಿಬಂದಲ್ಲಿ ಮೊಟ್ಟಮೊದಲು ಅದರ ತಲೆಯನ್ನು ಬಗ್ಗಿಸಿ ಅಮೃತ ಜಲ ಚಲ್ಲಿ ಹೋಗುವಂತೆ ಮಾಡಬೇಕು. ಅದರಿಂದ ಅದು ಬಲಹೀನವಾಗಿ ಬಿಡುವುದು. ಜಪಾನಿನಲ್ಲಿ ನೀರಿನಲ್ಲಿ ಮುಳುಗಿ ಸತ್ತವರ ಮರಣಕ್ಕೆಲ್ಲ "ಕಪ್ಪಾ" ಹೊಣೆಗಾರ ಎಂದು ತಿಳಿಯುತ್ತಾರೆ.

## ಬೈಗಳೇ ಇಲ್ಲದ ಭಾಷೆ

ಉದ್ವೇಗ-ಆವೇಶಗಳನ್ನು ಪ್ರಕಟ ಮಾಡುವುದು ಜಪಾನಿನಲ್ಲಿ ಅಸಭ್ಯತನ. ಆದ್ದರಿಂದಲೇ ಇರಬೇಕು, ಜಪಾನಿ ಭಾಷೆಯಲ್ಲಿ ಬೈಗಳ ಶಬ್ದ ಇಲ್ಲವೇ ಇಲ್ಲ. ತಮ್ಮ ಜೀವನದ ಅತ್ಯಂತ ದುಃಖದಾಯಕ ಸಂಗತಿಯನ್ನು ಕೂಡ ಅವರು ಹಸನ್ಮುಖದಿಂದಲೇ ಹೇಳುತ್ತಾರೆ. ಜಪಾನಿ ಗೃಹಸ್ಥನಿಗೆ ತನ್ನ ಹೆಂಡತಿ ಮತ್ತು ಮಕ್ಕಳ ಬಗ್ಗೆ ಎಷ್ಟೇ ಅಭಿಮಾನವಿದ್ದರೂ ಆತ "ನನ್ನ ಮೂರ್ಖ ಹೆಂಡತಿ," "ನನ್ನ ದರಿದ್ರ ಮಗ" ಎಂದೇ ಅವರ ಪ್ರಸ್ತಾಪ ಬಂದಾಗಲೆಲ್ಲ ಹೇಳುತ್ತಾನೆ. ಆದರೆ ಎರಡನೆಯವರ ಹೆಂಡರ ಮಾತು ಬಂದಾಗ "ನಿಮ್ಮ ಮನೆಯ ಲಕ್ಷ್ಮಿ" ಎಂದೇ ಹೇಳುತ್ತಾನೆ.

ಸಂಯಮ ಮತ್ತು ಸಮಾನ ಭಾವಗಳು ಜಪಾನೀ ಜೀವನದ ಸಾರವಾಗಿವೆ. ಅವರ ಕಲೆಯಲ್ಲಿ ಒಂದು ವಿಧವಾದ ಅನುದ್ವೇಗವನ್ನು ಕಾಣಬಹುದು. ನಿಸರ್ಗದೊಡನೆ ಸಮರಸವಾಗುವುದೇ ಜಪಾನೀ ಕಲೆಯ ಮೂಲ ಮಂತ್ರವಾಗಿದೆ.

ಚಂದ್ರದರ್ಶನ ಅಲ್ಲೊಂದು ದೊಡ್ಡ ಹಬ್ಬ. ಅದರ ಧಾರ್ಮಿಕ ಮಹತ್ವ ಕಡಿಮೆಯಿದ್ದರೂ ಸಾಂಸ್ಕೃತಿಕ ಮಹತ್ವ ಅಧಿಕವಾಗಿದೆ. ಅಂದು ಮಾತೆಯರು ಚಂದ್ರನಿಗೆ ಫಲ-ಮಿಠಾಯಿಗಳನ್ನು ನೈವೇದ್ಯ ಮಾಡಿ ಮಕ್ಕಳನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು ಅವಕ್ಕೆ ಚಂದ್ರದರ್ಶನ ಮಾಡಿಸುತ್ತಾರೆ. ವರ್ಷದಲ್ಲಿ ಎರಡು ಸಲ, ಅಗಸ್ಟ ೧೫ ಮತ್ತು ಸೆಪ್ಟೆಂಬರ್ ೩೩-ಈ ಎರಡು ದಿನಗಳಲ್ಲಿ ಈ ಹಬ್ಬವನ್ನು ಸಡಗರದಿಂದ ಆಚರಿಸುತ್ತಾರೆ.

ಕೀಟಸಂಗೀತ ಶ್ರವಣ ಹಬ್ಬವೂ ಒಂದು ಕಲಾತ್ಮಕ ಹಬ್ಬ. ಈ ಹಬ್ಬದದಿನ ಜಪಾನಿಗಳು ಬಗೆ ಬಗೆಯ ಗುಂಗಿ ಹುಳಗಳನ್ನು ಕೊಂಡು ಉದ್ಯಾನವನಗಳಲ್ಲಿ ಅವನ್ನು ಪಂಜರದಿಂದ ಮುಕ್ತ ಮಾಡುತ್ತಾರೆ. ಸ್ವಾತಂತ್ರ್ಯ ದೊರೆತ ಸಂಭ್ರಮದಲ್ಲಿ ಗುಂಗಿ ಹುಳಗಳು ಹಾಡತೊಡಗಿದಾಗ ಅವರ ರಸಾಸ್ವಾದನ ಮಾಡಿ ಸಂತೋಷ ಪಡುತ್ತಾರೆ. ಗುಂಗಿ ಹುಳಗಳು ಹಾಗೂ ಅದರಂತೆ ಹಾಡುವ ಇತರ ಕೀಟಕಗಳಿಗೆ ಜಪಾನಿನಲ್ಲಿ ಒಳ್ಳೆಯ ಬೆಲೆಯಿದೆ.


ಕಪ್ಪಾ

ಆದರೆ ಪುಷ್ಪಸಜ್ಜಾ (ಇಕೆ- ಬಾನಾ) ಮತ್ತು ಚಹಾಪಾನ (ಚಾ-ನೊ-ಯು) ಗಳಿಗೆ ಜಪಾನಿಗಳು ದಾರ್ಶನಿಕ ಸ್ವರೂಪವನ್ನಿತ್ತಿದ್ದಾರೆ. ಹೂವಿನ ಪಾತ್ರೆಯಲ್ಲಿ ಹೂಗಳನ್ನಿಡುವಾಗ ಮೂರು ತತ್ತ್ವಗಳ ಸಮೀಕರಣ ಅಗತ್ಯವಿದೆ. ಮನುಷ್ಯ, ಪೃಥ್ವಿ ಮತ್ತು ಸ್ವರ್ಗವೆಂಬವೇ ಈ ಮೂರು ತತ್ತ್ವಗಳು. ಹೂಗಳನ್ನು ಅಂದವಾಗಿಡುವ ಒಂದು ಶೈಲಿಗೆ "ಯೊ" (ನರ) ಎಂದೂ ಇನ್ನೊಂದಕ್ಕೆ "ಇನ್" (ನಾರಿ) ಯೆಂದೂ ಹೆಸರಿದೆ. ಜಪಾನಿ ಕವಿಗಳು ಪುಷ್ಪಗಳನ್ನು ಜಗತ್ತಿಗೆ ಹೋಲಿಸಿದ್ದಾರೆ.

ಜಪಾನಿಗಳ ಕಲಾಕೌಶಲಗಳಲ್ಲಿ ಬೋನ್ಸಾಈ ಎಂಬುದೇ ಅತಿ ವಿಲಕ್ಷಣವಾದದ್ದು. ತೋಟಗಾರಿಕೆಯ ಒಂದು ಅದ್ಭುತ ಚಮತ್ಕಾರವಿದು. ಪೈನ್ ವೃಕ್ಷದಂಥ ವಿಶಾಲ ವೃಕ್ಷವನ್ನು ಚಿಕ್ಕ ಕುಂಡೆಯಲ್ಲಿ ನಡುತ್ತಾರೆ. ಎರಡು ಮೂರು ನೂರು ವರ್ಷಗಳಾದರೂ ಈ ವೃಕ್ಷ ಒಂದು ಒಂದೂವರೆ ಅಡಿಗಿಂತ ಹೆಚ್ಚು ಎತ್ತರ ಬೆಳೆಯುವುದಿಲ್ಲ. (ಚಿತ್ರ ನೋಡಿರಿ.)

ಮಿಯಾ ನೋಶಿವಾದಲ್ಲಿಯ ಕೋಳಿಗಳೂ ಇದೇ ಬಗೆಯ ಅದ್ಭುತಗಳು. ಕುಶಲರಾದ ಜಪಾನಿಗಳು ಬೇರೆ ಬೇರೆ ಬಗೆಯ ಕೋಳಿಗಳ ಮಿಶ್ರ



ಸಂತಾನ ಮೂಲಕ ಈ ಸುಂದರ ಜಾತಿಯನ್ನು ನಿರ್ಮಿಸಿದ್ದಾರೆ. ಈ ಜಾತಿಯ ಕೋಳಿಯ ಬಾಲ ೧೧ ರಿಂದ ೧೬ ಅಡಿ ಉದ್ದವಿರುತ್ತದೆ. ಬಿಳಿ ಬಣ್ಣದ ಮಿಯಾ ನೋಶಿತಾ ಕೋಳಿಯ ಬೆಲೆ ಬಹಳವಿರುತ್ತದೆ. ಈ ಕೋಳಿ ನಡೆಯುವಾಗ ಒಬ್ಬ ಮನುಷ್ಯ ಅದರ ಬಾಲವನ್ನು ಎತ್ತಿ ಹಿಡಿದುಕೊಂಡು ಅದರ ಹಿಂದೆ ನಡೆಯುತ್ತಾನೆ. (ಚಿತ್ರ: ೧೩೯ ನೇ ಪುಟ) ಬಂಗಾರ ಬಣ್ಣದ ಬೇರೆ ಬೇರೆ ಜಾತಿಯ ಮೀನುಗಳನ್ನು ಸೃಷ್ಟಿಸುವುದರಲ್ಲಿಯೂ ಜಪಾನಿಗಳು ತುಂಬ ಕುಶಲರು.

## ಗೈಷಾ

ವಿದೇಶೀಯರ ದೃಷ್ಟಿಯಲ್ಲಿ "ಗೈಷಾ" ಬಾಲಕಿಯರೇ ಜಪಾನಿನ ಕಲಾವಿಲಾಸದ ಶ್ರೇಷ್ಠ ಪ್ರತೀಕವಾಗಿದ್ದಾರೆ. ತುಂಬ ಸುಸಂಸ್ಕೃತರೂ ಸಂಗೀತ-ನೃತ್ಯ ಕುಶಲರೂ ಸುಂದರಿಯರೂ ಆದ ಗೈಷಾ ಬಾಲಕಿಯರಿಗೆ ಜಪಾನಿನ ಸಾರ್ವಜನಿಕ ಜೀವನದಲ್ಲಿ ಮಹತ್ವದ ಸ್ಥಾನವಿದೆ. ಅತ್ಯಂತ ಮಹತ್ವವಾದ ರಾಜಕೀಯ ಮತ್ತು ವಾಣಿಜ್ಯ ವಿಚಾರಗಳನ್ನು ಚರ್ಚಿಸಲು ಜಪಾನಿನ ರಾಜಕಾರಣಿಗಳು, ವ್ಯಾಪಾರಿಗಳು, ಉದ್ದಿಮೆದಾರರು ಗೈಷಾಗೃಹಗಳಿಗೆ ಹೋಗುತ್ತಾರೆ. ಗೈಷಾ ಬಾಲಿಕೆಯರ ಎದುರಿನಲ್ಲಿಯೆ ಚರ್ಚೆ ನಡೆಯುತ್ತದೆ. ಆದರೆ ಅದರೊಳಗಿನ ಒಂದೇ ಒಂದು ಅಕ್ಷರ ಕೂಡ ಸ್ಫೋಟವಾಗುವುದಿಲ್ಲ. ಗೈಷಾ ಹುಡುಗಿಯರು ಗಿರಾಕಿಗಳಿಗೆ ಅತ್ಯಂತ ನಿಷ್ಠರಾಗಿರುವುದೇ ಇದಕ್ಕೆ ಕಾರಣ.

ಗೇ ಅಂದರೆ ಕಲೆ, ಷಾ ಅಂದರೆ ವ್ಯಕ್ತಿ, ಗೈಷಾ ಎಂದರೆ ಕಲಾವಿದ. ಗೈಷಾ ಬಾಲಿಕೆಯರು ಜಪಾನಿ ಕಲಾಪರಂಪರೆಯ ರಕ್ಷಕರಾಗಿದ್ದಾರೆನ್ನುವುದು ನಿಜ. "ಓಕೋರಿ" ಎಂಬ ಸುಪ್ರಸಿದ್ಧ ಜಪಾನಿ ನೃತ್ಯಕ್ಕೆ ಇವರೇ ಆಚಾರ್ಯರು ಎಂದು ತಿಳಿಯಲ್ಪಟ್ಟಿದೆ. ಗೀತ ಮತು ವಾದ್ಯಗಳ ತಾಳಕ್ಕನುಗುಣವಾಗಿ ಜರುಗುವ 'ಓಕೋರಿ' ನೃತ್ಯ "ನೋ" ನಾಟಕದ ಒಂದು ಅವಿಭಾಜ್ಯ ಅಂಗವಾಗಿದೆ. ಓಕೋರಿ ನೃತ್ಯದಲ್ಲಿ ಕೆಲ ಧಾರ್ಮಿಕ ಕಥೆಗಳನ್ನು ಮುದ್ರೆಗಳ ಮೂಲಕ ಹೇಳುತ್ತಾರೆ.

## ಬಿದಿರು-ಜೀವಾಳ

ಬಿದಿರಿನಿಂದ ಸುಂದರ ವಸ್ತುಗಳನ್ನು ತಯಾರಿಸುವಲ್ಲಿ ಜಪಾನಿಗಳು ಎತ್ತಿದ ಕೈ. ಇತರ ಅನೇಕ ಕುಶಲ ಕೈಗಾರಿಕೆಗಳಂತೆ ಇದು ಕೂಡ ಚೀನದಿಂದ ಜಪಾನಕ್ಕೆ ಬಂದಿರುವುದಾದರೂ ಜಪಾನಿಗಳು ತಯಾರಿಸುವಷ್ಟು ಸುಂದರವಾದ ಹೂವಿನ ಬುಟ್ಟಿಯನ್ನು ತಯಾರಿಸುವುದು ಜಗತ್ತಿನಲ್ಲಿ ಇನ್ನಾರಿಗೂ ಸಾಧಿಸಿಲ್ಲ. ಜಪಾನಿನಲ್ಲಿ ಬಿದಿರನ್ನು ಉಪಯೋಗಿಸುವಷ್ಟು ವಿಧದಲ್ಲಿ ಜಗತ್ತಿನ

ಇನ್ನಾವ ದೇಶದಲ್ಲಿಯೂ ಉಪಯೋಗಿಸುವುದಿಲ್ಲ. ಬಿದಿರಿನಿಂದ ಇವರು ೧,೪೦೦ ಬಗೆಯ ವಸ್ತುಗಳನ್ನು ತಯಾರಿಸುವರು. ಇಲ್ಲಿ ೪೨೦ ಜಾತಿಯ ಬಿದಿರುಗಳಿವೆ. ಇವುಗಳಲ್ಲಿ ಕೆಲವಂತೂ ದಿನಕ್ಕೆ ೨೦ ಇಂಚಿನಷ್ಟು ಬೆಳೆಯುತ್ತವೆ. ಆದ್ದರಿಂದಲೇ ಜಪಾನಿ ಜನರು ಬಿದಿರನ್ನು ಸಮೃದ್ಧಿಯ ಪ್ರತೀಕವೆಂದು ಮನ್ನಿಸುತ್ತಾರೆ. ಬರಗಾಲದ ದಿನಗಳಲ್ಲಿ ಮಾತ್ರ ಬಿದಿರಿಗೆ ಹೂಗಳು ಬಿಡುತ್ತವೆ ಎಂದು ಅವರು ತಿಳಿಯುವುದರಿಂದ ಬಿದಿರಿಗೆ ಹೂವು ಬಿಡುವುದು ಅಶುಭವೆಂದು ಭಾವಿಸುತ್ತಾರೆ.

## ವಂಶದ ನಂದಾದೀಪ

ವಂಶಪರಂಪರೆಯನ್ನು ಅಖಂಡಿತವಾಗಿ ಸಾಗಿಸಿಕೊಂಡು ಹೋಗುವುದು ಪರಮ ಕರ್ತವ್ಯವೆಂದು ಭಾರತೀಯರು ಭಾವಿಸುವಂತೆ ಜಪಾನಿಗಳೂ ಭಾವಿಸುತ್ತಾರೆ. ಆದ್ದರಿಂದ ಗಂಡು ಮಕ್ಕಳಿಲ್ಲದವನು ದತ್ತಕ ತೆಗೆದುಕೊಳ್ಳುತ್ತಾನೆ. ಆದರೆ ದತ್ತಕ ತೆಗೆದುಕೊಳ್ಳುವುದು ಮಗನೆಂದಲ್ಲ, ಅಳಿಯನೆಂದು. ಮಗಳೂ ಇಲ್ಲದಾಗ ಜಪಾನಿ ಗೃಹಸ್ಥ ಯಾರವಾದರೂ ಹುಡುಗಿಯನ್ನು ದತ್ತಕ ತೆಗೆದುಕೊಂಡು ಅವಳಿಗೆ ಲಗ್ನ ಮಾಡಿ ಅಳಿಯನನ್ನು ಮನೆಅಳಿಯನನ್ನಾಗಿ ಮಾಡಿಕೊಳ್ಳುತ್ತಾನೆ.

ಮೃತರ ಆತ್ಮಕ್ಕೆ ಸದ್ಗತಿ ಸಿಗಲೆಂದು ಕಾಳಜಿ ವಹಿಸುವುದರಲ್ಲಿ ಜಪಾನಿಗಳು ಭಾರತೀಯರಿಗಿಂತಲೂ ಒಂದು ಹೆಜ್ಜೆ ಮುಂದೇ ಎನ್ನಬೇಕು. ಅದಕ್ಕೊಂದು ಕಾರಣವೂ ಇದೆ. ಜಪಾನಿನ ಮೂಲಧರ್ಮವಾದ ಶಿಂತೊ ಧರ್ಮದ ಮುಖ್ಯ ಸೂತ್ರ ಪಿತೃಪೂಜೆಯೇ ಆಗಿದೆ. ಹಿಂದುಗಳಂತೆ ಜಪಾನಿಗಳೂ ಪಿತೃಪಕ್ಷ (ಓಬೋನ) ವನ್ನಾಚರಿಸುತ್ತಾರಲ್ಲದೆ ಪಿಂಡಪ್ರದಾನವನ್ನೂ ಮಾಡುತ್ತಾರೆ.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಜಪಾನಿಗಳು ಮಾಡುವ ಪ್ರಯತ್ನಗಳಲ್ಲಿ ಕೆಲವು ಅತ್ಯಂತ ಮನೋರಂಜಕವಾಗಿವೆ. ಪ್ರತಿವರ್ಷ ಜೂನ್ ತಿಂಗಳ ಪ್ರಾರಂಭದಲ್ಲಿ ಟೋಕಿಯೊದಲ್ಲಿನ ನಿಶಿಸುಗಾವೊ ಭಾಗದ ತಿಕೋಕು ಪ್ರಾಥಮಿಕ ಶಾಲೆಯಲ್ಲಿ ಬೌದ್ಧ ಭಿಕ್ಷುಗಳು ಮುರಿದು ಹೋದ ಗೊಂಬೆಗಳಿಗೆ ಸದ್ಗತಿ ದೊರೆಯಲೆಂದು ಪ್ರಾರ್ಥನೆ ಸಲ್ಲಿಸುತ್ತಾರೆ. ೧೯೨೩ ರಿಂದ ಈ ಶಾಲೆಯಲ್ಲಿ ಮುರಿದ ಗೊಂಬೆಗಳ ದವಾಖಾನೆಯಿದೆ. ಇಲ್ಲಿ ಮುರಿದ ಗೊಂಬೆಗಳನ್ನು ದುರಸ್ತಿ ಮಾಡುತ್ತಾರೆ. ದುರಸ್ತಿಮಾಡಲು ಸಾಧ್ಯವಿಲ್ಲದ ಗೊಂಬೆಗಳನ್ನು ಶಾಲೆಯ ಬಯಲಲ್ಲಿ ಹುಗಿಯುತ್ತಾರೆ. ಗೊಂಬೆಗಳನ್ನು ಹುಗಿಯುವ ಪದ್ಧತಿ ೧೯೨೮ ರಲ್ಲಿ ಆರಂಭವಾಯಿತು. ಅಂದಿನಿಂದ ಇದುವರೆಗೆ ಸಹಸ್ರಗಟ್ಟಲೆ ಗೊಂಬೆಗಳು ಹೂಳಲ್ಪಟ್ಟಿವೆ. ಗೊಂಬೆಗಳ ಅಂತ್ಯಸಂಸ್ಕಾರದಲ್ಲಿ ಶಾಲೆಯ ಮಕ್ಕಳೂ ಅವರ ಮಾತೆಯರೂ ಭಾಗವಹಿಸುತ್ತಾರೆ. ಈ ವಿಧಿಯನ್ನು ಅತ್ಯಂತ ಗಂಭೀರವಾಗಿ ಆಚರಿಸುತ್ತಾರೆ. ಭಿಕ್ಷುಗಳು ಮಂತ್ರಪಠಿಸುತ್ತಾರೆ. ಮೃತರ ಆತ್ಮಕ್ಕೆ ಶಾಂತಿ ದೊರೆಯಲೆಂದು ಸರ್ವರೂ ಪರಮಾತ್ಮನಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾರೆ.



ಪ್ರತಿವರ್ಷ ಡಿಸೆಂಬರ್ ೮ ಅಥವಾ ಫೆಬ್ರುವರಿ ೮ ರಂದು ಹುಡುಗಿಯರ ಶಾಲೆಗಳಲ್ಲಿ ಮತ್ತು ಕೆಲ ಜನರ



ಅಸುರ ಬೆಕ್ಕು

ಮನೆಗಳಲ್ಲಿ ಕೂಡ ಮುರಿದ ಸೂಜಿಗಳಿಗೆ ಸದ್ಗತಿ ಸಿಗಲೆಂದು ಪ್ರಾರ್ಥನೆ ಸಲ್ಲಿಸುವರು. ಈ ವಿಧಿಗಾಗಿ ಯಜ್ಞಕುಂಡದಂತೆ ಒಂದು ಚಿಕ್ಕ ಕುಂಡವನ್ನು ರಚಿಸುತ್ತಾರೆ. ಅದಕ್ಕೆ ಮೂರು ಪಾವಟಿಗೆಗಳಿರುತ್ತವೆ. ಎಲ್ಲಕ್ಕೂ ಮೇಲಿನ ಪಾವಟಿಗೆಯ ಮೇಲೆ ಫಲ- ಮಿಠಾಯಿಗಳ ನೈವೇದ್ಯವನ್ನಿಟ್ಟಿರುತ್ತಾರೆ. ನಡುವಿನ ಪಾವಟಿಗೆಯ ಮೇಲೆ ಅಕ್ಕಿ ಹಿಟ್ಟಿನ ಮುದ್ದೆಗಳನ್ನಿಟ್ಟು ಅವುಗಳಲ್ಲಿ ಸೂಜಿಗಳನ್ನು ಚುಚ್ಚಿಡುತ್ತಾರೆ. ಮೂರನೆಯ ಪಾವಟಿಗೆಯ ಮೇಲೆ ಹೊಲಿಗೆಯ ಇತರ ಸಾಮಾನುಗಳು ಪ್ರದರ್ಶಿಸಲ್ಪಡುತ್ತವೆ. ಧೂಪದೀಪಾದಿಗಳ ನಂತರ ಮಂತ್ರ ಪಠನೆಯಾಗುತ್ತದೆ.

## ಅಮರ ಬೆಕ್ಕು

ಟೋಕಿಯೊದ ತಾಇಶೀನ ಮಂದಿರದಲ್ಲಿ ಸಮಿಸೇನ್ ನಿರ್ಮಾತ ಇಶಿಮುರಾನ ಗೋರಿಯ ಪಕ್ಕದಲ್ಲಿ ಸುಪ್ರಸಿದ್ಧ ಬೆಕ್ಕು ತಾಮಾ- ಚಾನನನ್ನು ಹುಗಿದಿದ್ದಾರೆ. ತಾಮಾ-ಚಾನ ೧೯೫೫ ರ ಅಕ್ಟೋಬರಿನಲ್ಲಿ ಸತ್ತಿತು. ಅದರ ಅಂತ್ಯಸಂಸ್ಕಾರ ಜೋಜೋಇ ಮಂದಿರದ ಮುಖ್ಯ ಅರ್ಚಕನ ಅಧ್ಯಕ್ಷತೆಯಲ್ಲಿ ಜರುಗಿತು. ೨೦ ಜನ ಪುರೋಹಿತರು ಈ ಸಂಸ್ಕಾರದಲ್ಲಿ ಭಾಗವಹಿಸಿದ್ದರು ಈ ಬೆಕ್ಕಿನ ಅಂತ್ಯಸಂಸ್ಕಾರಕ್ಕಾಗಿ ೪,೦೦೦ ಯೆನ್‌ಗಳು ಖರ್ಚಾದವು. ಇದರ ಶವಕ್ಕೆ ಲಂಕ್ಕಿಂತಲೂ ಹೆಚ್ಚು ಪುಷ್ಪಹಾರಗಳನ್ನು ತೊಡಿಸಿದ್ದರು. ಈ ಭಾಗ್ಯಶಾಲಿ ಬೆಕ್ಕಿನ ಯಜಮಾನ ತೋಮಿಜುರೊ ಕುಮಾಜವಾ ಸಮಿಸೇನ್ ವಾದ್ಯಗಳ ದೊಡ್ಡ ವ್ಯಾಪಾರಿಯಾಗಿದ್ದ. ಆತ ಬೆಕ್ಕಿನ ಹೆಸರಿನಲ್ಲಿ ಪೋಸ್ಟ್ ಆಫೀಸಿನಲ್ಲಿ ೧,೦೦೦ ಯೆನ್‌ಗಳನ್ನಿಟ್ಟಿದ್ದ. ಈ ಹಣವನ್ನು ಬೆಕ್ಕಿನ ಅಂತ್ಯಸಂಸ್ಕಾರಕ್ಕೆ ಉಪಯೋಗಿಸಲಾಯಿತು. ಕುಮಾಜವಾನ ಮಿತ್ರರು ಕೂಡಿಸಿಕೊಟ್ಟಿರುವ ೪೦೦ ಯೆನ್ನುಗಳ ಸಹಾಯದಿಂದ ತಾಮಾ-ಚಾನ

ಬೆಕ್ಕಿನ ಗೋರಿಯ ಮೇಲೆ ಪ್ರತಿನಿತ್ಯ ಮುಂಜಾನೆ ಹಾಲು ಅನ್ನದ ತಟ್ಟೆಯನ್ನಿಡುತ್ತಾರೆ.

ಮಿನೋಬು ಪರ್ವತದ ಮೇಲಿರುವ ನಿಚಿರೇನ ಮಂದಿರದಲ್ಲಿ ಒಂದು ಕಂಚಿನ ಪ್ರತಿಮೆಯಿದೆ. ಅದು ಸತ್ತ ಬೆಕ್ಕು ಮತ್ತು ನಾಯಿಗಳ ಆತ್ಮದ ಪ್ರತಿನಿಧಿ ಎಂದು ಜಪಾನಿನ ಜನ ತಿಳಿಯುತ್ತಾರೆ. ಈ ಪ್ರತಿಮೆ ೭ ಅಡಿ ಎತ್ತರವಿದ್ದು ೧೬೦೦ ಪೌಂಡು ಭಾರವಿದೆ. ಸಮಿಸೇನ ವಾದ್ಯಕ್ಕಾಗಿ ಬೇಕಾಗುವ ದಾರ ಮತ್ತು ಚರ್ಮಕ್ಕಾಗಿ ಪ್ರತಿ ವರ್ಷವೂ ಸಹಸ್ರಾರು ಬೆಕ್ಕುಗಳು ಮತ್ತು ನಾಯಿಗಳ ಕೊಲೆಯಾಗುತ್ತದೆ. ಅನೇಕ ವರ್ಷಗಳ ಕಾಲ ಹೀಗೆ ನಡೆದಿದ್ದಾಗ ಸಮಿಸೇನ ನಿರ್ಮಾಪಕ ಸಂಘದ ಅಧ್ಯಕ್ಷನಿಗೆ, ಈ ಎಲ್ಲ ಬೆಕ್ಕು ನಾಯಿಗಳ ಆತ್ಮಗಳು ತಮ್ಮ ಕೊಲೆಯ ಸೇಡನ್ನು ತೀರಿಸಿಕೊಳ್ಳಬಯಸಿದರೇನು ಗತಿ ಎಂಬ ವಿಚಾರ ಬಂತು. ಆದ್ದರಿಂದಲೇ ನಾಯಿಯ ಮುಖವನ್ನು ಹೋಲುವ ಮುಖವುಳ್ಳ ಈ ಕಂಚಿನ ಪ್ರತಿಮೆಯು ತಯಾರಿಸಲ್ಪಟ್ಟಿತು. ನಾಯಿಯ ಅಪ್ಪುಗೆಯಲ್ಲಿ ಒಂದು ಬೆಕ್ಕು ಕುಳಿತಿದೆ ನಾಯಿಗೆ ಬೌದ್ಧ ಭಿಕ್ಷುವಿನ ಹಾಗೂ ಬೆಕ್ಕಿಗೆ ಭಿಕ್ಷುಣಿಯ ಬಟ್ಟೆಗಳನ್ನು ತೊಡಿಸಿದ್ದಾರೆ. ನಾಯಿಯ ತಲೆಯ ಮೇಲೆ ಭಗವಾನ್ ಬುದ್ಧನ ಸಣ್ಣ ಮೂರ್ತಿಯಿದೆ.

ಯುಮೋತೋದಲ್ಲಿ ಒಂದು ಸರೋವರದ ದಂಡೆಯ ಮೇಲೆ ಸರ್ಪಗಳ ಸ್ಮಾರಕವಿದೆ. ಒಬ್ಬ ಪೂಜಾರಿ ಸುಮಾರು ನೂರು ವರ್ಷಗಳ ಹಿಂದೆ ಈ ಸ್ಮಾರಕವನ್ನು ರಚಿಸಿದನು. ಆ ಸಮಯದಲ್ಲಿ ಆ ಪ್ರಾಂತದಲ್ಲಿ ಸರ್ಪಗಳ ಹಾವಳಿ ಬಹಳವಿತ್ತೆಂದು ಹೇಳುತ್ತಾರೆ. ಜನ ಸಂತ್ರಸ್ತರಾಗಿ ಪೂಜಾರಿಯ ಮರೆ ಹೊಕ್ಕು ಸರ್ಪಗಳಿಂದ ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಂಡರು. ಸರ್ಪಗಳ ಹೃದಯ ಪರಿವರ್ತನೆ ಮಾಡಲು ಮತ್ತು ಅವು ಬೇರೆ ಕಡೆ ಹೋಗುವಂತೆ ಮಾಡಲು ಪೂಜಾರಿ ಹಗಲು ರಾತ್ರಿ ಪ್ರಾರ್ಥನೆ ಮಾಡಿದ. ಕೊನೆಗೆ ಅವನ ಪ್ರಾರ್ಥನೆಗಳು ಮಾನ್ಯವಾಗಿ ಸರ್ಪಗಳ ಹಾವಳಿ ನಿಂತಿತು. ಅವುಗಳಲ್ಲಿ ಹೆಚ್ಚಿನವು ಓಡಿಹೋದವು. ಉಳಿದಿದ್ದವುಗಳು ಕೂಡ ಜನರನ್ನು ಪೀಡಿಸುವುದನ್ನು ಬಿಟ್ಟುಕೊಟ್ಟವು. ಸರ್ಪಗಳ ಈ ಉಪಕಾರಕ್ಕೆ ಕೃತಜ್ಞತೆ ತೋರಲೆಂದು ಪೂಜಾರಿ ಅವುಗಳ ಸ್ಮಾರಕವನ್ನು ರಚಿಸಿದ. ಆದರೆ ಜಪಾನಿಗಳಿಗೆ ಹಾವಿನ ಮಾಂಸವೆಂದರೆ ಬಲು ಪ್ರೀತಿ. ಹಾವಿನ ಮಾಂಸವನ್ನು ಔಷಧಿಗಾಗಿಯೂ ಉಪಯೋಗಿಸುತ್ತಾರೆ. ಟೋಕಿಯೋ ಒಂದರಲ್ಲೇ ೧೯೩೩ರಲ್ಲಿ ಪ್ರತಿ ವಾರ ೨,೦೦೦ದಂತೆ ಹಾವುಗಳ ಮಾರಾಟವಾಯಿತು.

ನಾಗಾಸಾಕಿಯ ಶಾಇಶಿನ ಮಂದಿರದಲ್ಲಿ ನಾಯಿ, ಬೆಕ್ಕು ಮತ್ತು ಸಾಕಿದ ಮೀನುಗಳನ್ನೂ ಹೂಳುತ್ತಾರೆ. ಈ ಪ್ರಾಣಿಗಳ ಶವ ಸಂಸ್ಕಾರಕ್ಕಾಗಿ ಟೋಕಿಯೊ ನಗರಸಭೆ ಕೂಡ ಧನ ಸಹಾಯ ಮಾಡುತ್ತದೆ. ದೊಡ್ಡ ನಾಯಿಯಾದರೆ ೨ ರಿಂದ ೫, ಮಧ್ಯಮ ಆಕಾರದ್ದಾದರೆ ೧॥, ಮರಿಯಾದರೆ ೧ ಯೆನ್ ಮತ್ತು ಬೆಕ್ಕಾದರೆ ೭೫ ಸೆನ್‌ಗಳಷ್ಟು ಸಹಾಯವನ್ನು ನಗರಸಭೆ ಕೊಡುತ್ತದೆ.

ಯಾವ ವಸ್ತುವೇ ಆಗಲಿ ಅಥವಾ ಪ್ರಾಣಿಯೆ ಆಗಲಿ, ಅದರಿಂದ ಲಾಭವಾಗುತ್ತಿದ್ದರೆ ಜಪಾನಿಗಳು ಅದರ ಸ್ಮೃತಿದಿನವನ್ನಾಚರಿಸುತ್ತಾರೆ. ಜಪಾನಿ ಚಿತ್ರಗಳ ಬ್ಲಾಕಿಗಾಗಿ ಚೆರಿ ಗಿಡಗಳ ಕಟ್ಟಿಗೆಯನ್ನು ಉಪಯೋಗಿಸಿದ್ದರಿಂದ ೧೯೩೩ರ ಎಪ್ರಿಲ್ ೧ ರಂದು ಚೆರಿ ಗಿಡಗಳ ಸ್ಮೃತಿದಿನವನ್ನಾಚರಿಸಿದರು.

೧೯೩೨, ಮೇ ೨೧ ರಂದು ಜಪಾನಿನ ಸುಪ್ರಸಿದ್ಧ ರೇಶಿಮೆ ವ್ಯಾಪಾರಿ ಕಿಜಮಾ ಎಂಬಾತ ಟೋಕಿಯೋದ ಅಸಾಕುಸಾ ಕ್ಯಾನೋನ ಮಂದಿರದಲ್ಲಿ ಅದು ವರೆಗೆ ಕೊಲ್ಲಲ್ಪಟ್ಟ ಸಮಸ್ತ ರೇಶಿಮೆ ಹುಳಗಳ ಆತ್ಮಕ್ಕೆ ಸದ್ಗತಿ ದೊರೆಯಲೆಂದು ಪ್ರಾರ್ಥನೆಗಳನ್ನು ಮಾಡಿಸಿದ.

೧೯೩೨, ಮಾರ್ಚ್ ೨೨ರಂದು ಮೀನುಗಾರರ ಸಂಘವು ಮೀನುಗಳ ಶ್ರಾದ್ಧವನ್ನಾಚರಿಸಿತಾದರೆ ಅದೇ ವರ್ಷ ನವೆಂಬರ ೬ ರಂದು ಟೋಕಿಯೋದ ಹಿಬಿಯಾ ಉದ್ಯಾನದಲ್ಲಿ ಜಪಾನಿನ ಪುಷ್ಪ ವ್ಯಾಪಾರಿಗಳು ನವೆಂಬರಿನ ಪುಷ್ಪ ಪ್ರದರ್ಶನದಲ್ಲಿ ಉಪಯೋಗಿಸಿದ ಗುಲದಾವುಬಿ ಹೂವುಗಳಿಗಾಗಿ ಶ್ರದ್ಧಾಂಜಲಿಯನ್ನರ್ಪಿಸಿದರು.

ಜಪಾನಿಗಳು ಗುಲದಾವುಬಿ ಹೂಗಳನ್ನು ತಿನ್ನುತ್ತಾರೆ. ಆದರೆ ಅವು ರುಚಿಕರವಾಗಿವೆಯೆಂದಲ್ಲ. ಊಟದ ತಾಟಿನಲ್ಲಿ ಈ ಹೂಗಳ ಎಸಳುಗಳನ್ನಿಟ್ಟರೆ ತುಂಬ ಶೋಭಾಯಮಾನವಾಗಿರುವುದೆಂದು ಅವರು ಅವುಗಳನ್ನು ತಿನ್ನುತ್ತಾರೆ.

## ಕಾಣಿಕೆ

ಕಾಣಿಕೆಗಳನ್ನು ಕೊಡ-ತೆಗೆದುಕೊಳ್ಳುವ ಜಪಾನಿ ನಿಯಮಗಳು ಬಲು ಜಟಿಲವಾಗಿವೆ. ಕಾಣಿಕೆಯ ಮೇಲೆ ಎಂಥ ಕಾಗದ ಸುತ್ತಬೇಕು, ಅದನ್ನು ಯಾವ ಬಣ್ಣದ ನೂಲು ಅಥವಾ ರಿಬ್ಬನ್ನಿನಿಂದ ಯಾವ ರೀತಿಯಲ್ಲಿ ಕಟ್ಟಬೇಕು ಎಂಬುದಕ್ಕಾಗಿ ನಿಶ್ಚಿತ ನಿಯಮಗಳಿವೆ. ಕಾಣಿಕೆಗಳನ್ನು ತಾಟಿನಲ್ಲಿಟ್ಟು ಅರಿವೆಯನ್ನು ಹೊದಿಸಿ ಕಳಿಸಿಕೊಡುತ್ತಾರೆ. ತಾಟನ್ನು ಹಿಂತಿರುಗಿಸುವಾಗ ಅದರಲ್ಲಿ ಬೆಂಕಿ ಪೆಟ್ಟಿಗೆ ಅಥವಾ ಬರೆಯುವ ಕಾಗದವನ್ನಿಟ್ಟು ಕಳಿಸುತ್ತಾರೆ. ಹಾಗೆ ಮಾಡದಿದ್ದರೆ ಕಾಣಿಕೆ ಸ್ವೀಕರಿಸಿದವರು ಇನ್ನು ಮುಂದೆ ತಾವು ಕಾಣಿಕೆ ಸ್ವೀಕರಿಸಬಯಸುವುದಿಲ್ಲ ಎಂದಂತಾಗುತ್ತದೆ. ಅಲ್ಲದೆ ಖಾಲಿ ತಾಟನ್ನು ಕೇವಲ ಭಿಕ್ಷುಕರು ಮಾತ್ರ ಹಿಂತಿರುಗಿಸುತ್ತಾರೆ ಎಂದು ಜಪಾನಿಗಳನ್ನುತ್ತಾರೆ.

ಜಪಾನಿನ ಹೋಟೆಲುಗಳಲ್ಲಿ "ಟಿಪ್" (ಇನಾಮು) ನ್ನು ಮಾಣಿಗಳಿಗೆ ಕೊಡದೆ ಮಾಲಕನಿಗೆ ಕೊಡುತ್ತಾರೆ. ಈ "ಟಿಪ್" ಗೆ "ಚಾದಾಯಿ" (ಚಹಾದ ರೊಕ್ಕ) ಎನ್ನುತ್ತಾರೆ. ಸುಂದರ ಚಿತ್ರ ಬಿಡಿಸಿರುವ ಲಕೋಟೆಯಲ್ಲಿ "ಟಿಪ್" ಇಡುತ್ತಾರೆ. "ಟಿಪ್" ಗೆ ಪ್ರತಿಯಾಗಿ ಹೋಟೆಲ್ ಮಾಲಕನು ಗಿರಾಕಿಗಳಿಗೆ "ಪಿಕ್ಚರ್ ಕಾರ್ಡ್" ಅಥವಾ ಬೇರೆ ಕಾರ್ಡುಗಳನ್ನು ಕೊಡುತ್ತಾನೆ.

ಕೆಲ ವಿಷಯಗಳಲ್ಲಿ ಜಪಾನಿಗಳು ಇತರರಿಗಿಂತ ತೀರ ಭಿನ್ನವಾಗಿದ್ದಾರೆ. ಅಲ್ಲಿ ಕಸೂತಿಯ ಕೆಲಸವನ್ನು ಹೆಚ್ಚಾಗಿ ಗಂಡಸರೇ ಮಾಡುತ್ತಾರೆ. ಅಲ್ಲಿ ಅರಮನೆಯನ್ನು ಕಟ್ಟುವಾಗ ಮೊದಲು ಮೇಲ್ಛಾವಣಿ ಕಟ್ಟಿ ಆ ಮೇಲೆ ಉಳಿದ ಭಾಗ ಕಟ್ಟುತ್ತಾರೆ. ಚಹದಲ್ಲಿ ಸಕ್ಕರೆ ಹಾಕಿ ಕದಡುವಾಗ ಬಲದಿಂದ ಎಡಕ್ಕೆ ತಿರುಗಿಸುವ ಬದಲು ಚಮಚೆಯನ್ನು ಎಡದಿಂದ ಬಲಕ್ಕೆ ತಿರುಗಿಸುತ್ತಾರೆ. ಎಣಿಕೆ ಮಾಡುವಾಗ ಕಿರಿ ಬೆರಳಿನಿಂದ ಎಣಿಸುವ ಬದಲು ಹೆಬ್ಬೆರಳಿನಿಂದ ಎಣಿಸುತ್ತಾರೆ. ಅವಳಿ ಮಕ್ಕಳಲ್ಲಿ ಕಡೆಗೆ ಹುಟ್ಟಿದವನೇ ಜ್ಯೇಷ್ಠನೆಂದು ತಿಳಿಯುತ್ತಾರೆ. ಮೇಜವಾನಿಯಲ್ಲಿ ಅತಿಥಿಗಳಿಗೆ ಅವರು ಹೋಗುವಾಗ ಕಾಗದದ ಚೀಲಗಳಲ್ಲಿ ಪಕ್ವಾನ್ನಗಳನ್ನು ಕಟ್ಟಿಕೊಡುತ್ತಾರೆ. (ಅವರ ಮನೆಯವರಿಗೂ ಖಾದ್ಯ ಮುಟ್ಟಲೆಂದು). ಮೃತ ಸಾಮ್ರಾಟನ ದೇಹವನ್ನು ಕುದುರೆ ಗಾಡಿಯಲ್ಲಿ ಸ್ಮಶಾನಕ್ಕೊಯ್ಯದೆ ಎತ್ತಿನ ಗಾಡಿಯಲ್ಲಿ ಒಯ್ಯುತ್ತಾರೆ. ಮದುವೆಯ ಉಪಹಾರಾದಿ ಸಮಾರಂಭ ವಧುವಿನ ಮನೆಯಲ್ಲಿ ನಡೆಯುವುದಿಲ್ಲ. ವರನ ಮನೆಯಲ್ಲಿ ನಡೆಯುತ್ತದೆ.

## ವೀರ ಪರಂಪರೆ

ಜನರಲ್ ಮೆಕಾರ್ಥರರ ಸೈನಿಕ ಆಡಳಿತದ ನಂತರ ಜಪಾನಿನಲ್ಲಿ ಮೊದಲಿನಂತೆ ಸಮ್ರಾಟನ ಸ್ಥಾನವಿರದಿದ್ದರೂ ಜಪಾನಿನಲ್ಲಿ ಜನರಿಗೆ ಇಂದಿಗೂ ಆತನಲ್ಲಿ ತುಂಬ ಭಕ್ತಿ ಮತ್ತು ನಿಷ್ಠೆಯಿದೆ. ಜಪಾನಿಗಳು ತಮ್ಮ ಸಮ್ರಾಟನಿಗಾಗಿ ನಗನಗುತ್ತ ಪ್ರಾಣಾರ್ಪಣ ಮಾಡುವರು. ಯುದ್ಧ

ಕಾಲದಲ್ಲಿ ರಣರಂಗಕ್ಕೆ ತೆರಳುವಾಗ ಸೈನಿಕರು ಒಬ್ಬರಿಗೊಬ್ಬರು ತಣ್ಣೀರಿನ ಗ್ಲಾಸುಗಳನ್ನು ಕೊಡುತ್ತಾರೆ. ಈ ನೀರು ಕುಡಿದವರಲ್ಲಿ ಯಾರಾದರೂ ರಣಭೂಮಿಯಲ್ಲಿ ಮಡಿದರೆ ಉಳಿದವರು ಅವನ ಮನೆಯವರಿಗೆ ಇಂಥವನು ಸಮ್ರಾಟನ ಸೇವೆಯಲ್ಲಿ ಪ್ರಾಣಾರ್ಪಣ ಮಾಡಿ ಅಮರಯಶವನ್ನು ಸಂಪಾದಿಸಿದ ಎಂದು ತಿಳಿಸುತ್ತಾರೆ. ಸಮ್ರಾಟ ಕೂಡ ಇಂಥ ವೀರ ಪ್ರಜೆಯ ಅಂತ್ಯ ಸಂಸ್ಕಾರ ಕಾಲದಲ್ಲಿ ಸ್ವತಃ ಹಾಜರಿರುತ್ತಾನೆ. ಇದು ಜಪಾನಿಯೊಬ್ಬಗೆ ಸಿಗಬಹುದಾದ ಅತಿ ಶ್ರೇಷ್ಠ ಗೌರವ ಎಂದು ತಿಳಿಯಲ್ಪಡುತ್ತದೆ.

ಜಪಾನಿ ಸೈನ್ಯದ ನಿಯಮವೂ ವಿಚಿತ್ರವೇ. ಸೈನಿಕನು ಎಂಥ ಸ್ಥಿತಿಯಲ್ಲಿಯೂ ಶತ್ರುವಿನ ಸೆರೆಯಾಳಾಗಬಾರದು ಎಂದೊಂದು ನಿಯಮವಿದೆ. ಸೆರೆಸಿಕ್ಕ ಸೈನಿಕನನ್ನು ದಂಡಿನ ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸುತ್ತಾರೆ. ಈ ನಿಯಮದಿಂದ ಎಷ್ಟೋ ಸಲ ಅತ್ಯಂತ ವಿಚಿತ್ರ ಪ್ರಸಂಗಗಳುದ್ಭವಿಸುತ್ತವೆ. ೧೯೩೨ ರಲ್ಲಿ ಜರುಗಿದ ಒಂದು ಸಂಗತಿಯನ್ನು ಉದಾಹರಣೆಗೆ ಹೇಳಬಹುದು. ಶಾಂಘಾಯಿಗೆ ಸಮೀಪವಾಗಿರುವ ಚೇಪಾಯಿ ದಾಳಿಯಲ್ಲಿ ಮೇಜರ್ ಕೂಗಾ ಎಂಬ ಜಪಾನಿ ಸೈನ್ಯಾಧಿಕಾರಿ ಮರಣ ಹೊಂದಿದನು. ಚೀನೀಯರು ಅವನ ಶವವನ್ನು ಜಪಾನಿ ರೆಡ್ ಕ್ರಾಸಿಗೆ ಕೊಟ್ಟರು. ಶವವನ್ನು ಅಂತ್ಯ ಸಂಸ್ಕಾರಕ್ಕೆಂದು ಒಯ್ಯುತ್ತಿದ್ದಾಗ ಮೇಜರ ಇನ್ನೂ ಬದುಕಿದ್ದಾನೆಂಬ ಸಂಶಯ ಬರಲು ರೆಡ್‌ಕ್ರಾಸಿನವರು ಅವನನ್ನು ಸೈನಿಕ ದವಾಖಾನೆಗೆ ಒಯ್ದರು. ಅಲ್ಲಿ ಮೇಜರನಿಗೆ ಹೋದ ಪ್ರಾಣ ತಿರುಗಿ ಬಂತು. ಆತ ಗುಣಹೊಂದಿದ. ಆದರೆ ಜಪಾನಿ ನಿಯಮದಂತೆ ಅವನನ್ನು ಸೈನಿಕ ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸಿದರು. ಆತ ಶತ್ರುಗಳಿಗೆ ಸೆರೆ ಸಿಕ್ಕಿರಲಿಲ್ಲವೆ? ಇದರಿಂದ ವ್ಯಥಿತನಾದ ಮೇಜರ್ ಕೂಗಾ ಆತ್ಮಹತ್ಯೆ ಮಾಡಿಕೊಂಡ.

ಪ್ರತಿಷ್ಠಿತ ಮುದುಕರು ರಾಜದರಬಾರದಲ್ಲಿ ಬಡಿಗೆ ಹಿಡಿದು ಬರಲು ಸಮ್ರಾಟನು ಅಪ್ಪಣೆ ಕೊಡುತ್ತಾನೆ. ಬಡಿಗೆಯನ್ನು ಅರಮನೆಯಿಂದಲೆ ಒದಗಿಸುತ್ತಾರೆ. ಇಂಥ ಬಡಿಗೆ ದೊರೆತರೆ ಅದೊಂದು ಅಪೂರ್ವ ಸನ್ಮಾನ ಎಂದು ಜಪಾನಿಗಳ ಭಾವನೆಯಿದೆ.

ಜಪಾನಿಗಳು ತುಂಬ ವಿನೋದಪ್ರಿಯರು. ಇತರ ದೇಶಗಳಲ್ಲಿ ಬೋಳುತಲೆಯವರು ಟೊಪ್ಪಿಗೆ ಮುಂತಾದವುಗಳಿಂದ, ಬೊಕ್ಕ ತಲೆ ಮುಚ್ಚಿಕೊಳ್ಳಲೆತ್ನಿಸುತ್ತಾರೆ. ಆದರೆ ಜಪಾನಿನಲ್ಲಿ ಒಂದು "ಖಲ್ವಾಟ ಸಂಘ" ವೇ ಇದೆ. ಮೀಶೆಯವರ ಒಂದು ಸಂಘವೂ ಇದೆ. ಉದ್ದ ಮೀಸೆಯುಳ್ಳಾತ ಜಗತ್ತಿನ ಯಾವ ದೇಶದವನೇ ಇರಲಿ, ಅವನು ಈ ಸಂಘದ ಸದಸ್ಯನಾಗಬಹುದು. ಸದಸ್ಯತ್ವದ ಅರ್ಜಿಯಲ್ಲಿ ಮೀಶೆಯ ಉದ್ದ ಇತ್ಯಾದಿಗಳನ್ನು ಬರೆದು ಜೊತೆಗೆ ತನ ಸಹಿಯಿರುವ ಫೋಟೋ ಕಳಿಸಿಕೊಡಬೇಕಾಗುತ್ತದೆ. ಈ ಸಂಘವು ಟೋಕಿಯೋದ ಫುಜಿ ಹೊಟೆಲ್‌ನಲ್ಲಿ ಮೀಶೆ ಮನುಷ್ಯರ ಚಿತ್ರಗಳ ಒಂದು ಪ್ರದರ್ಶನವನ್ನೂ ತೆರೆದಿಟ್ಟದೆ. *



ಮದುವೆಗೆ ಮೊದಲು ಮಕ್ಕಳನ್ನು ಹೇಗೆ ಸಾಕಬೇಕೆಂಬ ಬಗ್ಗೆ ನನ್ನ ಹತ್ತಿರ ಆರು ಸಿದ್ಧಾಂತಗಳಿದ್ದವು. ಈಗ ಆರು ಮಕ್ಕಳಿವೆ, ಒಂದೂ ಸಿದ್ಧಾಂತ ಇಲ್ಲ.

ಲಾರ್ಡ್ ರೊಚೆಸ್ಟರ್

